ಡಿಸೆಂಬರ್ 1998 ಬೆಲೆ ರೂ. 10

# ಜೀವನದಿ

ಸಮಗ್ರ ಕುಟುಂಬ ಆರೋಗ್ಯ ಮಂಜರಿ



## ಬಣ್ಣಗೆಟ್ಟ ಹಲ್ಲುಗಳು

## ಗಂಡಿನೊಳಗೊಂದು ಹೆಣ್ಣು !

## ಏಡ್ಸ್ ತಡೆಗಟ್ಟಲು 'ಪೆಪ್' ಚಿಕಿತ್ಸೆ



## ನರವರಾಹ!

# ಚಿತ್ರ - ಪಾಠ

## ಟೋಪಿ ಧರಿಸುವುದರಿಂದ ಏನು ಉಪಯೋಗ?



ಬೇಸಿಗೆಯಲ್ಲಿ ಸೂರ್ಯನ ಝಳದಿಂದ ರಕ್ಷಿಸುತ್ತದೆ. ಚಳಿಗಾಲದಲ್ಲಿ ಒಡಲನ್ನು ಬೆಚ್ಚಗಿಡುತ್ತದೆ. ಏಕೆಂದರೆ 80% ದೇಹದ ಉಷ್ಣತೆ ತಲೆಯ ಮೂಲಕ ಹೊರಹೊಮ್ಮುತ್ತದೆ. ಉಳಿದದ್ದು ಇಡೀ ದೇಹದಿಂದ! ಟೋಪಿ ಉಷ್ಣತೆಯನ್ನು ಉಳಿಸಿ ನಮ್ಮನ್ನು ಬೆಚ್ಚಗಿಡುತ್ತದೆ.

# ಒಳನಾಡಿ

ಸಂಚಿಕೆ - ೧೧ ಸಂಪುಟ - ೨ ಡಿಸೆಂಬರ್ - ೧೯೯೮



ಾಡಿಮಿಡಿತ ........................ ೪

ೀವಧಾರೆ........................ ೫

ುಚ್ಚು ಕುರಿಯ ರೋಗ ........... ೬

ುಗ್ಧ ಮಕ್ಕಳು .................... ೧೫

ೈದ್ಯವೃತ್ತಿ ಮತ್ತು ಏಡ್ಸ್............ ೨೩

ಒಬ್ಬರಿಂದ ಮತ್ತೊಬ್ಬರಿಗೆ ಬರುವ
ಾಯಿಲೆಗಳು ...................... ೨೯

ಣ್ಣಗೆಟ್ಟ ಹಲ್ಲುಗಳು ............ ೩೧

ಏಡ್ಸ್' ತಡೆಗಟ್ಟಲು 'ಪೆಪ್'
ಚಿಕಿತ್ಸೆ ............................ ೩೩



ತಿರುಗು ಮುರುಗಾದ ಲಿಂಗ! ....೧೯


ಮುಖದ ಸೌಂದರ್ಯ............೪೪

ಬಾರ್ಬಿಚುರೇಟ್ಸ್ ................ ೩೮

ಕಾನೂನು ........................ ೪೦

ಆರೋಗ್ಯಕ್ಕಾಗಿ ಆಡುಸೋಗೆ....... ೪೨

ಫಿಟ್ಸ್ ............................ ೪೫

ದೂರ ಚಿಕಿತ್ಸೆ ...................... ೪೯

ಚಿಂತನ............................ ೫೧

ನೋಬಲ್-ವಯಾಗ್ರ-ನೆಟ್ರಿಕ್
ಆಕ್ಸೈಡ್ .......................... ೫೨

ಆಕ್ಯುಪಂಕ್ಚರ್...................... ೫೬


ನರವರಾಹಗಳು ................೮


ಹೆಂಡತಿಗೂ ಚಿಕಿತ್ಸೆ ..................೫೮


ಬಟಾಣಿ ಕಾಳು .................೨೭

# ನಾಡಿ ಮಿಡಿತ

### ಕಳೆಗುಂದುತ್ತಿರುವ ಕುರುಹುಗಳು

ಕಾಲಚಕ್ರದಲ್ಲಿ ಕಳೆಗುಂದುತ್ತಿರುವ ಪ್ರಾಚೀನ ಕುರುಹುಗಳು ಅದೆಷ್ಟೋ. ಅದರಲ್ಲಿ ಮಣ್ಣಿನ ಮಡಕೆಗಳು ಒಂದು. ಇಂದಿನ ಆಡಂಬರದ, ಅಬ್ಬರದ ಬದುಕಿನಲ್ಲಿ ಮಡಕೆಗಳನ್ನು ಬಳಸುವುದು ಎಂದರೆ ಒಂದು ತರಹದ ಮುಜುಗರ, ಅಸಹ್ಯ ಎಂಬ ಭಾವನೆ ನಮ್ಮಲ್ಲಡಗಿದೆ. ಇದು ನಮ್ಮ ಮೂಢತನ.

ಪ್ರಧಾನ ಸಂಪಾದಕರಾದ ಸ.ಜ. ನಾಗಲೋಟಿಮಠ ಅವರು ''ಮರಳಿ ಮಣ್ಣಿನ ಮಡಕೆಗೆ'' ಎಂಬ ಶೀರ್ಷಿಕೆಯ ಮೂಲಕ ನಮ್ಮ ಮೂಢತನಕ್ಕೆ ವೈಜ್ಞಾನಿಕ ನಿಲುವನ್ನು ಹೊಂದಿದ, ಮಡಕೆಯ ಪ್ರಾಮುಖ್ಯತೆಗೆ ಪ್ರಖರತೆಯನ್ನು ಜೀವಧಾರೆಯಲ್ಲಿ ನಿರೂಪಿಸಿದಕ್ಕಾಗಿ ಧನ್ಯವಾದಗಳು. ನಿಮ್ಮ ಈ ನಿಲುವು ಬನ್ನಿಸಲಸದಳ.

**ಅನಿತಾ. ವ್ಹಿ. ಪಾಟೀಲ ಜಾಲಿಹಾಳ**
**ಲಕ್ಷ್ಮಣ ಚಿತ್ತಕೋಟಿ ಜಮಗಾ**

### ಉತ್ತಮ ಸಂಚಿಕೆ

ಆಕರ್ಷಕ ಮುಖಪುಟದೊಂದಿಗೆ ಮೂಡಿಬಂದ 'ಜೀವನಾಡಿ' ಹೊತ್ತು ತಂದ ವೈಜ್ಞಾನಿಕ ವಿಚಾರಗಳು, ಪ್ರಜ್ಞಾವಂತ ಮೌಲ್ಯಗಳು ಪತ್ರಿಕೆಗೆ ಮತ್ತಷ್ಟು ಜೀವಕಳೆ ತರುತ್ತಿದೆ ಎಂದು ಸಂತೋಷವಾಗುತ್ತಿದೆ.

ನವೆಂಬರ್ ತಿಂಗಳಲ್ಲಿ ಮೂಡಿ ಬಂದ 'ರೇಬಿಸ್-ಹುಚ್ಚುನಾಯಿ ಕಡಿದಾಗ', 'ಸೆಕೆಂಡ್ ಒಪೀನಿಯನ್ ರೋಗಿಗೆ ವರದಾನವೆ?' 'ಪದ್ಮಿನಿ ಪರಿಣಯ' 'ಇಚ್ಛಾನುಸಾರ ಗಂಡು-ಹೆಣ್ಣು ಮಕ್ಕಳನ್ನು ಪಡೆಯಬಹುದೇ' ಲೇಖನಗಳು ಪ್ರಜ್ಞಾಹೀನವಾಗುತ್ತಿರುವ ಶ್ರೀಸಾಮಾನ್ಯರಿಗೆ ತಪ್ಪದೇ ಓದುವಂತಹ ಲೇಖನಗಳು. ಜೊತೆಗೆ ಪ್ರತಿ ತಿಂಗಳು ಮೂಡಿ ಬರುವ ''ಮುಗ್ಧ ಮಕ್ಕಳ ಪ್ರಬುದ್ಧ ಪ್ರಶ್ನೆಗಳು'' ಅತ್ಯುತ್ತಮವಾಗಿ ಮೂಡಿಬಂದಿದೆ.

''ಮೂಳೆ ಜೋಡಿಸುವ ನಿಪುಣರನ್ನು'' ನಮ್ಮ ಕನ್ನಡಿಗರಿಗೆ ಪರಿಚಯಿಸಿ, ಅವರ ವಿಳಾಸ, ಹಾಗೂ ಸೂಕ್ತ ಮಾಹಿತಿ ಒದಗಿಸಿದ 'ಜೀವನಾಡಿ'ಗೆ ನನ್ನ ಧನ್ಯವಾದಗಳು.

''ಸೆಕೆಂಡ್ ಒಪೀನಿಯನ್ ರೋಗಿಗೆ ವರದಾನವೇ ?'' ಎಂಬುದು ವರದಾನವೇ ಸರಿ. ಆದರೆ ತಿಳಿಯದ, ಅಜ್ಞಾನಿಗಳಾದ ಶ್ರೀಸಾಮಾನ್ಯರಿಗೆ ಇವೆಲ್ಲ ಗೊತ್ತಿಲ್ಲ. ತಿಳಿದೂ-ತಿಳಿದೂ ಕೆಲವು ವೈದ್ಯರು ತಮ್ಮ ಕೆಲಸದಲ್ಲಿ ಕ್ರಿಯಾಶೀಲರಾಗಿರುವುದಿಲ್ಲ. ಹಣದ ವ್ಯಾಮೋಹಕ್ಕೆ ಬಲಿಯಾಗದೆ, ಮೂಢನಂಬಿಕೆ-ಮೌಢ್ಯಗಳನ್ನು ತೊರೆದು ವೈಜ್ಞಾನಿಕ ದೃಷ್ಟಿಕೋನದಲ್ಲಿ ತಿಳಿಹೇಳುವುದನ್ನು ಮರೆಯಬಾರದು.

**ಕೆ.ಪಿ. ಮಂಜುನಾಥ ಕೆ.ಟಿ. ಹಳ್ಳಿ**

### ಸಸ್ಯ ಸಂಜೀವಿನಿಯಾಗಿ ಜೀವನಾಡಿ

ನಾನು ಜೀವನಾಡಿಯನ್ನು ಪ್ರಾರಂಭದಿಂದ ಪ್ರತಿ ತಿಂಗಳು ತಂದು ಓದುತ್ತಿದ್ದೇನೆ. ಒಂದೊಂದು ತಿಂಗಳಲ್ಲೂ ಕೂಡ ಒಂದೊಂದು. ಬಗೆಯ ಔಷಧ ಸಸ್ಯಗಳ ಪರಿಚಯ ಹಾಗೂ ಉಪಯೋಗ ತಿಳಿಸುತ್ತ ಬಂದಿದ್ದೀರಿ, ಹಾಗೂ ಸೊಪ್ಪು, ಹಣ್ಣುಗಳು, ಕಾಯಿಪಲ್ಯೆಗಳ ಬಗ್ಗೆ ಪರಿಚಯಿಸುತ್ತಾ, ಉಪಯೋಗವನ್ನು ತಿಳಿಸುತ್ತಾ ಬಂದಿದ್ದೀರಿ.

ಆಕಾಶವಾಣಿಯವರು ಬರಿ ಬಾಯಿ ಮಾತಿನಲ್ಲಿ ಸಸ್ಯಗಳ ಉಪಯೋಗ ತಿಳಿಸಿದರು. ಆದರೆ ಅದು ಹೆಚ್ಚು ಕಾಲ ಉಳಿಯಲಿಲ್ಲ. ನೀವುಗಳು ಬರಹ ರೂಪದಲ್ಲಿ ಸಂಚಿಕೆ ಬಿಡುಗಡೆ ಮಾಡಿದ್ದರಿಂದ ವಿದ್ಯಾವಂತರು, ಪ್ರಜ್ಞಾವಂತರು ಓದಿ ಬೇರೆಯವರಿಗೂ ತಿಳಿಸಿ, ಜೀವನ ಪರ್ಯಂತ ಬರುವ ಸಣ್ಣಪುಟ್ಟಗಾಯಗಳು, ಕಾಯಿಲೆಗಳನ್ನು ವಾಸಿಮಾಡಿಕೊಂಡು ಮುಂದೆ ಕಾಯಿಲೆಗಳು ಬರದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಿದ್ದೀರಿ.

ಹಾಗೂ ಪರೀಕ್ಷೆಗೆ ಒಳಪಡದ ತಯಾರಿಸಲ್ಪಟ್ಟ ಔಷಧಿಗಳನ್ನು ಸೇವಿಸಿ ಅಡ್ಡಪರಿಣಾಮ ಹಾಗೂ ರೋಗಗಳಿಗೆ ತುತ್ತಾಗುವುದಕ್ಕಿಂತ ಜೀವನಾಡಿ ಸಂಚಿಕೆಯವರು ತಿಳಿಸಿದ ಔಷಧಿ ಸಸ್ಯಗಳ-ಹಣ್ಣುಗಳ-ಕಾಯಿಪಲ್ಯೆಗಳ ಉಪಯೋಗ ಪಡೆದು, ಆರೋಗ್ಯವನ್ನು ಉತ್ತಮವಾಗಿಟ್ಟುಕೊಳ್ಳುವುದೇ ಒಳ್ಳೆಯದೆನಿಸುತ್ತದೆ. ಇಂತಹ ಸಸ್ಯಗಳ ಉಪಯೋಗದ ಬಗ್ಗೆ ತಿಳಿಸುತ್ತಾ, ಜೀವನಾಡಿ ಸಂಚಿಕೆಯು ಸಸ್ಯ ಸಂಜೀವಿನಿಯಂತೆ ಕಾರ್ಯ ನಿರ್ವಹಿಸಲಿ ಎಂದು ಆರಸುತ್ತಾ, ಇಂತಹ ಸಂಚಿಕೆಗೆ ಪ್ರಧಾನ ಸಂಪಾದಕರಾಗಿ ಕಾರ್ಯ ನಿರ್ವಹಿಸುವ ಸ.ಜ. ನಾಗಲೋಟಿಮಠರವರಿಗೆ ಧನ್ಯವಾದಗಳು.

**ಸಿ. ಪರಮೇಶ್ವರಪ್ಪ ಎಸ್. ಜಿ. ಹಳ್ಳಿ**

### ಉಪಯುಕ್ತ ಚಿಕಿತ್ಸೆ

'ಆಕ್ಯುಪಂಕ್ಚರ್-ಚಿಕಿತ್ಸೆ' ಲೇಖನವು ತುಂಬಾ ಅರ್ಥಪೂರ್ಣವಾಗಿತ್ತು ಮತ್ತು ಉಪಯುಕ್ತವೂ ಆಗಿತ್ತು. ಆಕ್ಯುಪಂಕ್ಚರ್-ಚಿಕಿತ್ಸೆಯ ಬಗ್ಗೆ ವಿವರಿಸುವ ಮೊದಲು ''ಆಕ್ಯುಪಂಕ್ಚರ್'' ಪದದ ಅರ್ಥವನ್ನು ವಿವರಿಸಿ ಅನಂತರ ಚಿಕಿತ್ಸಾ ಪದ್ಧತಿಯ ಬಗ್ಗೆ ತಿಳಿಸಿದ್ದರೆ ತುಂಬಾ ಚೆನ್ನಾಗಿತ್ತು.

(ಆಕ್ಯು=ಸೂಜಿ+ ಪಂಕ್ಚರ್ = ಚುಚ್ಚುವಿಕೆ)

-ಸಂ

**ಎಂ.ಎಲ್. ಮಹದೇವಪ್ಪ ಮಸಗೆ**

### ಮಾನಸಿಕ ಒತ್ತಡ

ಈ ತಿಂಗಳ ಸಂಚಿಕೆಯಲ್ಲಿ ಟಿ.ಟಿ. ಕಸ್ತೂರಿಯವರ ಮಾನಸಿಕ ಒತ್ತಡ ಲೇಖನ ಚೆನ್ನಾಗಿ ಮೂಡಿಬಂತು. ಅದಕ್ಕಾಗಿ ಧನ್ಯವಾದಗಳು.

**ಶಾಮು.ಬಿ. ಪಾಟೀಲ ಬಾಗಲಕೋಟೆ**

### ರೋಹಿಣಿಯ ಪ್ರಕರಣ

ಈಗ ತಮಗೆ ಪತ್ರ ಬರೆಯಲು ಕಾರಣವೇನೆಂದರೇ ನಾನು ನಿಮ್ಮ ಜೀವನಾಡಿ ಪತ್ರಿಕೆಯ ಓದುಗರಲ್ಲೊಬ್ಬ. ದಿನೇ ದಿನೇ ತಮ್ಮ ಪತ್ರಿಕೆ ವೈದ್ಯರಂಗದಲ್ಲಿ ತುಂಬಾ ಜನಪ್ರಿಯತೆ ಹೊಂದುತ್ತಿದೆ. ತುಂಬಾ ಸಂತೋಷ.

**ಡಾ। ಶಿವಾನಂದ ಲಕ್ಕಲಕಟ್ಟಿ**

### ರೋಹಿಣಿಯ ಪ್ರಕರಣ

ನವೆಂಬರ್ ಸಂಚಿಕೆಯ ಮುಖಪುಟ ಲೇಖನ ತುಂಬಾ ಆಕರ್ಷಕವಾಗಿದ್ದು ಮುಖ್ಯವಾಗಿ ಹುಚ್ಚುನಾಯಿ ಕಚ್ಚಿದಾಗ ಲೇಖನ ಬಹಳ ಮಾಹಿತಿಪೂರ್ಣವಾಗಿತ್ತು. ರೇಬಿಸ್ ಬಗ್ಗೆ ಸಂಕ್ಷಿಪ್ತ ಪರಿಚಯ ಹಾಗೂ ಲಕ್ಷಣಗಳ ಬಗ್ಗೆ ಬಹಳ ಚೆನ್ನಾಗಿ ಪರಿಚಯ ಮಾಡಿ ಕೊಟ್ಟಿದ್ದಾರೆ. ಡಾ. ನಾಗಲೋಟಿಮಠರಿಗೆ ಧನ್ಯವಾದಗಳು.

**ಆಯ್. ಬಿ. ಯಾಳಗಿ ಜೈನಾಪೂರ**

# ಜೀವಧಾರೆ



ಪ್ರಧಾನ ಸಂಪಾದಕರು : ಸ. ಜ. ನಾಗಲೋಟಿಮಠ

# ಏಡ್ಸ್ ರೋಗದ - ೧೨ನೆಯ ಜಾಗತಿಕ ಸಮ್ಮೇಳನ

ಏಡ್ಸ್‌ರೋಗದ ೧೨ನೆಯ ಜಾಗತಿಕ ಸಮ್ಮೇಳನ ಕೆಲವೇ ತಿಂಗಳು ಮೊದಲು ಸ್ವಿಝರ್‌ಲ್ಯಾಂಡ್‌ನಲ್ಲಿ ಜರುಗಿತು. ಜಿನೇವಾ ಪಟ್ಟಣದಲ್ಲಿ ಅಂದು ೧೪,೦೦೦ ಜನರಿಗಿಂತ ಅಧಿಕ ಪ್ರತಿನಿಧಿಗಳು ಭಾಗವಹಿಸಿದರು. ಇವರಲ್ಲಿ ವೈದ್ಯರು, ವಿಜ್ಞಾನಿಗಳು, ಸಮಾಜ ಶಾಸ್ತ್ರಜ್ಞರು, ಪಿಡುಗು ತಜ್ಞರು ಹಾಗೂ ಇತರರಿದ್ದರು. ಎಲ್ಲರೂ ತಮ್ಮ ಅನುಭವಗಳನ್ನು ಹಂಚಿಕೊಂಡರು. ಹೊಸ ಹೊಸ ಆವಿಷ್ಕಾರಗಳನ್ನು ತಿಳಿಸಿದರು. ಮುಂದೆ ಮಾಡಬಹುದಾದ ಸಂಶೋಧನೆಗಳ ಬಗ್ಗೆ ಚರ್ಚಿಸಿದರು. ಜಗತ್ತಿನ ಮೂಲೆ ಮೂಲೆಗಳಿಂದ ಬಂದ ವಿದ್ವಾಂಸರು ಈ ಮಹಾ ಸಮ್ಮೇಳನದಿಂದ ಸಾಧ್ಯವಿದ್ದ ಎಲ್ಲ ಲಾಭಗಳನ್ನು ಪಡೆದುಕೊಂಡರು. ಹೊಸ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ತಮ್ಮ ಪ್ರಯೋಗಾಲಯಗಳಿಗೆ ತಮ್ಮ ದೇಶಗಳಿಗೆ ಮರಳಿದರು.

ಅಬ್‌ಕಾವಿರ್ ಎಂಬ ಮದ್ದಿನ ಮೇಲೆ ನೂರಾರು ಸಂಶೋಧನಾ ಪ್ರಬಂಧಗಳು ಮಂಡಿಸಲ್ಪಟ್ಟವು. ಈ ಮದ್ದು ಏಡ್ಸ್‌ರೋಗದ ರೋಗಾಣು ಹೆಚ್‌ಐವಿ ವೈರಸ್‌ಗಳನ್ನು ನಾಶಮಾಡುತ್ತದೆ. ಇದೇನೂ ಮೊದಲ ಮದ್ದು ಅಲ್ಲ. ಈ ಮೊದಲು ಝಿಡೋವುಡಿನ್ ಅಂದರೆ ರೆಟ್ರೋವಿರ್ ಎಂಬ ಮದ್ದು ಬಳಕೆಯಲ್ಲಿ ಇತ್ತು. ನಂತರ ಎಪಿವಿರ್ ಮದ್ದು ಪೇಟೆಗೆ ಕಾಲಿಟ್ಟಿತು. ಇವುಗಳ ನಂತರ ಈಗ ಅಬ್‌ಕಾವಿರ್ ಸುದ್ದಿ ಮಾಡುತ್ತಲಿದೆ.

ತಜ್ಞರ ಅಭಿಪ್ರಾಯದಂತೆ ಯಾವುದೇ ಮದ್ದಿರಲಿ ಅದನ್ನು ಒಂಟಿಯಾಗಿ ಬಳಸಿದರೆ ಪ್ರಯೋಜನ ಕಡಿಮೆ. ಜೋಡಿಯಾಗಿ ಇಲ್ಲವೇ ಮೂರನ್ನೂ ಒಟ್ಟಾಗಿ ಬಳಸಿದರೆ ಪ್ರಯೋಜನ ಹೆಚ್ಚು. ಕಾರಣ ಏಡ್ಸ್ ರೋಗಿಗಳನ್ನು ಉಪಚರಿಸುವಾಗ ಈ ಎಲ್ಲ ಮದ್ದುಗಳನ್ನು ಬಳಸುವುದು ಜಾಣತನ ಎನಿಸುವುದು. ಈ ಮದ್ದುಗಳನ್ನು ರೋಗಿಯು ಅಂದಾಜು ಒಂದು ವರ್ಷದವರೆಗೆ ಸೇವಿಸಬೇಕು. ನಂತರ ರೋಗಿಯ ರಕ್ತವನ್ನು ಪರೀಕ್ಷಿಸಿದರೆ ಅದರಲ್ಲಿ ವೈರಸ್ ಕಣಗಳು ಮಾಯವಾಗಿರುತ್ತವೆ. ಎರಡನೆಯದಾಗಿ ಮಹತ್ವದ ಹಾಲ್ರಸಕಣಗಳು ಮರಳಿ ರಕ್ತದಲ್ಲಿ ಕಾಣತೊಡಗುತ್ತವೆ. ಬಹಳ ಸಂತೋಷ ಕೊಡುವ ಸುದ್ದಿ ಇದು.

ತಜ್ಞರಿಗೆ ಇದರಲ್ಲಿ ಕಂಡ ಕೆಲವು ತೊಂದರೆಗಳು ಕೆಳಗಿನಂತಿವೆ. ಮೊದಲನೆಯದಾಗಿ ರೋಗಿಯು ಎಷ್ಟೊಂದು ಮಾತ್ರೆಗಳನ್ನು ನುಂಗಬೇಕು ? ಇದು ಅನೇಕ ರೋಗಿಗಳನ್ನು ಒದ್ದಾಡಿಸಿ ಬಿಟ್ಟಿತು. ಅವರ ವಿನಂತಿಯೆಂದರೆ ಗುಳಿಗೆಗಳ ಸಂಖ್ಯೆ ಕಡಿಮೆ ಮಾಡಿರಿ ಎಂದು. ಈ ರೋಗಿಗಳು ಅಮೆರಿಕೆ, ಕೆನಡಾ, ಯುರೋಪ್ ದೇಶದವರು.

ಇನ್ನು ಹಿಂದುಳಿದ ದೇಶಗಳ ರೋಗಿಗಳ ಬೇಡಿಕೆ ಎಂದರೆ ಗುಳಿಗೆಗಳ ಸಂಖ್ಯೆ ಎಷ್ಟೇ ಇರಲಿ ಆದರೆ ಅವುಗಳ ಬೆಲೆ ಕಡಿಮೆ ಆಗಲಿ ಎಂದು.

ಏಡ್ಸ್ ರೋಗದ ಪ್ರಸಾರ ಇಂದಿಗೂ ಮುಂದುವರಿಯುತ್ತಲಿದೆ. ಇದು ಪ್ರತಿನಿಧಿಗಳನ್ನೆಲ್ಲ ಕಂಗೆಡಿಸಿ ಬಿಟ್ಟಿತು. ಪ್ರಸಾರ ಈಗ ಹೆಚ್ಚಾದುದು ಮುಂದುವರಿಯುತ್ತಿರುವ ದೇಶಗಳಲ್ಲಿ.

ಇನ್ನೊಂದು ಗುಂಪು ತಾಯಿಯ ರೋಗ ಗರ್ಭಸ್ಥ ಶಿಶುವಿಗೆ ತಲುಪಬಾರದೆಂಬ ಪ್ರಯತ್ನದಲ್ಲಿದೆ. ಇದನ್ನು ತಡೆದರೆ ಮುಗ್ಧ ಶಿಶು ಬಳಲುವುದು ತಪ್ಪುವುದು.

ಈ ಎಲ್ಲ ಸಂಶೋಧನೆಗಳಲ್ಲಿ ಕೇವಲ ವೈದ್ಯರು - ವಿಜ್ಞಾನಿಗಳು ಮಾತ್ರ ಶ್ರಮಪಡಬೇಕು ಎಂದೇನಿಲ್ಲ. ಇಡೀ ಸಮಾಜವೇ ಇದರಲ್ಲಿ ಪಾಲುಗೊಳ್ಳಬೇಕು. ಆಗ ಮಾತ್ರ ಒಳ್ಳೆಯ ಫಲಿತಾಂಶ ಹೊರಬರುವುದು.

# ಹುಚ್ಚುಕುರಿಯ ರೋಗ ಹಾಹಾಕಾರದ ಹೊಗೆ



ಡಾ॥ ಕರವೀರಪ್ರಭು ಕ್ಯಾಲಕೊಂಡ

**ಹುಚ್ಚು ಹಸುವಿನ ರೋಗ, ಕೋಳಿಜ್ವರಗಳಿಂದ ತತ್ತರಿಸಿ ಹೋಗಿದ್ದ ಜನ, ಸುಧಾರಿಸಿಕೊಂಡು ತಲೆ ಎತ್ತುತ್ತಿದ್ದಂತೆ, ಕಾಗಿನೆತ್ತಿ ಗೂಗಿ ಬಡಿದಂತೆ ಹುಚ್ಚುಕುರಿಯ ರೋಗ ಎರಗಿ ಬಂದಿದೆ. ಬಸವಳಿದ ಜನರು ಕುಸಿದು ಬೀಳುವಂತೆ ಮಾಡಿದೆ.**

ಒಗಟು -

'ಇಲ್ಲಿಯೂ ಬುಳು ಬುಳು, ಅಲ್ಲಿಯೂ ಬುಳುಬುಳು, ಕಲ್ಯಾಣತನಕ ಬುಳುಬುಳು....'

ಉತ್ತರ - 'ಕುರಿ ಹಿಕ್ಕೆ'

ಇದು ಅಜ್ಜ ಮೊಮ್ಮಕ್ಕಳಲ್ಲಿ ನಡೆಯುವ ಸಂಭಾಷಣೆ. ಇಂಥ ಒಗಟುಗಳು ನಮ್ಮ ಆಡು - ನುಡಿಗಳಲ್ಲಿ ಬೆಳೆದು ಬರಬೇಕಾದರೆ, ಕುರಿಯ ಒಡನಾಟ ನಮ್ಮ ಬದುಕಿನೊಂದಿಗೆ ಎಷ್ಟಿದೆ ಎಂಬುದು ಸ್ಪಟಿಕದಷ್ಟೇ ಸ್ಪಷ್ಟ. 'ಒಂದು ಕುರಿ ಬ್ಯಾ ಅಂದ್ರ, ಎಲ್ಲಾ ಕುರಿ ಬ್ಯಾ ಅಂತಾವು' ಅನ್ನುವ ಮಾತನ್ನು ಅವಲೋಕಿಸಿದಾಗ, ಅವುಗಳಲ್ಲಿಯ ಅಂಧಾನುಕರಣೆ ಗೊತ್ತಾಗುವುದು. ಇಂದಿನ ಪ್ರಖ್ಯಾತ ಕವಿ ಕೆ.ಎಸ್. ನಿಸಾರ್ ಅಹಮ್ಮದ್ ಅವರು - 'ಕುರಿಗಳು ಸಾರ್, ನಾವು ಕುರಿಗಳು...' ಎಂದು ವಿಡಂಬನಾತ್ಮಕವಾಗಿ ಮನಮುಟ್ಟುವಂತೆ ಹೇಳಿದ್ದಾರೆ. ಇಲ್ಲಿ 'ಕುರಿಗಳು' ಪದವನ್ನು ಸಾಂಕೇತಿಕವಾಗಿ, ಅರ್ಥಗರ್ಭಿತವಾಗಿ ಬಳಸಿದ್ದಾರೆ. ಈಗ ಕುರಿಗಳ ಬಗ್ಗೆ ಎಚ್ಚರದಿಂದ ಇರಲು ವಿಜ್ಞಾನಿಗಳು ಹೇಳಿದ್ದಾರೆ.

ಕಾರಣ - 'ಹುಚ್ಚುಕುರಿಯ ರೋಗ'

ಹುಚ್ಚುಕುರಿರೋಗ ಈಗ ಮೊಳಕೆ ಒಡೆದಿದೆ. ಹಾಗೆ ನೋಡಿದರೆ ಈ ರೋಗದ ಭಯದ ಬೀಜವನ್ನು ಬಿತ್ತಿದವರು ವಿಜ್ಞಾನಿಗಳೇ!

'ಉದ್ಯೋಗವಿಲ್ಲದ ಬಡಿಗ, ಮಗನ ಬದ್ದಿ ಕೆತ್ತಿದನಂತೆ' ಎಂಬುದು ಕನ್ನಡದ ಜನಪ್ರಿಯ ನುಡಿಗಟ್ಟು, ಅಂಥ ಕೆಲಸವನ್ನು ಈಗ ವಿಜ್ಞಾನಿಗಳು ಮಾಡಿದ್ದಾರೆ, ತಿನ್ನಲು ನಿರುಪಯುಕ್ತವಾದ ಹಸುಗಳ ಮಾಂಸ-ಮೂಳೆಗಳನ್ನು ಮೊದಲು ಚೆಲ್ಲುತ್ತಿದ್ದರು. ಕಸದಿಂದ ರಸ ತೆಗೆಯುವ ತಂತ್ರಕ್ಕೆ ಜೋತುಬಿದ್ದು ಹಸುಗಳ ಮಾಂಸ ಮಜ್ಜಾಲೆ ಮೂಳೆಗಳನ್ನು ಪುಡಿ ಪುಡಿ ಮಾಡಿ 'ಪಶುಗಳ ಆಹಾರ'ವನ್ನು ತಯಾರಿಸಲಾರಂಭಿಸಿದರು.

**ಸತ್ತ ಕುರಿ ನೀಡಿದ ಸುಳುವು :** ಹಸುಗಳ ಹುಚ್ಚು ರೋಗದ ಭೀತಿ ಹಬ್ಬಿದ ನಂತರ 'ಪಶು ಆಹಾರ' ಬಳಕೆಯಿಂದ ಕುರಿಗಳಿಗೆ ಈ ರೋಗ ಹರಡಬಹುದೇ ? ಎಂಬುದನ್ನು ನಿಷ್ಕರ್ಷಿಸಲು ವಿಜ್ಞಾನಿಗಳು ಅಧ್ಯಯನ ಆರಂಭಿಸಿದರು. ಪಶು ಆಹಾರ ತಿಂದ ಕುರಿಗಳ ಮಿದುಳಿನಲ್ಲೂ ಹುಚ್ಚು ಹಸುವಿನ ರೋಗಾಣು ಬದುಕಲು ಸಾಧ್ಯ ಎಂಬ ಸತ್ಯವನ್ನು ಎರಡು ತಿಂಗಳ ಹಿಂದೆ ವಿಜ್ಞಾನಿಗಳು ವರದಿ ಮಾಡಿದರು. ಕೇವಲ ಸಂಶೋಧನೆಯ ಉದ್ದೇಶಕ್ಕಷ್ಟೇ ಸೀಮಿತವಾಗಿದ್ದ ಈ ಪ್ರಯೋಗದಲ್ಲಿ ರೋಗಗ್ರಸ್ತ ಹಸು (Mad-Cow-discase)ವಿನ ಮಿದುಳಿನ ರಸವನ್ನು ನೇರವಾಗಿ ಕುರಿಗಳಿಗೆ ಚುಚ್ಚುಮದ್ದಿನ ರೂಪದಲ್ಲಿ ಕೊಟ್ಟರು. ಪ್ರಯೋಗಕ್ಕೊಳಗಾದ ಒಂದು ಕುರಿ ಸತ್ತುಹೋಗಿತ್ತು. ಈ ಸತ್ತ ಕುರಿಯೇ ವಿಜ್ಞಾನಿಗಳ ಚಿತ್ತಕ್ಕೆ ಚಿಂತೆ ಹಚ್ಚಿತ್ತು. ಆಳವಾದ ಅಧ್ಯಯನಕ್ಕೆ ಚೇತನ ನೀಡಿತ್ತು.

ಸತ್ತ ಕುರಿಯ ತಲೆಯನ್ನು ಕತ್ತರಿಸಿದರು. ತಲೆಬುರುಡೆ ಒಡೆದರು. ಮಿದುಳನ್ನು ಹೆಚ್ಚಿದರು. ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿದರು. ಸೂಕ್ಷ್ಮದರ್ಶಕದಡಿಯಲ್ಲಿ ಇಟ್ಟರು. ಕಣ್ಣಾಲೆ ಹಿಗ್ಗಿಸಿ ದಿಟ್ಟಿಸಿ ನೋಡಿದರು. ಅಚ್ಚರಿಗೊಂಡರು. ವಿಜ್ಞಾನಿಗಳ ಹುಬ್ಬು ಗಂಟಿಕ್ಕಿದವು. ಏಕೆಂದರೆ ಹುಚ್ಚು ಹಸುವಿನ ರೋಗಾಣುಗಳು ಕುರಿಯ ಮಿದುಳಿನಲ್ಲಿದ್ದವು. ಚಿಂತೆಯ ಗೆರೆಗಳು ಹಣೆಯಲ್ಲಿ ಹಣಕಿದವು. ಚಿಂತನೆ ಮಂಥನಕ್ಕೆ ಇಂಬು ಮಾಡಿದವು. ಇದನ್ನು ವರದಿ ಮಾಡಿದರೆ ಆಗಬಹುದಾದ ಅನಾಹುತಗಳ ಬಗ್ಗೆ ಚಿಂತಿಸಿದರು. ಮಾಡದಿದ್ದರೆ ಆಗಬಹುದಾದ ಅಪಚಾರಗಳ ಬಗ್ಗೆಯೂ ಲೆಕ್ಕ ಹಾಕಿದರು. ಅವಸರ ಮಾಡಲಿಲ್ಲ. ಕುರಿಯ ಮಿದುಳಿನ ಹಲವಾರು ತುಂಡುಗಳನ್ನು ಬೇರೆ ಪ್ರಯೋಗಾಲಯಕ್ಕೆ ಕಳಿಸಿಕೊಟ್ಟರು. ಅವರ ವರದಿಗಳು ಇವರ ಅಭಿಪ್ರಾಯಕ್ಕೆ ಪೂರಕ, ಪೋಷಕ, ಪರಿಪೂರಕವಾಗಿದ್ದರಿಂದ ವಿಳಂಬಕ್ಕೆ ವಿದಾಯ ಹೇಳಿದರು. ಪತ್ರಿಕಾ ಪರಿಷತ್ತಿಗೆ ವಿವರವಾದ ವರದಿಯನ್ನು ಬಿಡುಗಡೆ ಮಾಡಿದರು. ಇದು ಯೂರೋಪ್ ಪತ್ರಿಕೆಗಳಲ್ಲಿ ಮುಖಪುಟದ ಸುದ್ದಿಯಾಗಿ ಬಿತ್ತರಗೊಂಡಿತು. ನೇಚರ್ ಪತ್ರಿಕೆಯಲ್ಲೂ ಹೊಚ್ಚ ಹೊಸ ಸುದ್ದಿಯಾಗಿ ಪ್ರಚಾರ ಗಿಟ್ಟಿಸಿತು. ಜನರಲ್ಲಿ ನಡುಕ ಹುಟ್ಟಿಸಿತು. ದುಗುಡ ದುಮ್ಮಾನಗಳನ್ನು ಹೆಚ್ಚಿಸಿತು. ಈ ಭೀತಿಯ ಬೇತಾಳದ ಸೃಷ್ಟಿಕರ್ತರು ವಿಜ್ಞಾನಿಗಳೇ ಆಗಿದ್ದರಿಂದಾಗಿ ಆತಂಕ ಅಲ್ಲಿ ಜನರಿಗೆ ಅಪ್ಪಿಕೊಂಡಿದೆ. ''ಇದು ನಿಜವೇ ಆಗಿದ್ದಲ್ಲಿ ನಾವು ರಾಷ್ಟ್ರಮಟ್ಟದ ತುರ್ತುಸ್ಥಿತಿಯನ್ನು ಎದುರಿಸಬೇಕಾಗಿ ಬರುತ್ತದೆ'' ಎಂದು ಯುರೋಪಿನ ಉನ್ನತ ಅಧಿಕಾರಿಗಳು ಹೇಳಿದ್ದು ಔಚಿತ್ಯಪೂರ್ಣವಾಗಿದೆ.

ಹುಚ್ಚುಹಸುವಿನ ರೋಗದ ಹಾವಳಿಯಿಂದ ತತ್ತರಿಸಿದ ಜನರು ಹಸುಗಳ ಮಾಂಸ ತಿನ್ನುವುದನ್ನು ಬಿಟ್ಟರು. ಕೋಳಿಜ್ವರದಿಂದ ಕೋಳಿ ಮಾಂಸ ತಿನ್ನುವವರು ಕಂಗೆಟ್ಟರು. ಆಗ ಮಾಂಸಾಹಾರಿಗಳೆಲ್ಲಾ ಕುರಿಗಳ ಮಾಂಸ ತಿನ್ನಲು ಪ್ರಾರಂಭಿಸಿದರು. ಇದು ಸುರಕ್ಷಿತ, ಕ್ಷೇಮಕರವೆಂದೇ ಇಲ್ಲಿಯವರೆಗೆ ಭಾವಿಸಿದ್ದರು. ವಿಜ್ಞಾನಿಗಳು ಸ್ಫೋಟಿಸಿದ 'ಹುಚ್ಚು ಕುರಿರೋಗ'ದ ವರದಿಯಿಂದ ಈಗ ಅವರಿಗೂ ಆಘಾತವಾಗಿದೆ. ಈ ರೋಗದ ಲಕ್ಷಣಗಳು ಸಿ.ಜೆ.ಡಿ. (ಕ್ರೊಜಫೀಲ್ಡ್ ಜಾಕೋಬ್ಸ ಡಿಸೀಜ)ಯ ಲಕ್ಷಣವನ್ನೇ ಹೋಲುತ್ತಿರುವುದರಿಂದ ಹುಚ್ಚು ಕುರಿ ರೋಗದ ಹಾವಳಿ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗುತ್ತಿಲ್ಲ ಎಂದು ವಿಜ್ಞಾನಿಗಳು ಹೇಳಿರುವುದರಿಂದ ಜನರಲ್ಲಿಯ ಭಯಭೀತಿ ಮತ್ತಷ್ಟು ಹೆಚ್ಚಿದೆ.

**ಆದಿ ಅಂತ್ಯಗಳಿಲ್ಲದ ವಿಷವೃತ್ತ :** ಯುರೋಪಿನ ಕುರಿಗಳಿಗೆ 'ಸ್ಕ್ರೇಪಿ' ಎಂಬ ವೈರಸ್ ದಿಂದ ಆಗಾಗ ರೋಗ ಬರುವುದುಂಟು. ಇದು ಇಂದು ನಿನ್ನೆಯದಲ್ಲ, ಸುಮಾರು ೩೦೦

ರ್ಷಗಳ ಹಿಂದೆಯೇ ಇದು ಗೊತ್ತಿತ್ತು. ಆದರೆ ಇದು ಯಾರ ಗಮನವನ್ನು ಸೆಳೆಯದೇ ಹೋಗಿತ್ತು. ಕಾರಣ, ಈ ವೈರಸ್ ಮನುಷ್ಯ ವರ್ಗಕ್ಕೆ ದಾಟಿ ಬರುವುದಿಲ್ಲ ಎಂಬ ಗಾಢವಾದ ನಂಬಿಕೆ ಜನರಲ್ಲಿತ್ತು. ಈ ವೈರಸ್‌ನ ದಾಳಿಗೆ ಗುರಿಯಾಗಿ ಸತ್ತ ಕುರಿಗಳನ್ನು ಹೂಳುವ ಬದಲು, ಅದರ ಮಾಂಸ, ಮೂಳೆಗಳನ್ನು ಪುಡಿ ಪುಡಿ ಮಾಡಿ 'ಪಶು ಆಹಾರ'ವಾಗಿ ಪರಿವರ್ತಿಸುತ್ತಿದ್ದರು. ಹೀಗಾಗಿ ಪಶು ಆಹಾರ ಉತ್ಪಾದನೆ ಒಂದು ದೊಡ್ಡ ಉದ್ದಿಮೆಯಾಗಿಯೇ ಬೆಳೆಯ ಹತ್ತಿತ್ತು. ಇಂಥ ಪಶು ಆಹಾರವನ್ನು ಹಸು, ಹಂದಿ, ಕುರಿ, ಕೋಳಿಗಳಿಗೆ ಹಾಕಲಾಗುತ್ತಿತ್ತು.

ಪಶು ಆಹಾರದಲ್ಲಿಯ ಸ್ಕ್ರೇಪಿ ವೈರಸ್‌ಗಳು ಆಹಾರ ತಿಂದ ಹಸುಗಳ ಹೊಟ್ಟೆ ಸೇರಿದವು. ನಂತರ ಹಸುಗಳ ಮಿದುಳಿಗೆ ಲಗ್ಗೆಹಾಕಿ ಬಿ.ಎಸ್.ಇ. (ಬೊವೈನ್ ಸ್ಪಾಂಜಿಫಾರ್ಮ್ ಎನ್‌ಸೆಫೆಲೋಪತಿ) ಎಂಬ ರೋಗವನ್ನುಂಟು ಮಾಡಿತು. ಇಂಥ ಹಸುಗಳ ಮಾಂಸವನ್ನು ಮನುಷ್ಯರು ಸೇವಿಸಿದಾಗ ಪ್ರಿಯಾನ್ (Prion) ಎಂಬ ವಿಚಿತ್ರ ವೈರಸ್‌ನಂತಹ ಪ್ರೋಟೀನು ಸೃಷ್ಟಿಯಾಗುವುದು. ಸಿಜೆಡಿ ರೋಗಕ್ಕೆ ನಾಂದಿ ಹಾಡುವುದು. ಸಾವಿಗೆ ಸಂಚಕಾರ ನೀಡುವುದು.

ಹುಚ್ಚು ಹಸುವಿನ ರೋಗದಿಂದ ಸತ್ತ ಹಸುಗಳ ಮಾಂಸ - ಮೂಳೆಗಳಿಂದ ತಯಾರಿಸಿದ ಪಶು ಆಹಾರ ಸೇವನೆ ಮಾಡಿದ ಕುರಿಗಳು 'ಹುಚ್ಚು ಕುರಿ ರೋಗ'ಕ್ಕೆ ತುತ್ತಾಗುವವು. ಹೀಗೆ ಆದಿ ಅಂತ್ಯಗಳಿಲ್ಲದ ವಿಷವೃತ್ತ ಇದರಿಂದ ನಿರ್ಮಾಣಗೊಳ್ಳುವುದು.

**ರೋಗದ ಲಕ್ಷಣಗಳು :** ರೋಗಗ್ರಸ್ಥ ಕುರಿಮಾಂಸವನ್ನು ತಿಂದ ಕೂಡಲೇ ಈ ರೋಗ ಬರುವುದಿಲ್ಲ. ಹುಚ್ಚುಕುರಿಯ ರೋಗದ ಅದಿಶಯನಕಾಲ ೧೨ ತಿಂಗಳಿಂದ ೧೨ ವರ್ಷಗಳು. ಇಷ್ಟು ದೀರ್ಘಕಾಲದ ನಂತರ ಹೆಡಮುರಿಗೆ ಹಾಕುವುದು ಈ ರೋಗದ ವೈಶಿಷ್ಟ್ಯ.

ಈ ರೋಗಕ್ಕೆ ವಿಶಿಷ್ಟವಾದ ಲಕ್ಷಣಗಳೂ ಇಲ್ಲ. ಹೀಗಾಗಿ ಯಾವ ರೂಪದಲ್ಲಾದರೂ ಇದು ಗೋಚರಿಸಬಹುದು. ಹೆಚ್ಚಾಗಿ ಮಂಕುಕವಿದವರಂತೆ ಮಬ್ಬಾಗಿ ಇರುವರು. ಹೊರಜಗತ್ತಿನ ಅರಿವು ಇಲ್ಲದವರಂತೆ ಅಂತರ್‌ಮುಖಿಗಳಾಗಿರುವರು. ಚಿತ್ತ ವಿಕಲತೆ ಕಾಲ ಕಳೆದಂತೆ ಹೆಚ್ಚುತ್ತ ಹೋಗುವುದು. ಇದು ಯಾವ ಔಷಧಿಗಳಿಗೂ ಬಗ್ಗುವುದಿಲ್ಲ. ನಿರಾಸಕ್ತಿ ನರ್ತನಗೈಯುವುದು. ಬಲವಿಕೆ ಲಯವಾಗುವುದು, ಮುಖ ಕಪ್ಪಿಟ್ಟು ಕಳೆಗುಂದುವುದು. ಚಿತ್ರ ವಿಚಿತ್ರ ನಡುವಳಿಕೆಗಳ ಮಡುವಿನಲ್ಲಿ ರೋಗಿ ಮಲಗಬಹುದು. ರೋಗಿಯ ಹಸಿವು ಕುಗ್ಗುವುದು, ಹೀಗಾಗಿ ಹೊತ್ತಿಗೆ ಸರಿಯಾಗಿ ಊಟ ಮಾಡುವುದಿಲ್ಲ. ಪೋಷಕಾಂಶಗಳ ಕೊರತೆಯ ಕರಿನೆರಳು ಸದ್ದಿಲ್ಲದಂತೆ ಹೆಜ್ಜೆ ಹಾಕುವುದು. ಬರುಬರುತ್ತ ಅದು ಹೆಚ್ಚಾಗಿ, ಸೊರಗಿ ಸೊರಗಿ ಸೋತು ಹೋಗಬಹುದು.

ರೋಗಿ ಬದುಕಿದ್ದಾಗ ಏನೆಲ್ಲಾ ತಪಾಸಣೆ ಮಾಡಿದರೂ, ಈ ರೋಗದ ಇರುವಿಕೆಯ ಬಗ್ಗೆ ಕಿಂಚಿತ್ತೂ ಸುಳುವು ಸಿಗುವುದಿಲ್ಲ. ಸತ್ತ ಮೇಲೆ ಮಿದುಳನ್ನು ಬಿಚ್ಚಿದಾಗಲೇ ರೋಗಕ್ಕೆ ತುತ್ತಾದದ್ದು ಗೊತ್ತಾಗುವುದು. ವೈದ್ಯಕೀಯ ವಿಜ್ಞಾನ ಹಲವಾರು ಅವಿಷ್ಕಾರಗಳಿಂದ ಹರವನ್ನು ಹೆಚ್ಚಿಸಿಕೊಂಡಿದ್ದರೂ ಹುಚ್ಚುಕುರಿಯ ರೋಗ ತನ್ನ ನಿಗೂಢತೆ ಕಾಪಾಡಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಇದಕ್ಕೆ ನಿಶ್ಚಿತ ಚಿಕಿತ್ಸೆಯಿಲ್ಲದಿರುವುದೊಂದು ಅಪ್ರಿಯ ಸತ್ಯವೇ ಸರಿ.

**ಭೀತಿಯ ಭೂತ :** ಕುರಿಮಾಂಸ ತಿನ್ನುವವರಿಗಷ್ಟೇ ಭಯ, ಭೀತಿಯ ಭೂತ ಆವರಿಸಿಲ್ಲ. ಅದಕ್ಕಿಂತ ವ್ಯಾಪಕವಾಗಿ ಕುರಿ ಕಾಯುವವರಿಗೆ, ಪಶು ಆಹಾರ ತಯಾರಕರಿಗೆ, ಕಾರ್ಮಿಕರಿಗೆ, ಕಸಾಯಿಖಾನೆಗಳ ಮಾಲಿಕರಿಗೆ, ಮಾಂಸ ಮಾರಾಟಗಾರರಿಗೆ, ಪಶುವೈದ್ಯರಿಗೆ, ಕುರಿಯ ಮಾಂಸ ರಫ್ತು ಮಾಡುವವರಿಗೆ ಈ ರೋಗ ಅಘಾತವನ್ನುಂಟು ಮಾಡಿದೆ. ಒಂದೆಡೆ ಇನ್ನಷ್ಟು ಸುದೀರ್ಘ ಸಂಶೋಧನೆ ಆಗಬೇಕೆಂದು, ಈ ಫಲಿತಾಂಶಗಳನ್ನು ಒರೆಗಚ್ಚಿ ನೋಡಬೇಕೆಂದು ವಿಜ್ಞಾನಿಗಳ ಮೇಲೆ ತೀವ್ರ ಒತ್ತಡ ಹೇರಿದ್ದರೆ, ಇನ್ನೊಂದೆಡೆ ಈ ವಿಜ್ಞಾನಿಗಳ ಸಹವಾಸವೇ ಸುತಾರಾಂ ಬೇಡ ಎನ್ನುವಂತಾಗಿದೆ. ವಿಜ್ಞಾನಿಗಳು ಕುರಿಗಳ ಮಿದುಳಿಗೆ ಹುಚ್ಚುಹಸುವಿನ ಮಿದುಳಿನ ರಸವನ್ನು ಚುಚ್ಚದಿದ್ದಲ್ಲಿ ಈ ಹೊಸರೋಗ ಸೃಷ್ಟಿಯಾಗುತ್ತಿರಲಿಲ್ಲ ! ಈ ಅನಾಹುತವೂ ಆಗುತ್ತಿರಲಿಲ್ಲ!!

ಹುಚ್ಚುಹಸುವಿನ ರೋಗದ ತೊಡಕು ತೊಂದರೆಗಳಿಂದ, ಭಯಭೀತಿಗಳ ಭ್ರಮೆಯಿಂದ ಬ್ರಿಟನ್ ಮತ್ತು ಫ್ರಾನ್ಸ್, ಇನ್ನೂ ಬಿಡುಗಡೆಯಾಗಿಲ್ಲ. ದಿನದ ಮೂರೂ ಹೊತ್ತು 'ಬೀಫ್' ತಿನ್ನುತ್ತಿದ್ದ ಜನರು ದನದ ಮಾಂಸ ಎಂದಾಕ್ಷಣ ಮೂರು ಮಾರು ದೂರ ನಿಲ್ಲುವಂತಾಯಿತು. ಜನರಿಗೆ ಮಂಕು ಮುಸುಕಿತು. ಮೇಜರ್ ಸರಕಾರ ಮಣ್ಣು ಪಾಲಾಯಿತು. ಹಸುವಿನ ಮಾಂಸ ಮೂಳೆ ಗುಲ್ಮಗಳನ್ನು ಪುಡಿ ಪುಡಿ ಮಾಡಿ ತಯಾರಿಸುತ್ತಿದ್ದ 'ಪಶು ಆಹಾರ ಪೊಟ್ಟಣ'ಗಳನ್ನು ಅಲ್ಲಿ ಈಗ ನಿಷೇಧಿಸಲಾಗಿದೆ. ಹಸುಗಳಿಗೆ ಬಳಸುವ ಇತರೆ ಪಶು ಆಹಾರವನ್ನು ೧೧೩° ಸೆಂ. ತಾಪದಲ್ಲಿ ಕನಿಷ್ಠ ೨೦ ನಿಮಿಷ ಕುದಿಸಿ ತಿನ್ನಿಸಬೇಕಾಗಿದೆ. ಹುಚ್ಚು ಹಸುಗಳ ಪತ್ತೆ ಮಾಡುವ ಕೆಲಸ ಈಗಲೂ ಮುಂದುವರಿದಿದೆ. ಪತ್ತೆಯಾದ ಹಸುವಿನ ಮಾಲಿಕರಿಗೆ ಪರಿಹಾರ ನೀಡಲಾಗುವುದು. ಹಸುವನ್ನು ಕೊಂದು ಹೂಳಲಾಗುವುದು. ಈಗ ಈ ಪ್ರಕ್ರಿಯೆಯನ್ನು ಕುರಿಗಳಿಗೂ ವಿಸ್ತರಿಸಲಾಗಿದೆ. 'ಸ್ಕ್ರೇಪಿ' ಕುರಿಗಳನ್ನು ಹದ್ದಿನ ಕಣ್ಣಿಂದ ಹುಡುಕುವ ಕಾರ್ಯ ನಡೆದಿದೆ.

'ಬಿ.ಎಸ್.ಇ.' ಬಿಸಿ ಈಗ ಇಡೀ ಯುರೋಪಕ್ಕೆ ತಗಲಿದೆ. ಈ ಜ್ವಲಂತ ಸಮಸ್ಯೆಯ ಜ್ವಾಲೆ ಜ್ವಾಲಾಮುಖಿಯಾಗಿ ಜೀವಿಗಳನ್ನು ನುಂಗಿ ನೀರು ಕುಡಿಯಲು ಸಂಚಿನಿಂದ ಹೊಂಚು ಹಾಕುತ್ತಿದೆ. ಇದನ್ನು ಹೊಸಕಿ ಹಾಕಲು ಹೊಸ ಹೊಸ ಸಂಶೋಧನೆಗಳಿಗೆ ಪ್ರೋತ್ಸಾಹ ನೀಡುತ್ತಿದೆ. ಕಸಾಯಿಖಾನೆಯಲ್ಲಿಯೇ ರೋಗ ಪತ್ತೆ ಮಾಡುವ ಸುಲಭ, ಸುರಕ್ಷಿತ, ಸರಳ ವಿಧಾನವನ್ನು ಹುಡುಕುವ ವಿಜ್ಞಾನಿಗೆ ಹತ್ತು ಲಕ್ಷ ಈಕು (ಯುರೋಪಿಯನ್ ಕರೆನ್ಸಿ) ಘೋಷಿಸಿದೆ. ಇಂದಿನ ಅವಶ್ಯಕತೆ ಮನುಕುಲದ ಅಭ್ಯುದಯ. ಅದು ಅಡ್ಡಿ ಆತಂಕಗಳಿಲ್ಲದೇ ಆದಷ್ಟು ಬೇಗ ಆಗಬೇಕಾಗಿದೆ!

**ಭಾರತಕ್ಕೂ ಬಿಡದ ಭಯ :** ಹಿಮಾಲಯ ಪ್ರದೇಶದ ಕುರಿಗಳಲ್ಲಿ 'ಸ್ಕ್ರೇಪಿ' ಕಂಡು ಬಂದಿದೆ. ಸ್ಕ್ರೇಪಿಯ ಹಾವಳಿ ಕಸೌಲಿ, ಹಿಮಾಚಲ ಪ್ರದೇಶಗಳಲ್ಲೂ ಹಚ್ಚಹಸುರಾಗಿಯೇ ಇದೆ. ಕಸೌಲಿಯಲ್ಲಿ ರೇಬಿಸ್ ಲಸಿಕೆಯನ್ನು ಉತ್ಪಾದಿಸಲಾಗುತ್ತಿದೆ. ರೇಬಿಸ್ ಲಸಿಕೆ ಉತ್ಪಾದನೆಗಾಗಿ ಕುರಿಗಳ ಮಿದುಳನ್ನು ಉಪಯೋಗಿಸುವರು. ಭಾರತದಲ್ಲಿ ಪ್ರತಿವರ್ಷ ಸುಮಾರು ೪೦,೦೦೦ ಜನರಿಗೆ ರೇಬಿಸ್ ಲಸಿಕೆಯನ್ನು ನೀಡಲಾಗುವುದು. ಈ ಲಸಿಕೆಯ ಮುಖಾಂತರ 'ಹುಚ್ಚುಕುರಿ'ಯ ರೋಗವನ್ನು ಸದ್ದಿಲ್ಲದಂತೆ ಜನರಿಗೆ ಉಡುಗೊರೆಯಾಗಿ ನೀಡುತ್ತಿದ್ದೇವೆ ಎಂದು ದೇಶದ ಖ್ಯಾತ ವೈರಾಲಾಜಿಸ್ಟ್ ಆರ್ಯ ಹೇಳಿರುವುದು ರೇಬಿಸ್ ಲಸಿಕೆ ಪಡೆದವರಲ್ಲಿ ನಡುಕ ಹುಟ್ಟಿಸಿದೆ. ಇದರಿಂದ ಎಚ್ಚರಗೊಳ್ಳದ ಕೇಂದ್ರ ಸರಕಾರದ ಜನಾರೋಗ್ಯ ಇಲಾಖೆ - ''ಜನರು ಗಾಬರಿ ಗೊಳ್ಳುವ ಅಗತ್ಯವಿಲ್ಲ. ಕೋಟಿಗೊಬ್ಬರಿಗೆ ಹೀಗೆ ರೋಗ ಹರಡಬಹುದು'' ಎಂದು ಸಬೂಬು ಹೇಳಿ ಸುಮ್ಮನಾಗಿದೆ. ಇದರಿಂದ ಜನರಲ್ಲಿಯ ಭಯ, ಭೀತಿ ಕಡಿಮೆಯಾಗಿಲ್ಲ ''ರೋಗದಿಂದ ಸಾಯುವುದಕ್ಕಿಂತ ರೋಗದ ಭಯದಿಂದ ಸಾಯುವವರೇ ಹೆಚ್ಚು'' ಎಂಬುದು ಹುಚ್ಚುಕುರಿ ರೋಗದಲ್ಲಂತೂ ನೂರಕ್ಕೆ ನೂರರಷ್ಟು ಸತ್ಯ. ಕಾಲ ಮಿಂಚುವ ಮೊದಲೇ ಜನರು ಜಾಗೃತರಾಗಬೇಕು. ಬುದ್ಧಿವಂತರು ಬೀದಿ ಗಿಳಿಯಬೇಕು. ಸರಕಾರಕ್ಕೆ ಬಿಸಿ ತಟ್ಟಬೇಕು. ಬರಬಹುದಾದ ಭವಿಷತ್ತಿನ ಕೆಟ್ಟ ದಿನಗಳಿಗೆ ಕಡಿವಾಣ ಹಾಕಬೇಕು! □

ವಿಶೇಷ ಲೇಖನ

# ಬದಲಿ ಜೋಡಣೆಗೆ ಅಂಗ ಪೂರೈಸುವ ನರವರಾಹಗಳು



ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಮ್ ॥

''ಹೇ ಭರತಕುಲೋದ್ಭವಾ ! ಧರ್ಮವು ನಷ್ಟವಾಗಿ ಅಧರ್ಮವು ಅಭಿವೃದ್ಧಿಯಾದಾಗ ನಾನು ಜನ್ಮವನ್ನು ಎತ್ತುತ್ತೇನೆ.'' ಇದು ಭಗವದ್ಗೀತೆಯ ಜ್ಞಾನಯೋಗದಲ್ಲಿ ಶ್ರೀಕೃಷ್ಣನು ಆಡಿದ ಮಾತು. ಅಧರ್ಮವು ಹೆಚ್ಚಾದಾಗ ಭೂಮಿಯ ಮೇಲೆ ಆ ಭಗವಂತನು ಅವತಾರ 'ವನ್ನು ಎತ್ತುತ್ತಾನೆ. ಧರ್ಮವನ್ನು ಉಳಿಸುತ್ತಾನೆ ಎಂಬುದು ನಂಬಿಕೆ. ಅದರಂತೆಯೇ ದಶಾವತಾರಗಳನ್ನು ಎತ್ತಿದ್ದಾನೆ ಎಂದು ತಿಳಿದಿದ್ದೇವೆ. ದಶಾವತಾರಗಳಲ್ಲಿ ಮೂರನೆಯ ಅವತಾರ ವರಾಹ ಅವತಾರ ! ವಿಷ್ಣುವು ವರಾಹ ಅವತಾರವನ್ನು ತಾಳಿ ಭೂಮಿ ಯನ್ನು ರಕ್ಷಿಸಿ, ತ್ರಿಲೋಕ ಕಂಟಕ ಹಿರಣ್ಯಾಕ್ಷ ನನ್ನು ಕೊಂದನಂತೆ. ವಿಶ್ವದಲ್ಲಿ ಶಾಂತಿ ನೆಲೆಸಲು ಅವಕಾಶ ಮಾಡಿಕೊಟ್ಟನಂತೆ ಅಂದು ವಿಷ್ಣು.

ವರಾಹ ಅಥವಾ ಹಂದಿ ನಮ್ಮ ವೈದಿಕ ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಹಂದಿ, ಕಾಡು ಮಾನವನ ಮುಖ್ಯ ಆಹಾರವಾಗಿದ್ದಿರಬೇಕು. ಇಂದಿಗೂ ಸಹ ಮಾಂಸಾಹಾರಿಗಳ ಬಹು ಮುಖ್ಯ ಪ್ರಾಣಿಯಾಗಿದೆ ಹಂದಿ.

ಆದರೆ......

ಈಗ ನಮ್ಮ ಹೊಟ್ಟೆಯನ್ನು ತುಂಬುವ ಹಂದಿಯ ಬಗ್ಗೆ ಮಾತನಾಡುತ್ತಿಲ್ಲ. ಬದಲಿ ಅಂಗಗಳಿಂದ ಹೊಸ ಬದುಕನ್ನು ನಡೆಸ ಬಯಸುವ ಹಲವು ರೋಗಿಗಳಿಗೆ, ಅಂಗಾಂಗ ಗಳನ್ನು ಒದಗಿಸಬಲ್ಲ ವರಾಹಗಳ ಬಗ್ಗೆ ಪ್ರಸ್ತಾಪಿ ಸುತ್ತಿದ್ದೇನೆ. ಅಂದು ವಿಷ್ಣುವು ವರಾಹ ಅವತಾರ ತಾಳಿ ಭುವಿಯನ್ನು ಸಂಕಟದಿಂದ ಪಾರು ಮಾಡಿದ ವಿಷಯ ಕಟ್ಟು ಕಥೆಯಿರಬಹುದು. ಆದರೆ ತಮ್ಮ ಅಂಗಾಂಗಗಳನ್ನು ''ದಾನ'' ಮಾಡಿ, ಹಲವು ರೋಗಿಗಳಿಗೆ ಜೀವದಾನ ಮಾಡಲಿರುವ ಆಧುನಿಕ ವರಾಹ ''ಸ್ವಾಮಿ''ಗಳು ಕೇವಲ ಕಲ್ಪನೆಯಲ್ಲ! ವಾಸ್ತವ!! ಅದರ ಬಗ್ಗೆ ಒಂದಿಷ್ಟು ಪರಿಚಯ!

- ಡಾ। ನಾ. ಸೋಮೇಶ್ವರ

**ವರಾಹ - ೨೩ :**

ಮಸಾಚುಸೆಟ್ಸ್‌ನಲ್ಲಿರುವ ನಾರ್ಥ್ ಗ್ರಾಫ್ಟನ್. ಇಲ್ಲಿದೆ ಮಿಡಾಸ್ ಬಯಲಾಜಿಕಲ್ಸ್ ಎಂಬ ಸಂಸ್ಥೆ. ಇದರ ಮುಖ್ಯ ವೈಜ್ಞಾನಿಕ ಅಧಿಕಾರಿ ಕಾರ್ಲ್ ಈಬರ್ಟ್. ಈತ ತನ್ನ ಸಹೋದ್ಯೋಗಿಗಳ ನೆರವಿನಿಂದ ಟಫ್ಟ್ ಸ್ಕೂಲ್ ಆಫ್ ವೆಟೆರನರಿ ಮೆಡಿಸಿನ್‌ನಲ್ಲಿ ವರಾಹ -೨೩ನ್ನು ಸೃಜಿಸಿದ್ದಾನೆ. ಇದೊಂದು ಗಂಡು ಹಂದಿ. ಯಾರ್ಕ್‌ಶೈರ್ ವೈಟ್ ತಳಿ. ಇದರ ಮೈ ಬಣ್ಣ ನಸು ಕೆಂಚು. ಮೈಮೇಲೆ ಮೃದುರೋಮ. ಪಿಳಿ ಪಿಳಿ ಕಣ್ಣುಗಳು. ಅರಳಿರುವ ಮೂತಿ. ನೋಡುವುದಕ್ಕೆ ಎಲ್ಲ



ಹಂದಿ! ಮನುಕುಲದಿಂದ ಕಡೆಗಣಿಸಲ್ಪಟ್ಟ, ಅದೇ ಮನುಷ್ಯ ಯಾವ, ಯಾರ ಅಡೆತಡೆಯಿಲ್ಲದೇ ಕೊಲ್ಲಬಹುದಾದ, ಮಾರಬಹುದಾದ, ಕೊಂಡು ತಿನ್ನಬಹುದಾದ ಪ್ರಾಣಿ.....

ಹಂದಿ! ದೇವರ ಅವತಾರವೆಂಬ ಹಿನ್ನೆಲೆ ಹೊಂದಿದ್ದೂ ಪೂಜಿಸಲ್ಪಡದ, ಮೂಢನಂಬಿಕೆಗಳಿಗೆ ಬಲಿಯಾಗುತ್ತ ಬಂದ ಪಶು......

ಅದೇ ಹಂದಿಯೀಗ ಮನುಷ್ಯನಿಗೆ ಜೀವದಾನವಾಗ್ಲಲಿದೆ, ಅವನ ಒಂದು ಅವಿಭಾಜ್ಯ ಅಂಗವಾಗಲಿದೆ, ಅವನಲ್ಲಿ ಒಂದಾಗಲಿದೆ!

'ಇದನ್ನಾತ ಹ್ಯಾಗೆ ಸ್ವೀಕರಿಸುತ್ತಾನೋ' ಕಾದು ನೋಡಬೇಕಿದೆ........

ಹಂದಿಗಳಂತೆ ಇದೂ ಒಂದು ಹಂದಿ. ಇದರಲ್ಲಿ ಯಾವುದೇ ವಿಶೇಷ ಮೇಲು ನೋಟಕ್ಕೆ ಕಾಣುವುದೇ ಇಲ್ಲ!

''ನನ್ನ ಹಂದಿ'' 'ಡಾಲಿ' ಕುರಿ ಮರಿಯಷ್ಟು ಪ್ರಖ್ಯಾತವೇನಲ್ಲ ಬಿಡಿ. ಸುದ್ದಿ ಮಾಧ್ಯಮದಲ್ಲಿ ನನ್ನ ಹಂದಿಯನ್ನು ಹಾಡಿಹೊಗಳಲು ಯಾರಿಗೂ ಅಷ್ಟು ಆಸಕ್ತಿಯಿಲ್ಲ. ಅಲ್ಲದೆ ನಾನು ಹಂದಿಗಳಿಗೆ ಮನುಷ್ಯರ ಹೆಸರನ್ನು ಇಡುವುದಿಲ್ಲ. ಇದೊಂದು ಹಂದಿ. ಇದಕ್ಕೊಂದು ಸಂಖ್ಯೆ ನೀಡಿದ್ದೇನೆ ನೋಡಿ'' ಎಂದು ಈ ಬರ್ಪ್ ಹಂದಿಯ ಕಿವಿಗೆ ಪಿನ್ ಮಾಡಿದ್ದ ೨೩ ರ ಸಂಖ್ಯೆಯನ್ನು ತೋರಿಸುತ್ತಾರೆ. ಇದುವೇ ವರಾಹ - ೨೩!

ವರಾಹ - ೨೩ ಮತ್ತು ಅದರಂತಹ ಹಂದಿಗಳು ನಮ್ಮ ಮೇಜಿನ ಮೇಲಿರುವ ಊಟದ ತಟ್ಟೆಯನ್ನು ಅಲಂಕರಿಸಲು ಹುಟ್ಟಿಲ್ಲ. ಇದರಂತಹ ಹಂದಿಗಳು ಮುಂದಾನೊಂದು ಕಾಲದಲ್ಲಿ ಬದಲಿ ಜೋಡಣೆಗಾಗಿ ಅಂಗಾಂಗಗಳನ್ನು ಒದಗಿಸುತ್ತವೆ. ವರಾಹ - ೨೩ ರ ಪ್ರತಿಯೊಂದು ಜೀವಕೋಶದಲ್ಲಿ ೧೯ ಜೊತೆ ಕ್ರೋಮೋಸೋಮುಗಳಿವೆ. ಈ ಕ್ರೋಮೋಸೋಮುಗಳಲ್ಲಿ ಎಲ್ಲಿಯೋ ಒಂದು ಕಡೆ ಮನುಷ್ಯನ ವಂಶವಾಹಿ (ಜೀನ್)ಯೊಂದಿದೆ. ಅದರಲ್ಲಿ ಅಡಗಿರುವ ಅಣುರೂಪದ ಮಾನವತೆ, ಹಂದಿಯ ಬಾಹ್ಯಾರೂಪದಲ್ಲಿ ಕಂಡು ಬರುತ್ತಿಲ್ಲ. ಆದರೆ ಇದರಂತಹ ಹಂದಿಗಳು ವೈದ್ಯವಿಜ್ಞಾನದ ಒಂದು ಪ್ರಮುಖ ಸಮಸ್ಯೆಗೆ ಉತ್ತರವನ್ನು ಕೊಡಲಿವೆ. ಇದು ಸತ್ಯ.

### ಬದಲಿ ಜೋಡಣೆ :

ಅಂಗಾಂಗ ಬದಲೀ ಜೋಡಣೆ, ಕಳೆದ ೨೦ ವರ್ಷಗಳಲ್ಲಿ ಅಗಾಧ ಪ್ರಗತಿಯನ್ನು ಸಾಧಿಸಿದೆ. ಇಂದು ಕ್ರಿಯಾಹೀನ ಮೂತ್ರಪಿಂಡ, ಹೃದಯ, ಯಕೃತ್ತು, ಮಾಂಸಲಿಗಳನ್ನು ತೆಗೆದುಹಾಕಿ, ಬದಲಿ ಅಂಗಗಳನ್ನು ಜೋಡಿಸಬಹುದು. ಬದಲಿ ಯಕೃತ್ತನ್ನು ಪಡೆದವ ಇಂದು ಮೂರು ವರ್ಷ ಬದುಕಿರಬಲ್ಲ. ಬದಲಿ ಮೂತ್ರಪಿಂಡ ಪಡೆದವರು ೨೦ ವರ್ಷ ಬದುಕಬಲ್ಲರು!

ಬದಲಿ ಜೋಡಣೆಯಲ್ಲಿ ಬಳಸಲು ಅಂಗಾಂಗಗಳನ್ನು ಇತರ ಮನುಷ್ಯರಿಂದಲೇ ಪಡೆಯಬೇಕು. ಅಂಗಾಂಗ ದಾನದ ಮಹತ್ವದ ಬಗ್ಗೆ ಎಲ್ಲೆಡೆ ಪ್ರಚಾರ ನಡೆದಿದೆ. ಆದರೂ ಸಹ ಜನ, ಅಂಗಾಂಗ ದಾನದ ಬಗ್ಗೆ ಏಕೋ ಹಿಂದೆಗೆಯುತ್ತಿದ್ದಾರೆ. ೧೯೯೬ ರಲ್ಲಿ ಕೇವಲ ಅಮೇರಿಕ ಒಂದರಲ್ಲಿ ೨೦,೦೦೦ ಬದಲಿ ಜೋಡಣಾ ಶಸ್ತ್ರಚಿಕಿತ್ಸೆಗಳು ನಡೆದವು. ಇನ್ನೂ ೫೦,೦೦೦ ರೋಗಿಗಳು ಬದಲಿ ಅಂಗಗಳು ದೊರೆಯಬಹುದೆ...... ಎಂದು ಚಾತಕ ಪಕ್ಷಿಗಳಂತೆ ಕಾಯುತ್ತಿದ್ದರು. ಇವರಲ್ಲಿ ೪,೦೦೦ ಜನರು ಸಕಾಲದಲ್ಲಿ ಅಂಗ ದೊರೆಯದೆ ಮರಣವನ್ನಪ್ಪಿದರು.

ಈ ೫೦,೦೦೦ ಜನರು, ತಮ್ಮ ಬದುಕಿಗಾಗಿ ಅವಘಡಗಳು ಸಂಭವಿಸಲೆಂದು ''ಪ್ರಾರ್ಥಿಸುತ್ತಿರುತ್ತಾರೆ'' ಗಂಭೀರಲಕ್ವ, ಹೃದಯಾಘಾತ, ಸಂಚಾರಿ ಅಪಘಾತ, ನರಹತ್ಯೆ ಇತ್ಯಾದಿಗಳು ನಡೆಯಲಿ, ಮಿದುಳು ಮೃತ ವ್ಯಕ್ತಿಗಳಿಂದ ಬದಲಿ ಜೋಡಣೆಗಾಗಿ ಅಂಗಾಂಗ ದೊರೆಯಲಿ ಎಂದು ತಪಸ್ಸು ಮಾಡುತ್ತಿರುತ್ತಾರೆ.

ಅಪಾರ ಹಣ ಇರುವ ಜನ, ಬದಲೀ ಅಂಗಗಳನ್ನು ಪಡೆಯಲು ವಾಮಮಾರ್ಗಗಳನ್ನು ಹುಡುಕುತ್ತಾರೆ. ಮೊನ್ನೆ ಮೊನ್ನೆಯವರೆಗೆ ದೂರದ ಅರಬ್ ಶೇಖ್‌ಗಳು ತಮಿಳುನಾಡಿನ ವಳ್ಳಿವಾಕಂನ ಬಡಜನರ ಮೂತ್ರಪಿಂಡಗಳನ್ನು ಹಣ ನೀಡಿ ಕೊಳ್ಳುತ್ತಿದ್ದ ಕಟುಸತ್ಯ ನಮ್ಮ ನೆನಪಿನಲ್ಲಿ ಇನ್ನೂ ಇದೆ. ಭಾರತದಲ್ಲಿ ಮಾನವ ಅಂಗಾಂಗ ಬದಲಿಜೋಡಣೆಯ ಅಧಿನಿಯಮ - ೧೯೯೪ ಜಾರಿಗೆ ಬಂದ ನಂತರ ಈ ವ್ಯಾಪಾರಕ್ಕೆ ತೆರೆ ಬಿದ್ದಿದೆ. ಆದರೆ ಚೀನದಲ್ಲಿ ಅಂಗಾಂಗಗಳ ಕಳ್ಳ ಮಾರಾಟ ಈಗಲೂ ನಡೆಯುತ್ತಿದೆ ಎಂದು ನ್ಯೂಯಾರ್ಕ್‌ಟೈಮ್ಸ್ ಪತ್ರಿಕೆ ಕಳೆದ ಫೆಬ್ರವರಿಯಲ್ಲಿ ಬರೆಯಿತು. ಚೀನೀಯರು ಪ್ರತಿವರ್ಷ ಸುಮಾರು ೨೦೦ ಖೈದಿಗಳನ್ನು ಹೈನನ್ ದ್ವೀಪದಲ್ಲಿ ಗಲ್ಲಿಗೇರಿಸುತ್ತಾರೆ. ಇವರಲ್ಲಿ ಕನಿಷ್ಠ ೫೦ ಜನರ ಅಂಗಾಂಗಗಳನ್ನಾದರೂ ಒದಗಿಸುವುದಾಗಿ ಹೇಳಿದ ಇಬ್ಬರು ಚೀನೀಯರನ್ನು ಅಮೇರಿಕಾದ ಪೋಲೀಸರು ಬಂಧಿಸಿದ್ದಾರೆ.

ಹಾಗಾಗಿ ಬದಲಿ ಜೋಡಣೆಗಾಗಿ ಅಂಗಗಳ ದೊರೆಯುವಿಕೆ ದುಸ್ತರವಾಗಿದೆ. ಮಾನವೇತರ ಮೂಲಗಳಿಂದ ಬದಲಿ ಅಂಗಗಳನ್ನು ಪಡೆಯುವ ಬಗೆಗೆ ಜಗತ್ತಿನ ಹಲವೆಡೆ ಸಂಶೋಧನೆಗಳು ಭರದಿಂದ ನಡೆಯುತ್ತವೆ. ಇಂತಹ ಮೂಲಗಳಲ್ಲಿ ಎರಡು ಮೂಲಗಳು ಗಮನೀಯ. ಮೊದಲನೆಯದು ತಳಿ ಬದಲಾವಣೆಗೊಂಡ (ಜೆನೆಟಿಕಲಿ ಆಲ್ಬರ್ಡ್) ಹಂದಿಗಳ ದೇಹದಿಂದ ಬದಲಿ ಅಂಗಗಳನ್ನು ಪಡೆಯುವುದು. ಎರಡನೆಯದು ಅಗತ್ಯ ಅಂಗಗಳನ್ನು ಪ್ರಯೋಗಾಲಯದಲ್ಲಿ ಬೆಳೆಸುವುದು. ಈ ಎರಡೂ ಕ್ಷೇತ್ರಗಳಲ್ಲಿ ಈಗ ಸಾಕಷ್ಟು ಪ್ರಗತಿಯಾಗಿ ಫಲ ದೊರೆಯಲಾರಂಭಿಸಿದೆ.

### ಹಂದಿ ಮೂಲ :

ಹಂದಿ - ಮನುಷ್ಯರ ನಡುವೆ ಜೀವವಿಕಾಸದ ದೃಷ್ಟಿಯಿಂದ ಅಗಾಧ ಕಂದರವಿದೆ. ಆದರೆ ಅಂಗಾಂಗಗಳ ಗಾತ್ರಕ್ಕೆ ಹೋಲಿಸಿದರೆ ಮನುಷ್ಯ ಮತ್ತು ಹಂದಿಗಳ ನಡುವೆ ಸಾಮ್ಯತೆ ಹೆಚ್ಚಿದೆ. ಹಂದಿಯ ಒಳಾಂಗಗಳು ಮನುಷ್ಯರ ಒಳಾಂಗಗಳಂತೆ ಇರುವುದರಿಂದ, ವೈದ್ಯ ವಿದ್ಯಾರ್ಥಿಗಳ ಅಂಗರಚನ ಶಾಸ್ತ್ರ ಅಧ್ಯಯನಕ್ಕೆ ಮರಿ ಹಂದಿಗಳನ್ನು ವಿಶೇಷವಾಗಿ ಬಳಸುತ್ತಾರೆ. ಹಂದಿಯ ಅಂಗಾಂಗಗಳ ರಚನೆ ಹಾಗೂ ಗಾತ್ರ ಮನುಷ್ಯರ ಅಂಗಾಂಗಗಳಿಗೆ ಸಮೀಪವಾಗಿರುವುದರಿಂದ ವೈದ್ಯವಿದ್ಯಾರ್ಥಿಗಳು ಹಂದಿ ಶವ ವಿಚ್ಛೇದನದಿಂದ (ಡಿಸೆಕ್ಷನ್) ಅಪಾರ ವಿಷಯಗಳನ್ನು ಕಲಿಯಬಹುದು. ಹಾಗಾಗಿ 'ಬದಲಿ ಜೋಡಣೆಯಲ್ಲಿ ಬಳಸಿದ ಹಂದಿಯ ಅಂಗಗಳು ಮನುಷ್ಯ ಬೆಳವಣಿಗೆಯೊಂದಿಗೆ ಸೂಕ್ತವಾಗಿ ಬೆಳೆಯಬಲ್ಲುದು ಎಂದು ತಜ್ಞರು ಭಾವಿಸುತ್ತಾರೆ. ಅಂದರೆ ಒಂದು ಮಗುವಿಗೆ ಹಂದಿಯ ಯಕೃತ್ತನ್ನು ಬದಲಿ ಜೋಡಿಸಿದೆವೆಂದು ಭಾವಿಸೋಣ. ಆ ಮಗು ವಯಸ್ಸಾಗುತ್ತಿರುವಂತೆ ಅದರ ದೇಹ ಬೆಳೆಯುತ್ತದೆ. ಆ ಬೆಳವಣಿಗೆಗೆ ಸೂಕ್ತವಾಗಿ ಬದಲಿ ಜೋಡಿಸಿದ ಹಂದಿಯ ಯಕೃತ್ತೂ ಸಹ ಬೆಳೆಯಬಲ್ಲುದು ಎಂದರ್ಥ. ಮಗು ಪೂರ್ಣ ಬೆಳೆದು ವಯಸ್ಕನಾಗಿ ತನ್ನ ಬೆಳವಣಿಗೆಯನ್ನು ಪೂರ್ಣಗೊಳಿಸಿದಾಗ, ಹಂದಿ ಯಕೃತ್ತೂ ಸಹ ಬೆಳವಣಿಗೆಯನ್ನು ಪೂರ್ತಿಗೊಳಿಸಿರುತ್ತದೆ!

ಮನುಷ್ಯನಿಗೆ ಸೂಕ್ತವಾಗಬಲ್ಲ ಅಂಗಾಂಗಗಳನ್ನು ಒದಗಿಸಬಲ್ಲ ಮತ್ತೊಂದು ಪ್ರಾಣಿಯೆಂದರೆ ವಾನರಗಳು. (ಚಿಂಪಾಂಜಿ, ಗೊರಿಲ್ಲ, ಗಿಬ್ಬನ್, ಉರಾಂಗುಟನ್) ಇವು ವಿಕಾಸ ಪಥದಲ್ಲಿ ಹಂದಿಗಳಿಗಿಂತ ಮನುಷ್ಯರಿಗೆ ಹೆಚ್ಚು ಸಮೀಪವಾಗಿರುವ ಪ್ರಾಣಿಗಳು. ಚಿಂಪಾಂಜಿಯ ತಳಿವಿನ್ಯಾಸ ಶೇ. ೯೮ ರಷ್ಟು ಮನುಷ್ಯರನ್ನು ಹೋಲುತ್ತದೆ. ಉಳಿದ ಶೇ. ೧.೬ ರಷ್ಟು ಕ್ರೋಮೋಸೋಮುಗಳು ಮನುಷ್ಯನ ಸೃಷ್ಟಿಗೆ ಕಾರಣವಾಗಿದೆ. ಹಾಗಾಗಿ ಮನುಷ್ಯನ ಸನಿಹ ಸಂಬಂಧಿ ಹಂದಿಗಿಂತಲೂ ಚಿಂಪಾಂಜಿಯಾಗಬಲ್ಲುದು. ಇದರಲ್ಲಿ ಯಾವುದೇ ಸಂಶಯವಿಲ್ಲ.

ವಾನರಗಳಿಂದ ಅಂಗಾಂಗಗಳನ್ನು ಬದಲಿ ಜೋಡಣೆಗಾಗಿ ಪಡೆಯುವ ಸಾಧ್ಯತೆ ತೀರಾ ಕಡಿಮೆ. ಏಕೆಂದರೆ ಬದಲಿಜೋಡಣೆಗಾಗಿಯೇ ವಾರನಗಳನ್ನು ಬೆಳೆಸಹೊರಟರೆ, ಪ್ರಾಣಿ ದಯಾಸಂಘದವರಿಂದ ತೀವ್ರ ಪ್ರತಿಭಟನೆಯನ್ನು ಎದುರಿಸಬೇಕಾಗುತ್ತದೆ. ಇದನ್ನು ಊಹಿಸಲೂ ಸಾಧ್ಯವಿಲ್ಲ. ಇನ್ನೂ ಒಂದು ಸಮಸ್ಯೆಯಿದೆ. ಬಂಧನದಲ್ಲಿ ವಾನರ ಸಂತಾನವರ್ಧನೆ ಬಲು ನಿಧಾನ. ಕೆಲವು ಸಲ ಸಂತಾನವರ್ಧನೆಯೇ ನಡೆಯುವುದಿಲ್ಲ. ಹಾಗಾಗಿ ಜಗತ್ತಿನ ಜನರ ಅಗತ್ಯಗಳನ್ನು ಪೂರೈಸಬಲ್ಲ ವಾನರಗಳ ಸಂಖ್ಯೆಗಳನ್ನು ಸೃಜಿಸುವ ಮಾತು ಅಸಾಧ್ಯವೇ ಸರಿ.

ಹಂದಿಗಳು ಹಾಗಲ್ಲ!

ಹಂದಿಗಳನ್ನು ಆಹಾರಕ್ಕಾಗಿಯೇ ಮನುಷ್ಯ ಸಾಕುತ್ತಾನೆ. ಕೊಲ್ಲುವುದಕ್ಕಾಗಿಯೇ ಹಂದಿಗಳನ್ನು ಸಾಕುವ ಬಗ್ಗೆ ೭,೦೦೦ ವರ್ಷಗಳಷ್ಟು ಹಳೆಯ ದಾಖಲೆಗಳಿವೆ. ಇಂದು ಪ್ರತಿವರ್ಷ ಸುಮಾರು ೯೫೭ ಲಕ್ಷ ಹಂದಿಗಳು ಮನುಷ್ಯರ ಹೊಟ್ಟೆಯನ್ನು ಸೇರುತ್ತಿವೆ. ಹಾಗಾಗಿ ಇನ್ನೊಂದಷ್ಟು ಲಕ್ಷ ಹಂದಿಗಳನ್ನು ಬದಲಿಜೋಡಣೆಯಂತಹ ಒಳ್ಳೆಯ ಕೆಲಸಕ್ಕೆ ಬಲಿ ನೀಡಿದರೆ, ಬಹುಶಃ ಪ್ರಾಣಿ ದಯಾಸಂಘದವರಿಂದ ಪ್ರತಿಭಟನೆ ಬಾರದಿರಬಹುದು. ಎರಡನೆಯದಾಗಿ ಹಂದಿಗಳ ಸಂತಾನವರ್ಧನೆ ಬಹಳ ಸುಲಭ. ಹೆಣ್ಣು ಹಂದಿಗೆ ೭ ತಿಂಗಳಾಗುತ್ತಿರುವಂತೆಯೇ ಸಂತಾನ ವರ್ಧನಾ ಸಾಮರ್ಥ್ಯ ಬರುತ್ತದೆ. ವರ್ಷಕ್ಕೆ ಎರಡು ಬಾರಿ ಮರಿಗಳನ್ನು ಹಾಕುತ್ತದೆ. ಒಂದೊಂದು ಸಲ ಸುಮಾರು ೧೦ ಮರಿಗಳನ್ನು ಈಯುತ್ತದೆ. ಹಾಗಾಗಿ ಅಗತ್ಯ ಪ್ರಮಾಣದ ಬದಲಿ ಅಂಗಗಳನ್ನು ಹಂದಿಗಳು ಮಾತ್ರ ಪೂರೈಸಬಲ್ಲವು!



**ಮಿಲಿಟರಿ :**

ಹಂದಿಯ ಅಂಗಾಂಗಗಳನ್ನು ಬದಲಿ ಜೋಡಣೆಯಲ್ಲಿ ಬಳಸುವುದು ಹೇಳಿದಷ್ಟು ಸುಲಭವಲ್ಲ. ಹಂದಿಯ ಒಂದು ಅಂಗವನ್ನು ಮನುಷ್ಯನ ದೇಹದೊಳಗೆ ಬದಲಿ ಜೋಡಿಸಿ. ಮನುಷ್ಯನ ದೇಹದಲ್ಲಿ ಇರುವ ಮಿಲಿಟರಿ ಪಡೆ (ವಿನಾವಣಾ ವ್ಯೂಹ = ಇಮ್ಯೂನ್ ಸಿಸ್ಟಂ) ಹಂದಿಯ ಅಂಗದ ಮೇಲೆ ಉಗ್ರ ಆಕ್ರಮಣವನ್ನು ಮಾಡುತ್ತವೆ. ನೋಡ ನೋಡುತ್ತಿರುವಂತೆಯೇ ಕೆಂಪು ಕೆಂಪಾಗಿರುವ ಹಂದಿಯ ಅಂಗ ಕಡುಗಪ್ಪಾಗಿಬಿಡುತ್ತದೆ. ಶಸ್ತ್ರವೈದ್ಯರು ಹೊಲಿಗೆಯನ್ನು ಹಾಕುವುದಕ್ಕೆ ಮೊದಲೇ ಮನುಷ್ಯನ ದೇಹ ಹಂದಿಯ ಅಂಗವನ್ನು ತಿರಸ್ಕರಿಸಿಬಿಡುತ್ತದೆ.

ಇದನ್ನು ''ಅತಿ ತೀವ್ರ ತಿರಸ್ಕಾರ'' (ಹೈಪರ್ ಅಕ್ಯೂಟ್ ರಿಜಕ್ಷನ್) ಎಂದು ಕರೆಯುತ್ತಾರೆ. ಮನುಷ್ಯನ ದೇಹದಲ್ಲಿರುವ ವಿನಾವಣಾವ್ಯೂಹವು ಹಂದಿಯ ಹೃದಯ ಮನುಷ್ಯನಿಗೆ ಸೇರದ ಪರಕೀಯ ವಸ್ತು ಎಂದು ಸಾರಾಸಗಟಾಗಿ ತಿರಸ್ಕರಿಸಿಬಿಡುತ್ತದೆ. ಹೀಗೆಯೇ ಕುರಿ, ನಾಯಿ ಮುಂತಾದ ಪ್ರಾಣಿಗಳ ಅಂಗಗಳನ್ನೂ ತಿರಸ್ಕರಿಸಿಬಿಡುತ್ತದೆ. ಒಂದು ವೇಳೆ ಚಿಂಪಾಂಜಿಯ ಅಂಗವನ್ನು ಬಳಸಿದರೆ, ನಮ್ಮ ದೇಹ ಅದನ್ನು ಇಷ್ಟು ತೀವ್ರವಾಗಿ ತಿರಸ್ಕರಿಸುವುದಿಲ್ಲ. ಸ್ವಲ್ಪ ನಿಧಾನವಾಗಿ ತಿರಸ್ಕರಿಸುತ್ತದೆ. ಏಕೆಂದರೆ ಚಿಂಪಾಂಜಿಯ ಕ್ರೋಮೋಸೋಮು ಶೇ. ೯೮.೪ ರಷ್ಟು ಮನುಷ್ಯರ ಹಾಗೇ ಇರುತ್ತದೆ. ಆದರೂ ಸಹ ಶೇ. ೧.೬ ಬೇರೆಯಾಗಿರುತ್ತದೆ. ಹಾಗಾಗಿ ತಡವಾಗಿಯಾದರೂ ಸರಿ ಚಿಂಪಾಂಜಿಯ ಅಂಗವನ್ನು ತಿರಸ್ಕರಿಸಿಬಿಡುತ್ತದೆ. ಹಂದಿಯ ಕ್ರೋಮೋಸೋಮುಗಳಿಗೂ ಮನುಷ್ಯರ ಕ್ರೋಮೋಸೋಮುಗಳಿಗೂ ಅಂತರ ಅಪಾರ. ಹಾಗಾಗಿ ಅವುಗಳ ಅಂಗಗಳು ಅತಿ ತೀವ್ರ ತಿರಸ್ಕಾರಕ್ಕೆ ಒಳಗಾಗುತ್ತವೆ. (ಇಲ್ಲಿ ನನಗೆ ಜೀವನಾಡಿ ಮಾರ್ಚ್ ೧೯೯೭ರಲ್ಲಿ ಪ್ರಕಟವಾದ ''ಹೃದಯ ಶಸ್ತ್ರತಜ್ಞನ ಹಂದಿ ಹಗರಣ'' ಲೇಖನ ನೆನಪಾಗುತ್ತಿದೆ. ಅಸ್ಸಾಮಿನ ಡಾ। ಬರೂವಾ ಎಂಬ ಹೃದಯ ಶಸ್ತ್ರವೈದ್ಯನು ಹಂದಿಯ ಹೃದಯವನ್ನು ಪೂರ್ಣೋಸೈಕಿಯ ಎಂಬ ವ್ಯಕ್ತಿಗೆ ಬದಲಿ ಜೋಡಿಸಲೆತ್ನಿಸಿ ಅವನ ಸಾವಿಗೆ ಕಾರಣವಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕುಖ್ಯಾತಿ ಪಡೆದದ್ದನ್ನು ನೀವೂ ನೆನಪಿಸಿ ಕೊಳ್ಳಬಹುದು).

ಹಂದಿಗಳ ಅಂಗಾಂಗಗಳನ್ನು ಬದಲಿ ಜೋಡಣೆಯಲ್ಲಿ ಬಳಸಬೇಕಾದರೆ ಈ ಅತಿ ತೀವ್ರ ತಿರಸ್ಕಾರವನ್ನು ತಡೆಗಟ್ಟಲೇಬೇಕು. ಆದರೆ ಅದನ್ನು ತಡೆಗಟ್ಟಬಲ್ಲ ಯಾವುದೇ ಉಪಾಯ ಈಗ ನಮ್ಮ ಹತ್ತಿರವಿಲ್ಲ. ಇಲ್ಲಿ ಕಾರ್ಲ್ ಈಬರ್ಸ್‌ನ ವರಾಹ - ೨೩ ಮತ್ತು ಅದರಂತಹ ಹಂದಿಗಳು ನಮ್ಮ ನೆರವಿಗೆ ಬರುತ್ತವೆ.

**ಉಸಿರುಕಟ್ಟುವಿಕೆ :**

ಅತಿತೀವ್ರ ತಿರಸ್ಕಾರವು ಉಸಿರು ಕಟ್ಟಿಸುವಿಕೆಯಿಂದ ಆರಂಭವಾಗುತ್ತದೆ. ಹಂದಿಯ ಅಂಗಕ್ಕೆ ಆಮ್ಲಜನಕದ ಸರಬರಾಜಾಗುವುದಿಲ್ಲ. ರಕ್ತ ಹೆಪ್ಪುಗಟ್ಟಿರುತ್ತದೆ. ಹಾಗಾಗಿ ಆಮ್ಲಜನಕ ಕೊರತೆಯಿಂದ ಹಂದಿಯ ಅಂಗ ಸತ್ತು ಬೇರೆಯಾಗಿ ಬಿಡುತ್ತದೆ.

ಒಂದು ಹಂದಿಯ ಯಕೃತ್ತನ್ನು ಬಬೂನಿನ ದೇಹದೊಳಗೆ ಬದಲಿ ಜೋಡಿಸಿ, ಬಬೂನಿನ ರಕ್ತವನ್ನು ಹಂದಿಯ ಯಕೃತ್ತಿನೊಳಗೆ ಹರಿಯಬಿಡುತ್ತಿರುವಂತೆಯೇ, ಬಬೂನಿನ ರಕ್ತದಲ್ಲಿರುವ ಪ್ರತಿಕಾಯಗಳು (ಆಂಟಿಬಾಡಿ) ಜೋಡಿಸಿರುವ ರಕ್ತನಾಳದ ಅಂಚಿನ ಮೇಲೆ ದಾಳಿಯಿಟ್ಟು ಅದಕ್ಕೆ ಅಂಟಿಕೊಂಡು ಬಿಟ್ಟು, ''ಶತ್ರು'' ಬಂದಿರುವ (ಪರಕೀಯ ವಸ್ತು - ಹಂದಿಯ ಯಕೃತ್ತು) ಸುದ್ದಿಯನ್ನು ಇಡೀ ವಿನಾವಣಾ ವ್ಯೂಹಕ್ಕೆ ಸಾರುತ್ತದೆ. ಆಗ ವ್ಯೂಹದ ಎಲ್ಲ ತುಕಡಿಗಳು

ಹಂದಿಯ ಯಕೃತ್ತನ್ನು ನಾಶಗೊಳಿಸಲು ಮುನ್ನುಗ್ಗುತ್ತವೆ. ಮೊದಲು ಪೂರಯಿಕ ವ್ಯವಸ್ಥೆ (ಕಾಂಪ್ಲಿಮೆಂಟರಿ ಸಿಸ್ಟಂ) ದಾಳಿಯಿಡುತ್ತದೆ. ಇವು ಹಲವು ಪ್ರೋಟೀನುಗಳ ಒಂದು ಗುಂಪು. ಇವು ರಕ್ತನಾಳದ ಒಳಪೊರೆಯ ನಡುವೆ ನುಸುಳುತ್ತವೆ. ಜೀವಕೋಶಗಳನ್ನು ನಾಶಮಾಡ ಲಾರಂಭಿಸುತ್ತವೆ. ಜೀವಕೋಶಗಳ ನಡುವೆ ಬಿರುಕು ಕಾಣಿಸಲಾರಂಭಿಸುತ್ತದೆ. ಈ ಬಿರುಕುಗಳ ಮೂಲಕ ರಕ್ತಸ್ರಾವ ಆರಂಭವಾ ಗುತ್ತದೆ. ರೇಷ್ಮೆಗಿಂತಲೂ ನುಣುಪಾದ ರಕ್ತನಾಳ ಒಳಪೊರೆ ಒರಟೊರಟಾಗುತ್ತದೆ. ರಕ್ತಕಣಗಳು ಈ ದರಗಿಗೆ ಅಂಟಿಕೊಂಡು ಹೆಪ್ಪುಗಟ್ಟಲಾರಂ ಭಿಸುತ್ತದೆ. ಸಣ್ಣ ವ್ಯಾಸದ ರಕ್ತನಾಳಗಳಲ್ಲಿ ಹೆಪ್ಪು ನಿಮಿಷಗಳಲ್ಲಿ ಕಟ್ಟಿಬಿಡುತ್ತದೆ. ಆಮ್ಲಜನಕ ಸರಬರಾಜನ್ನು ನಿಲ್ಲಿಸಿಬಿಡುತ್ತದೆ. ಆಗ ಯಕೃತ್ತು 'ಉಸಿರುಕಟ್ಟಿ' ಸಾಯಲಾರಂಭಿಸುತ್ತದೆ. ನೋಡ ನೋಡುತ್ತಿರು ವಂತೆಯೇ ಯಕೃತ್ತು ಕಪ್ಪಾಗಿ ಬಬೂನಿನ ಒಡಲಿನಿಂದ ಬೇರ್ಪಡುತ್ತದೆ.

*ನಿಗ್ರಾಹಕ :*

೧೯೯೨ರಲ್ಲಿ ಯೇಲ್‌ನಿಂದ ಬಂದ ಹಲವು ವಿಜ್ಞಾನಿಗಳು 'ಅಲೆಕ್ಸಿಯಾನ್' ಎಂಬ ಸಂಸ್ಥೆ ಯನ್ನು ಕಟ್ಟಿದರು. ಈ ಸಂಸ್ಥೆಯು, ವಿನಾವಣಾ ವ್ಯೂಹವು ನಡೆಸುವ ಅತಿ ತೀವ್ರ ತಿರಸ್ಕಾರವನ್ನು ತಡೆಗಟ್ಟುವ ಬಗ್ಗೆ ಮಾರ್ಗವನ್ನು ಹುಡುಕ ಲಾರಂಭಿಸಿತು.

ಈ ವೇಳೆಗೆ ಮಾನವನ ಪೂರಯಿಕ ನಿಗ್ರಾಹಕ (ಕಾಂಪ್ಲಿಮೆಂಟ್ ಇನ್‌ಹಿಬಿಟರ್) ವಂಶವಾಹಿ ಯನ್ನು ಕಂಡುಹಿಡಿದು ಅದರ ತದ್ರೂಪವನ್ನು (ಕ್ಲೋನ್) ಯಶಸ್ವಿಯಾಗಿ ಪ್ರಯೋಗಾಲ ಯದಲ್ಲಿ ಸೃಜಿಸಿದ್ದರು. ಪೂರಯಿಕ ನಿಗ್ರಾಹಕ ಎಂಬುದು ಒಂದು ಪ್ರೋಟೀನು. ಇದನ್ನು ನಮ್ಮ ದೇಹವೇ ಉತ್ಪಾದಿಸುತ್ತದೆ. ಅತಿ ತೀವ್ರ ತಿರಸ್ಕಾರ ನಡೆಯುವ್ವಾಗ, ಪೂರಯಿಕವು ಮನುಷ್ಯನ ಜೀವಕೋಶಗಳಿಗೆ ಹಾನಿ ಮಾಡದಂತೆ ಈ ಪ್ರೋಟೀನು ರಕ್ಷಿಸುತ್ತಿರುತ್ತದೆ. ಹಾಗಾಗಿ ಪೂರಯಿಕ ವ್ಯವಸ್ಥೆ ಹಂದಿಯ ಯಕೃತ್ತನ್ನು ಮಾತ್ರ ನಾಶಮಾಡುತ್ತದೆ. ಮನುಷ್ಯನ ಜೀವಕೋಶಗಳಿಗೆ ತೊಂದರೆಯನ್ನು ಕೊಡುವುದಿಲ್ಲ.

ಅಲೆಕ್ಸಿಯಾನ್ ವಿಜ್ಞಾನಿಗಳು ಪೂರಯಿಕ ನಿಗ್ರಾಹಕ ತದ್ರೂಪವನ್ನು ಬಳಸಲು ನಿಶ್ಚಯಿಸಿದರು. ಇದರ ವಂಶವಾಹಿಯನ್ನು ಹಂದಿಯ ಕ್ರೋಮೋಸೋಮುಗಳಲ್ಲಿ ಸೇರಿಸುವ ಯೋಜನೆಯನ್ನು ಹಾಕಿಕೊಂಡರು. ಆಗ ಹಂದಿಯ ಅಂಗದಲ್ಲಿರುವ ಪೂರಯಿಕ ನಿಗ್ರಾಹಕ ಕಸಿ ತಿರಸ್ಕಾರವನ್ನು ಸ್ವಲ್ಪ ಮಟ್ಟಿಗಾದರೂ ತಪ್ಪಿಸಬಲ್ಲುದು ಎಂದು ಅವರ ತರ್ಕವಾಗಿತ್ತು.

ಕೇವಲ ಮೂರೇ ಮೂರು ವರ್ಷಗಳ ಒಳಗೆ ಅಲೆಕ್ಸಿಯಾನ್ ತಂಡವು ಬ್ಲಾಕ್ಸ್‌ಬರ್ಗ್‌ನಲ್ಲಿರುವ ವರ್ಜಿನಿಯ ಟೆಕ್‌ನ ವಿಲಿಯಂ ವೆಲಾಂಡರನ ಜೊತೆಗೂಡಿ ಪೂರಯಿಕ ನಿಗ್ರಾಹಕ ವಂಶವಾಹಿ ಯನ್ನು ಹಂದಿಯ ಕ್ರೋಮೋಸೋಮಿನೊಳಗೆ ''ಹೊಲಿದೇ ಬಿಟ್ಟರು'' !

ವೆಲಾಂಡರ್ ಹೆಣ್ಣು ಹಂದಿಯ ಗರ್ಭಾಶಯ ದಲ್ಲಿದ್ದ ಫಲಕಟ್ಟಿದ ಅಂಡಾಣುಗಳನ್ನು ಹೊರ ತೆಗೆದರು. ಅತ್ಯಂತ ಸೂಕ್ಷ್ಮ ಸೂಜಿಯ ನೆರವಿನಿಂದ ಬಿಲಿಯಗಟ್ಟಲೆ DNA ತಂತುಗಳನ್ನು ಚುಚ್ಚಿ ದರು. ಈ ತಂತುಗಳಲ್ಲಿ ಮಾನವ ಪೂರಯಿಕ ನಿಗ್ರಾಹಕ ವಂಶವಾಹಿ ಹಾಗೂ ಈ ವಂಶವಾಹಿ ಯನ್ನು ಸಕಾಲದಲ್ಲಿ ಜಾಗ್ರತಗೊಳಿಸುವ 'ನಿಯಂತ್ರಕ' ವಂಶವಾಹಿಯೂ ಇತ್ತು. ಹಂದಿಯ ಅಂಡಾಣು ಕೋಟ್ಯಾಂತರ ಸಲ ವಿಭಜನೆ ಮರು ವಿಭಜನೆಗೆ ಒಳಗಾಗಿ ಮರಿ ಹಂದಿಯನ್ನು ಸೃಜಿಸು ತ್ತದೆಯಲ್ಲವೆ! ಇಷ್ಟು ಸಲ ವಿಭಜನೆಯಾಗುವಾಗ ಅಕಸ್ಮಾತ್ ಯಾವಾಗಲಾದರೂ ಒಂದು ಸಲ ಚುಚ್ಚಿದ ಮಾನವ DNA ತಂತುಗಳೂ, ಹಂದಿಯ ಕ್ರೋಮೋಸೋಮುಗಳಲ್ಲಿ ಬೆರೆತುಕೊಳ್ಳ ಬಹುದು ಎಂದು ಅವರು ನಿರೀಕ್ಷಿಸಿದ್ದರು. ಆದರೆ ಯಾವ ಹಂದಿ ಮರಿಯಲ್ಲಿ ಮಾನವ ವಂಶ ವಾಹಿಗಳಿವೆ, ಯಾವುದರಲ್ಲಿ ಇಲ್ಲ ಎಂಬುದನ್ನು ಮೇಲುನೋಟದಿಂದ ಹೇಳಲು ಸಾಧ್ಯವಿರಲಿಲ್ಲ. ಹಾಗಾಗಿ ಮರಿಗಳ ಪ್ರಸವ ವಾಗುವವರೆಗೂ ವಿಲಾಂಡರ್ ಕಾಯಲಾರಂಭಿ ಸಿದರು. ಹಂದಿ ಮರಿಗಳು ಹುಟ್ಟಿ ೪ ತಿಂಗಳಾದ ಮೇಲೆ ಎಲ್ಲ ಮರಿಗಳ ರಕ್ತವನ್ನು ಪರೀಕ್ಷಿಸಿದರು. ಬಹುಪಾಲು ಹಂದಿ ಮರಿಗಳು ೧೦೦ಕ್ಕೆ ೧೦೦ರಷ್ಟು ಹಂದೀರಕ್ತವನ್ನೇ ಹೊಂದಿದ್ದವು. ಆದರೆ ಕೆಲವೇ ಕೆಲವು ಹಂದಿಗಳು ಮನುಷ್ಯನ ವಂಶವಾಹಿಯನ್ನು ಹೊತ್ತಿದ್ದವು. ಮಾನವ ಪೂರಯಿಕ ನಿಗ್ರಾಹಕವನ್ನು ರಕ್ತದಲ್ಲಿ ಬಿಡುಗಡೆ ಮಾಡುತ್ತಿದ್ದವು. ಈ ಪ್ರೋಟೀನನ್ನು ಹೊಂದಿದ್ದ ಹಂದಿಗಳನ್ನು ವಿಲಾಂಡರ್ ಬೇರ್ಪಡಿಸಿದರು. ಇವುಗಳ ಸಂತಾನವನ್ನು ಕಟ್ಟುನಿಟ್ಟಾಗಿ ಅಭಿವೃದ್ಧಿಪಡಿಸಿದರು. ಹಂದಿಗಳ ಈ ಸಣ್ಣ ಗುಂಪು ..... ಮನುಷ್ಯನ ಬದಲಿಜೋಡಣೆಗೆ ಅಗತ್ಯ ಅಂಗಾಂಗಗಳನ್ನು ಪೂರೈಸುವ ಅರ್ಹತೆಯನ್ನು ಹೊಂದಿದ್ದವು! ಹಂದಿಯ ನರನ ಅಂಶ ಬೆರೆತಿರುವ ಕಾರಣ ಇವನ್ನು ''ನರವರಾಹಗಳು'' (ಜೆನಿಟಿಕಲಿ ಆಲ್ಟರ್ಡ್ ಪಿಗ್ಸ್) ಎಂದು ಕರೆಯಬಹುದು.

ವಿಜ್ಞಾನಿಗಳು ತಡ ಮಾಡಲಿಲ್ಲ. ಈ ನರವರಾಹದ ಹೃದಯವೊಂದನ್ನು ತೆಗೆದು ಕೊಂಡು ಬಬೂನಿಗೆ ಬದಲಿಜೋಡಿಸಿದರು. ಈ ನರವರಾಹಹೃದಯವು ಬಬೂನಿನ ದೇಹದಲ್ಲಿ ೧೦ ದಿನಗಳ ಕಾಲ ಮಿಡಿಯಿತು !......

*ಅದ್ಭುತ !! :*

ಹಂದಿಯ ಅಂಗವನ್ನು ಉಗ್ರವಾಗಿ ತಿರಸ್ಕರಿಸುವ ಬಬೂನಿನ ವಿನಾವಣಾ ವ್ಯವಸ್ಥೆ ಯು, ಮನುವರಾಹದ ಹೃದಯವನ್ನು ೧೦ ದಿನಗಳವರೆಗೆ ತಡೆದುಕೊಂಡಿತೆಂದರೆ ಅದು ಸಂತೋಷಕರ ಹಾಗೂ ಉತ್ತೇಜಕರ ವಿಷಯ ! ಇಷ್ಟು ತಾಳಿಕೆಗೆ ಕಾರಣ ಪೂರಯಿಕ ನಿಗ್ರಾಹಕ ವಂಶವಾಹಿ !

ಇದೇ ಪ್ರಯೋಗವನ್ನು ಮನುಷ್ಯರ ಮೇಲೆ ಪ್ರಯೋಗಿಸಿ, ಅವನನ್ನು ಕೇವಲ ೧೦ ದಿನಗಳ ವರೆಗೆ ಬದುಕಿಸಿದರೆ ಅದರಿಂದ ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು ?

*ನಿರಾಶರಾಗಬೇಕಿಲ್ಲ !*

ಅಮೆರಿಕಾದ ಪ್ರಿನ್ಸ್‌ಟನ್‌ನಲ್ಲಿರುವ ನೆಕ್ಸ್‌ಟ್ರಾನ್ ಎಂಬಸಂಸ್ಥೆ ಒಂದು ವಿಶಿಷ್ಟ ಪ್ರಯೋಗವನ್ನು ಮನುಷ್ಯರ ಮೇಲೆ ಮಾಡಿದೆ. ನರವರಾಹದ ಯಕೃತ್ತನ್ನು, ಅದರ ದೇಹದಿಂದ ಬೇರ್ಪಡಿಸಿತು. ಯಕೃತ್ ವೈಫಲ್ಯ ಹೊಂದಿದ ವ್ಯಕ್ತಿಯ ರಕ್ತವನ್ನು ಈ ನರವರಾಹ ಯಕೃತ್ತನ ಮೂಲಕ ಹಾಯಿಸಿತು. ಈ ಹಂದಿ ಯಕೃತ್ತು ಕೆಲಸ ಮಾಡಲಾರಂಭಿಸಿತು! ಮನುಷ್ಯನ ರಕ್ತದಲ್ಲಿರುವ ಮಿಲಿಟರಿ ಪಡೆ ನರವರಾಹ ಯಕೃತ್ತನ್ನು ಸ್ವಲ್ಪ ತಡವಾಗಿಯಾದರೂ ಸರಿ ನಾಶಪಡಿಸುವುದು ಖಚಿತವಿತ್ತು. ಆದರೆ ಅಲ್ಲಿಯವರೆಗೆ ಆ ಮನುಷ್ಯ ಬದುಕಿರುತ್ತಾನಲ್ಲವೆ! ಈ ಅವಧಿಯಲ್ಲಿ ಅವನಿಗೆ ಬದಲಿ ಯಕೃತ್ತು ದೊರೆಯಬಹುದು !! ಒಂದು ವೇಳೆ ದೊರೆಯಲಿಲ್ಲವೆಂದರೆ ಮತ್ತೊಂದು ಹೊಸ ನರವರಾಹ ಯಕೃತ್ತನ್ನು ಜೋಡಿಸಿ ದರಾಯಿತು !!........




**ಮತ್ತೊಂದು :**

ಅಲೆಕ್ಸಿಯಾನ್ ತಂಡ ಅಲ್ಪ ಯಶಸ್ಸಿನಿಂದ ಬೀಗದೆ, ಪ್ರಯೋಗವನ್ನು ಮುಂದುವರಿಸಿತು. ಅತಿ ತೀವ್ರ ತಿರಸ್ಕಾರವನ್ನು ತಡೆಗಟ್ಟಬಲ್ಲ ಮಾನವನ ಎರಡನೆಯ ವಂಶವಾಹಿಯೊಂದನ್ನು ಹಂದಿಯ ಕ್ರೋಮೋಸೋಮುಗಳಲ್ಲಿ ಪೋಣಿಸಲು ನಿರ್ಧರಿಸಿತು ! ಕಸಿಯ ಉಳಿವನ್ನು ಹತ್ತು ದಿನಗಳಿಂದ ಹಲವು ತಿಂಗಳುಗಳವರೆಗೆ ವಿಸ್ತರಿಸಬಹುದೆಂದು ಅದರ ವಿಜ್ಞಾನಿಗಳು ಲೆಕ್ಕ ಹಾಕಿದರು.

ಇಂದಿಗೆ೫ ವರ್ಷಗಳ ಹಿಂದೆ, ಆಸ್ಟ್ರೇಲಿಯದ ವಿಜ್ಞಾನಿಗಳ ಒಂದು ತಂಡ, ಮನುಷ್ಯನ ದೇಹ ಹಂದಿಯ ಅಂಗವನ್ನು ಏಕೆ ತಿರಸ್ಕರಿಸುತ್ತದೆ ಎಂಬುದಕ್ಕೆ ಬಹಳ ಮುಖ್ಯವಾಗಿದ್ದ ಒಂದು ಕಾರಣವನ್ನು ಕಂಡುಹಿಡಿದಿದ್ದರು. ಹಂದಿಯ ಅಂಗಾಂಗಗಳಲ್ಲಿರುವ ರಕ್ತನಾಳಗಳ ಒಳಪೊರೆಯ ಮೇಲೆ ''ಆಲ್ಪ ಗ್ಯಾಲಕ್ಟೋಸ್'' ಎಂಬ ವಿಶೇಷ ಶರ್ಕರ ಅಣುವಿರುತ್ತದೆ. ಈ ಆಲ್ಪ ಗ್ಯಾಲಕೋಸ್ಸನ್ನು ಸದೆಬಡಿಯುವ ಪ್ರತಿಕಾಯಗಳು ಮನುಷ್ಯರ ರಕ್ತದಲ್ಲಿ ಹೇರಳವಾಗಿರುತ್ತವೆ. ಇವು ನೇರವಾಗಿ ಆಲ್ಪಗ್ಯಾಲಕ್ಟೋಸಿಗೆ ಅಂಟಿಕೊಂಡು ಪೂರಯಿಕ ವ್ಯವಸ್ಥೆಯನ್ನು ಒಳಗೊಂಡಂತೆ ವಿನಾವಣಾ ವ್ಯೂಹದ ಇತರ ತುಕಡಿಗಳನ್ನು ಆಹ್ವಾನಿಸುತ್ತವೆ. ಇವೆಲ್ಲವೂ ಆಲ್ಪಗ್ಯಾಲಕ್ಟೋಸಿನ ಮೇಲೆಯೇ ಆಕ್ರಮಣ ನಡೆಸುವುದರಿಂದ ಹಂದಿಯ ರಕ್ತನಾಳ ತೂತುಬಿದ್ದು, ರಕ್ತಸೋರಿ, ಹೆಪ್ಪುಗಟ್ಟಿ, ಅಂಗವು ತೀವ್ರ ತಿರಸ್ಕಾರಕ್ಕೆ ಒಳಗಾಗುತ್ತದೆ.

ಒಂದು ವೇಳೆ ಹಂದಿಯ ಅಂಗದ ರಕ್ತನಾಳದಲ್ಲಿ ಆಲ್ಪ ಗ್ಯಾಲಕ್ಟೋಸ್ ಇರದಿದ್ದರೆ!!??........

ಆಗ ಮನುಷ್ಯನ ಪ್ರತಿಕಾಯ ದಾಳಿ ಮಾಡುವುದೇ ಇಲ್ಲ ! ಪ್ರತಿಕಾಯ ಸಂದೇಶ ಕೊಡದ ಕಾರಣ ಉಳಿದ ತುಕಡಿಗಳೂ ಅಲ್ಲಿಗೆ ಬರುವುದಿಲ್ಲ. ಇದೆಲ್ಲ ಸರಿ. ಆದರೆ ಬೆಕ್ಕಿಗೆ ಗಂಟೆ ಕಟ್ಟುವುದು ಹೇಗೆ ? ಆಲ್ಪ ಗ್ಯಾಲಕ್ಟೋಸನ್ನು ನಿವಾರಿಸುವುದು ಹೇಗೆ ?

★ ಮೊದಲನೆಯ ಮಾರ್ಗ, ಆಲ್ಪಗ್ಯಾಲಕ್ಟೋಸ್ ರಹಿತ ಹಂದಿಗಳನ್ನು ರೂಪಿಸುವುದು. ಆದರೆ ಸಧ್ಯಕ್ಕೆ ಈ ಪ್ರಯತ್ನದಲ್ಲಿ ನಮಗೆ ಯಶಸ್ಸು ದೊರೆತಿಲ್ಲ.

★ ಎರಡನೆಯ ಮಾರ್ಗ, ಆಲ್ಪ ಗ್ಯಾಲಕ್ಟೋಸನ್ನು ನಿವಾರಿಸಲು ಸಾಧ್ಯವಿಲ್ಲ ಎಂದಾದ ಮೇಲೆ, ಅದರ ಸ್ವರೂಪವನ್ನು ಬದಲಾಯಿಸಿ ಮಾನವ ಮಿಲಿಟರಿ ಪಡೆಯ ಕಣ್ಣಿಗೆ ಮಣ್ಣೆರಚುವುದು !

ಅಲೆಕ್ಸಿಯಾನ್ ವಿಜ್ಞಾನಿಗಳು ಎರಡನೆಯ ಮಾರ್ಗವನ್ನು ಆಯ್ಕೆ ಮಾಡಿದರು. ಮನುಷ್ಯನ ದೇಹದಲ್ಲಿ ೧೭ - ಟ್ರಾನ್ಸ್‌ಫರೇಸ್ ಎಂಬ ಕಿಣ್ವವನ್ನು (ಎಂಜೈಮ್) ಉತ್ಪಾದನೆ ಮಾಡುವ ವಂಶವಾಹಿಯನ್ನು ಹಂದಿಯ ಕ್ರೋಮೋಸೋಮುಗಳಲ್ಲಿ ಪೋಣಿಸಿದರು. ಈ ಕಿಣ್ವವು ಅಪಾಯಕಾರಿ ಆಲ್ಪ ಗ್ಯಾಲಕ್ಟೋಸಿನ ಸ್ವರೂಪವನ್ನು ಬದಲಾಯಿಸುತ್ತಿತ್ತು. ಹೊಸ ರೂಪವು ಮನುಷ್ಯರ ''O'' ಗುಂಪಿನ ಕೆಂಪು ರಕ್ತ ಕಣದ ಮೇಲಿರುವ ಒಂದು ಶರ್ಕರ ಅಣುವನ್ನು ಹೋಲುತ್ತಿತ್ತು.

''O'' ಗುಂಪಿನ ಶರ್ಕರ ಅಣು ಸರ್ವಮಿತ್ರ. ಈ ಶರ್ಕರ ಮನುಷ್ಯರ ಎಲ್ಲ ರಕ್ತ ಗುಂಪಿನವರಿಗೂ ಸರಿಹೊಂದುತ್ತದೆ.

ಅಲೆಕ್ಸಿಯಾನ್ ವಿಜ್ಞಾನಿಗಳು ಈ ಎರಡು ಕೆಲಸಗಳಲ್ಲಿ ನೆರವಾಗುವಂತೆ ಕಾರ್ಲ್ ಈಬರ್ಟ್‌ನನ್ನು ಭೇಟಿಯಾದರು. ಈಬರ್ಟ್ ಫಾರಂ ಪ್ರಾಣಿಗಳ ಜೆನಿಟಿಕ್ ಇಂಜಿನಿಯರಿಂಗ್ ನಡೆಸುವುದರಲ್ಲಿ ಅಗ್ರಗಣ್ಯ. ಹಾಗಾಗಿ ಅಲೆಕ್ಸಿಯಾನ್ + ಈಬರ್ಟ್‌ರ ಸಂಯುಕ್ತ ಪ್ರಯತ್ನದ ಫಲವಾಗಿ ವರಾಹ - ೨೩ ಸೃಷ್ಟಿಯಾಗಿದೆ. ಹಾಗೆಯೇ ಮಾನವ H-ಟ್ರಾನ್ಸ್‌ಫರೇಸ್ ಕಿಣ್ವವನ್ನು ಉತ್ಪಾದಿಸುವ ಒಂದು ಸಣ್ಣ ಹಂದಿ ಮಂದೆ ರೂಪುಗೊಂಡಿದೆ !

ಇತ್ತೀಚಿಗೆ !.....

ಅಲೆಕ್ಸಿಯಾನ್ ತಂಡವು ಪೂರಯಿಕ ನಿಗ್ರಾಹಕ ನರವರಾಹ ಹಾಗೂ H-ಟ್ರಾನ್ಸ್‌ಫರೇಸ್ ನರವರಾಹಗಳಲ್ಲಿ ಒಳಸಂತಾನ ನಡೆಸಿದರು. ಇವುಗಳ ಗುಣಗಳೆರಡನ್ನು ಹೊತ್ತ ನರವರಾಹಗಳು ಕಳೆದ ಜನವರಿಯಲ್ಲಿ ಹುಟ್ಟಿದವು. ಈ ಹಂದಿಮರಿಗಳ ಅಂಗಾಂಗಗಳು ಬದಲಿ ಜೋಡಣೆಗೆ ಅಂಗಗಳನ್ನು ಒದಗಿಸಬಲ್ಲವು. ಈ ಬದಲಿ ಅಂಗಗಳನ್ನು ಶಾಶ್ವತವಾಗಿ ಕಸಿ ಮಾಡಲು ಸಾಧ್ಯವಿಲ್ಲ. ಮನುಷ್ಯ ಬದಲಿ ಅಂಗ ದೊರೆಯುವವರೆಗೆ ಜೀವ ಹಿಡಿಯಲು ಹಂದಿಯ ಅಂಗಗಳನ್ನು ತಾತ್ಕಾಲಿಕವಾಗಿ ಬಳಸಬಹುದು. ಸೂಕ್ತ ವಿನಾವಣಾ ನಿಗ್ರಾಹಕ ಔಷಧಗಳನ್ನು (ಇಮ್ಯುನೋ ಸಪ್ರೆಸಿವ್ ಡ್ರಗ್ಸ್) ಬಳಸಿ ಕಸಿಯು ಹಲವು ತಿಂಗಳುಗಳವರೆಗೆ ಸಕ್ರಿಯವಾಗಿರುವಂತೆ ಮಾಡಬಹುದು.

**ಪರಿಪೂರ್ಣ :**

ಹಂದಿಯ ಮಾನವೀಕರಣದ ಆರಂಭವಿದಷ್ಟೆ. ಜಗತ್ತಿನ ಇನ್ನೂ ಅನೇಕ ಸಂಸ್ಥೆಗಳು ಹಂದಿಯ ಆಲ್ಪ ಗ್ಯಾಲಕ್ಟೋಸ್ ವಂಶವಾಹಿಯನ್ನು ಪರಿಪೂರ್ಣವಾಗಿ ನಾಶಪಡಿಸಿ, ಅದರ ಸ್ಥಳದಲ್ಲಿ ''O'' ಶಕ್ತಿಗುಂಪಿನ ಶರ್ಕರವನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸುತ್ತಿದ್ದಾರೆ.

ಹಂದಿಯ ಅಂಗ ತಿರಸ್ಕಾರಕ್ಕೆ

ಕಾರಣವಾಗಬಹುದಾದ ಇತರ ಅಂಶಗಳ ಪಟ್ಟಿಯನ್ನು ಮಾಡಿ, ಅವುಗಳನ್ನು ಒಂದೊಂದಾಗಿ ನಿವಾರಿಸಿ, ಅವುಗಳ ಸ್ಥಾನದಲ್ಲಿ ಮಾನವ ವಂಶವಾಹಿಗಳನ್ನು ಸೇರಿಸುವ ಪ್ರಯತ್ನ ನಡೆಸುತ್ತಿದ್ದಾರೆ. ಹಾಗಾಗಿ ಮುಂದೊಂದು ದಿನ ಮಾನವ ವಿನಾವಣಾ ವ್ಯೂಹವನ್ನು ೧೦೦ಕ್ಕೆ ೧೦೦ರಷ್ಟು ''ಮೋಸಗೊಳಿಸುವ'' ನರವರಾಹದ ಸೃಜನೆಯಾಗಲಿದೆ.

ಈ ನರವರಾಹದ ರಕ್ತಗುಂಪು 'O' ಆಗಲಿದೆ. ಹಾಗಾಗಿ ಹಂದಿ ಅಂಗಾಂಗಗಳನ್ನು ಎಲ್ಲ ಮನುಷ್ಯರು ಬದಲಿ ಜೋಡಣೆಗಾಗಿ ಬಳಸಿಕೊಳ್ಳಬಹುದು. ಹಂದಿ 'ಸರ್ವದಾನಿ' ಯಾಗಲಿದೆ!

### ಅಂತರ:

ನರವರಾಹದ ಪರಿಪೂರ್ಣಸೃಷ್ಟಿ ಇಂದು ಅಸಾಧ್ಯವಲ್ಲ.

ತೊಂದರೆ ಬಂದಿರುವುದು ನರ - ವರಾಹದ ಅಂತರವನ್ನು ಕಾದಿಟ್ಟುಕೊಳ್ಳುವುದರ ಬಗೆಗೆ.

ಇಂದು ಜಗತ್ತಿನಾದ್ಯಂತ ಏಡ್ಸ್ ಮಹಾಮಾರಿ ಕರಾಳ ನೃತ್ಯ ನಡೆಸುತ್ತಿದೆ. HIV ಏಡ್ಸ್‌ಗೆ ಕಾರಣ ವೈರಸ್ಸು. ಇದು ಮೂಲತಃ ಮಂಗಗಳ ವೈರಸ್ಸು. ಆಫ್ರಿಕದ ಹೈಟಿ ಪ್ರದೇಶದ ಹಸಿರು ಮಂಗಗಳಲ್ಲಿ ವಾಸಿಸುವ ಈ ವೈರಸ್ಸು, ಅಲ್ಲಿಯ ಜನರ ದೇಹವನ್ನು ಪ್ರವೇಶಿಸಿ, ಅವರ ದೇಹಕ್ಕೆ ಒಗ್ಗಿಕೊಂಡು ಬಿಟ್ಟಿತು ! ಹೈಟಿಜನ ಹಸಿರು ಮಂಗಗಳನ್ನು ಆಹಾರಕ್ಕಾಗಿ ಬೇಟೆಯಾಡುತ್ತಿದ್ದರು. ಅದರ ಫಲವಾಗಿ ಹೊಸ ರೋಗವೊಂದು ಹುಟ್ಟಿಕೊಂಡಿತು.

ಹಂದಿಯ ಒಡಲಿನಲ್ಲೂ ಇಂತಹ ಮಾರಕ ವೈರಸ್ಸುಗಳು ಇರಬಹುದಲ್ಲವೆ ! ಹಂದಿಯ ಅಂಗಾಂಗಗಳನ್ನು ಬದಲಿ ಜೋಡಣೆಗಾಗಿ ಬಳಸುವುದಾದರೆ, ಈ ವೈರಸ್ಸುಗಳಿಗೆ - ಹೊಸ ರೋಗಗಳಿಗೆ - ಆಹ್ವಾನ ಕೊಟ್ಟಂತಾಗುವುದಿಲ್ಲವೆ! ?

### ಒಂದು ವಾದವಿದೆ.

ಜೀವ ವಿಕಾಸ ಪಥದಲ್ಲಿ ಸೂಕ್ಷ್ಮ ಕ್ರಿಮಿಗಳು ಇತರ ಪ್ರಾಣಿಗಳ ಮೇಲೆ ಅವ್ಯಾಹತವಾಗಿ ದಾಳಿ ಮಾಡುತ್ತಿರುತ್ತವೆ. ಇತರ ಪ್ರಾಣಿಗಳಲ್ಲಿ ರೋಗಗಳನ್ನು ಉಂಟು ಮಾಡುವ ಬ್ಯಾಕ್ಟೀರಿಯ ವೈರಸ್ಸುಗಳ ವಿರುದ್ಧ ವಾನರಗಳು, ಮನುಷ್ಯರು ಕಾಲಕ್ರಮೇಣ ರೋಧಕತೆಯನ್ನು ಬೆಳೆಸಿಕೊಂಡು ಬಿಟ್ಟಿರುತ್ತವೆ. ಹಾಗಾಗಿ ಇಂದು ವಾನರ ಹಾಗೂ ಮನುಷ್ಯ ದೇಹ ಆ ವೈರಸ್ಸುಗಳ ನೆನಪನ್ನು ಇಟ್ಟುಕೊಂಡಿರುತ್ತವೆ. ಹಂದಿ ಅಂಗಗಳಲ್ಲಿ ಇಂತಹ ವೈರಸ್ಸುಗಳೇನಾದರೂ ಇದ್ದಲ್ಲಿ, ಅವನ್ನು ಉಗ್ರವಾಗಿ ತಿರಸ್ಕರಿಸುತ್ತದೆ ನಮ್ಮ ವಿನಾವಣಾ ವ್ಯೂಹ!

ಹಂದಿ ಅಂಗಾಂಗಗಳನ್ನು ಬದಲಿ ಜೋಡಣೆಯಲ್ಲಿ ಬಳಸಲಾರಂಭಿಸಿದರೆ, ಅನಾದಿ ಕಾಲದ ಯುದ್ಧ ಮತ್ತೆ ಆರಂಭವಾಗಲು ಅವಕಾಶ ಮಾಡಿಕೊಟ್ಟಂತಾಗುತ್ತದೆ. ಈ ಯುದ್ಧದಲ್ಲಿ ಅಕಸ್ಮಾತ್ ವೈರಸ್ಸುಗಳು ವಿಜಯಗಳಿಸಿದರೆ ಅಲ್ಲಿಗೆ ಮುಗಿಯಿತು ! ಹೊಸರೋಗವೊಂದು Aids ನಂತೆ ಮನುಷ್ಯರನ್ನು ಕಾಡಲಾರಂಭಿಸುತ್ತದೆ! ಈ ಸಾಧ್ಯತೆ ಹೆಚ್ಚಿರುತ್ತದೆ. ಏಕೆಂದರೆ ಕಸಿ ಉಳಿಯಲು ಇಮ್ಯುನೋಸಪ್ರೆಸೆಂಟ್ ಔಷಧಗಳನ್ನು ಬಳಸುತ್ತೇವಲ್ಲವೆ! ಹಾಗಾಗಿ ನಮ್ಮ ವಿನಾವಣಾ ವ್ಯೂಹ ಪರಿಪೂರ್ಣ ಜಾಗೃತವಾಗಿರುವುದಿಲ್ಲ. ಹಾಗಾಗಿ ಈ ವ್ಯೂಹದ ಕಣ್ಣುತಪ್ಪಿಸಿ ಮನುಷ್ಯರ ದೇಹದಲ್ಲಿ ಬೇರುಬಿಟ್ಟು, ಹಿಗ್ಗಿಕೊಂಡು ರೋಗ ಉಂಟು ಮಾಡುವ ಸಾಧ್ಯತೆ ಹೆಚ್ಚಿರುತ್ತದೆ.

ಕಳೆದ ಮಾರ್ಚ್‌ನಲ್ಲಿ ಇಂಗ್ಲೆಂಡಿನ ವಿಜ್ಞಾನಿಗಳು ಇಂತಹ ಕನಿಷ್ಠ ಒಂದು ವೈರಸ್ಸು ಆದರೂ ಹಂದಿಯ ಮೂತ್ರಪಿಂಡದಲ್ಲಿ ಇರುವುದನ್ನು ಪತ್ತೆ ಹಚ್ಚಿದ್ದಾರೆ. ಈ ವೈರಸ್ಸಿನ ವಂಶವಾಹಿಗಳು ಹಂದಿಯ ಕ್ರೋಮೋಸೋಮುಗಳೊಡನೆ ನೈಸರ್ಗಿಕವಾಗಿ ಥಳುಕು ಹಾಕಿಕೊಂಡಿವೆ. ಈ ವೈರಸ್ಸುಗಳು ಮನುಷ್ಯರಲ್ಲಿ ರೋಗವನ್ನುಂಟು ಮಾಡಬಲ್ಲ ಸಾಮರ್ಥ್ಯವನ್ನು ಹೊಂದಿವೆ ಎಂದು ವಿಜ್ಞಾನಿಗಳ ಅಭಿಮತ!

### ಒಂದು ಕೆಲಸ ಮಾಡಬಹುದು.

ಹಂದಿಯ ಕ್ರೋಮೋಸೋಮುಗಳಲ್ಲಿರುವ ವೈರಸ್ಸಿನ ವಂಶವಾಹಿಗಳನ್ನು ಜೆನೆಟಿಕ್ ಇಂಜಿನಿಯರಿಂಗ್ ತಂತ್ರಜ್ಞಾನದ ನೆರವಿನಿಂದ ಕತ್ತರಿಸಿ ತೆಗೆಯಬಹುದು. ನಿಜ. ಆದರೆ ನಮಗೆ ತಿಳಿಯದಂತಹ ಇನ್ನೂ ಹಲವು ವೈರಸ್‌ಗಳಿರಬಹುದಲ್ಲವೆ ! ಅವೆಲ್ಲವನ್ನೂ ಗುರುತಿಸಿ ನಿವಾರಿಸುವುದು ಹೇಳಿದಷ್ಟು ಸುಲಭದ ಕೆಲಸವಾಗದು. ಇದೊಂದು ದೊಡ್ಡ ಸವಾಲಾಗಬಹುದು.

ಕೆಲವು ವಿಜ್ಞಾನಿಗಳು ಮತ್ತೊಂದು ರೀತಿ ವಾದಿಸುತ್ತಾರೆ. ಪಶು ವೈರಸ್ಸುಗಳು ಮನುಷ್ಯರಿಗೆ ಜಿಗಿಯುವ ಸಾಧ್ಯತೆಯನ್ನು ಅವರು ತಳ್ಳಿಹಾಕುವುದಿಲ್ಲವಾದರೂ, ವಾಸ್ತವದಲ್ಲಿ ಹಾಗಾಗುವುದು ಅಪರೂಪ ಎಂದು ವಾದಿಸುತ್ತಾರೆ. ಬೆಕ್ಕುಗಳಲ್ಲಿ ರಕ್ತಕ್ಯಾನ್ಸರನ್ನು ಉಂಟುಮಾಡುವ ವೈರಸ್ ಇದೆ. ಬೆಕ್ಕು ಮನುಷ್ಯರೊಡನೆ ಹೊಂದಿಕೊಂಡು ಸಾವಿರಾರು ವರ್ಷಗಳಿಂದ ಬದುಕುತ್ತಿದೆ. ಆದರೆ ಈ ವೈರಸ್ಸು ಮನುಷ್ಯರಿಗೆ ತೊಂದರೆಯನ್ನುಂಟು ಮಾಡಿರುವುದಕ್ಕೆ ಪುರಾವೆಯಿಲ್ಲ. ಹಂದಿಯಲ್ಲಿ ವೈರಸ್ಸುಗಳಿದ್ದರೂ ಸಹ ಅವು ಅಷ್ಟು ಸುಲಭವಾಗಿ ''ಪಕ್ಷಾಂತರ'' ಮಾಡಲಾರವು ಎಂದು ಹೇಳುತ್ತಾರೆ.

### ಕಾನೂನು :

ವಿಜ್ಞಾನಿಗಳು ಹಂದಿ ಅಂಗಾಂಗಗಳ ಸುರಕ್ಷಿತತೆಯ ಬಗೆಗೆ ಏನು ಬೇಕಾದರೂ ಹೇಳಲಿಬಿಡಿ. ಕಳೆದ ವರ್ಷ ಬ್ರಿಟನ್ನಿನ ಸರ್ಕಾರ ಪ್ರಾಣಿಗಳ ಅಂಗಾಂಗಗಳನ್ನು ಮನುಷ್ಯರಿಗೆ ಬದಲಿಜೋಡಿಸುವ ಪ್ರಯೋಗಗಳ ಬಗ್ಗೆ ನಿಷೇಧ ಹೇರಿದೆ. ಇಂತಹ ಅಂಗಗಳು ಸಂಪೂರ್ಣ ಸುರಕ್ಷಿತ ಎಂದು ಋಜುವಾತಾಗುವವರೆಗೂ, ಈ ಪ್ರಯೋಗಗಳನ್ನು ಮನುಷ್ಯರ ಮೇಲೆ ಮಾಡಬಾರದು ಎಂದು ಸ್ಪಷ್ಟವಾಗಿ ಹೇಳಿದೆ.

ಅಮೆರಿಕದಲ್ಲಿ ಫುಡ್ ಅಂಡ್ ಡ್ರಗ್ ಅಡ್‌ಮಿನಿಸ್ಟ್ರೇಷನ್ ಇಂತಹ ಪಶು-ನರ ಪ್ರಯೋಗಗಳ ಬಗೆಗೆ ಅತೀವ ಎಚ್ಚರಿಕೆಯನ್ನು ವಹಿಸುತ್ತಿದೆ. ವಿಜ್ಞಾನಿಗಳು ಸೂಕ್ತ ನರ ವರಾಹವನ್ನು ಸೃಜಿಸಿದರು ಎಂದೇ ಇಟ್ಟುಕೊಳ್ಳೋಣ. ಇದರ ಅಂಗಗಳನ್ನು ಬದಲಿ ಜೋಡಣೆಯಲ್ಲಿ ಬಳಸಲು ಪರವಾನಗಿ ತತ್‌ಕ್ಷಣ ದೊರೆಯುವುದಿಲ್ಲ. ಸೋಂಕು ರೋಗಗಳ ತಜ್ಞರು ಇಂತಹ ಹಂದಿಯು ಮನುಷ್ಯರಿಗೆ ಅಪಾಯ ಒಡ್ಡಬಲ್ಲ ಕ್ರಿಮಿಗಳಿಂದ ಮುಕ್ತವಾಗಿದೆ ಎಂದು ಪ್ರಮಾಣ ಪತ್ರ ನೀಡಬೇಕು. ಆಗ ಮಾತ್ರ ನರವರಾಹ ಬದಲಿಜೋಡಣೆ ಸಾಧ್ಯವಾಗುತ್ತದೆ.

ವರಾಹದ ಆಧುನಿಕ ಅವತಾರ ರೋಗಿಗಳ ಸಂಕಟವನ್ನು ಪರಿಹರಿಸಿ - ಬಹುಶಃ ವಿಷ್ಣುವಿನ ಏಕದಶಾವತಾರ - ಎಂಬ ಸ್ಥಾನಕ್ಕೆ ಅರ್ಹವಾಗಬಹುದೇ ?

❐

# ಬೆಳ್ಳಕ್ಕಿಯಂಥ ಹುಡುಗಿಯರು....

– ಸಂಗು ಹುಂಡೇಕಾರ



**ಆಸ್ಪತ್ರೆಯೆಂದರೆ ನಮಗೆ ನೆನಪಾಗುವುದು..... ಅಲ್ಲಿನ ಸ್ಮಶಾನ ಮೌನ; ಜನರ ಮುಖಗಳಲ್ಲಿನ ದುಗುಡ, ಭಯ; ಔಷಧಿಗಳ, ರೋಗಿಗಳ ಉಸಿರುಕಟ್ಟಿಸುವ ವಾಸನೆ; ಇದ್ಯಾವುದರ ಪರಿವೆಯಿಲ್ಲದಂತೆ ಶುಭ್ರ, ಇಸ್ತ್ರೀ ಮಾಡಿದ ಬಟ್ಟೆ ಧರಿಸಿ, ಪರೇಡ್ ಮಾಡುವವರಂತೆ ಕತ್ತೆತ್ತಿ, ಶೂಗಳನ್ನು ಟಕ್ ಟಕ್ ಎಂದು ಶಬ್ದ ಮಾಡುತ್ತ ಅಡ್ಡಾಡುವ ನರ್ಸ್‌ಗಳು.....**

ಆಸ್ಪತ್ರೆಯೆಂದ ಮೇಲೆ ಗಲಾಟೆ, ಸಣ್ಣಪುಟ್ಟ ದುರ್ಘಟನೆಗಳು ಸಾಮಾನ್ಯ. ಎಷ್ಟೇ ಶ್ರದ್ಧೆಯಿಂದ ಸೇವೆ ಮಾಡಿದರೂ ಸಿಡುಕುವ, ಆರೋಪಿಸುವ ರೋಗಿಗಳು; ದುಡ್ಡಿನಿಂದಲೇ ಎಲ್ಲವನ್ನೂ ಅಳೆವ ಸಿರಿವಂತರು; ಸಭ್ಯರಂತೆ ಸೋಗುಹಾಕಿ "ಈಗ ಬಂದೆ" ಎಂದು ಹೇಳಿ, ಸಾವಿರಾರು ರೂಪಾಯಿಗಳ ಬಿಲ್ ಕೊಡದೇ ಪಂಗನಾಮ ಹಾಕಿ ಹೋಗುವ ದುಷ್ಟರು; ಆಸ್ಪತ್ರೆಯೆಂದರೆ ಬ್ಯೂಟಿ ಪಾರ್ಲರ್ರು, ನರ್ಸುಗಳೆಂದರೆ ಅಪ್ಸರೆಯರು ಎಂದುಕೊಂಡು ಅಡ್ಮಿಟ್ ಆಗುವ ಅಸಭ್ಯರು.... ಇದೆಲ್ಲವನ್ನು ನಿಭಾಯಿಸಿಕೊಂಡು, ಮೇಲಿನವರ ಮರ್ಜಿ ಕಾಯ್ದುಕೊಂಡು, ತಮ್ಮ ನೌಕರಿ ಕಾಯ್ದುಕೊಂಡು, ಗೌರವ ಕಾಯ್ದುಕೊಂಡು, ಒಡೆಯನ ಕೋಪ, ಬೇಸರ, ಸಿಡಿಗುಂಡುಗಳಂಥ ಬೈಗುಳಗಳನ್ನು ತಾಳಿಕೊಂಡು, ಹೆಣಗಳಂಥ ಪೇಶಂಟ್‌ಗಳ ಮಧ್ಯೆ ಹೆಣಗುವ, ಒಂದಿಷ್ಟು ಖುಷಿಗಾಗಿ ಹುಡುಕುವ, ಪ್ರೀತಿಗಾಗಿ ಹಂಬಲಿಸುವ, ನೆಮ್ಮದಿಗಾಗಿ ಕನಸುವ ಮುಗ್ಧ ಹುಡುಗ - ಹುಡುಗಿಯರು.....

ಅಲ್ಲಿ ಬರೀ ಯಾಂತ್ರಿಕತೆಯಿರುವುದಿಲ್ಲ. ಕೇವಲ ಸಂಬಳಕ್ಕಾಗಿ ಆ ಹೃದಯಗಳು ದುಡಿಯುವುದಿಲ್ಲ . ಓರ್ವ ಕೂಲಿಗೆ, ನೌಕರನಿಗೆ ಸಿಗುವ ಸಂಬಳದ ಹೊರತಾಗಿ ಅವರಿಗೆ ಈ ಸಮಾಜದಿಂದ ಇನ್ನೇನೋ ಬೇಕು. ಪುಟ್ಟ ಲಂಗಗಳ ಬೆಳ್ಳನೆಯ ಬೆಳ್ಳಕ್ಕಿಯಂಥ ಹುಡುಗಿಯರು ಗುಣಮುಖನಾಗಿ ಮನೆಗೆ ಹೋಗುವ ಪ್ರತಿ ರೋಗಿಯ ಕಣ್ಣಲ್ಲಿ ಒಂದು ಕೃತಜ್ಞತೆಯ ಎಳೆಯನ್ನು ಹುಡುಕುತ್ತಾರೆ. ಒಂದು ಹಾರೈಕೆಯನ್ನು, ಮುಗುಳ್ನಗೆಯನ್ನು ಜನರಿಂದ ಬಯಸುವ ಹಕ್ಕು ಅವರಿಗಿದೆ. ಗಾಯಕ್ಕೆ ಸವರುವ ಮುಲಾಮಿಗಿಂತ ಅವರ ಮೃದು ಬೆರಳುಗಳ ಅಪ್ಯಾಯಮಾನತೆ ಹೆಚ್ಚು ಹಿತಕರವಾಗಿರುತ್ತದೆ. ಅವರ ಹಿತವಾದ ಮಾತುಗಳು ಇಂಜೆಕ್ಷನ್ ಕೊಡುವ ನೋವನ್ನು ಮರೆಸಿಬಿಡುತ್ತವೆ. ಇದ್ಯಾವುದನ್ನೂ ಅರ್ಥೈಸಿಕೊಳ್ಳದ ಸಮಾಜ ಅವರನ್ನು ಭಕ್ಷೀಸಿಗಾಗಿ ಬಾಯ್ದೆರೆವ ರಾಕ್ಷಸರೆಂದು, ಮಾನವೀಯತೆಯಿಲ್ಲದ ಮೃಗಗಳಂತೆ ವರ್ತಿಸುವ ಕಟುಕರೆಂದು, ರೋಗಿಗಳ ಆರೈಕೆ ಮಾಡದೆ ಬಿಲ್ ಏರಿಸುವ ನೀಚರೆಂದು, ಔಷಧಿಗಳನ್ನು ಕದ್ದು ಮಾರಿಕೊಳ್ಳುವ ವಂಚಕರೆಂದು ಆಪಾದಿಸುತ್ತದೆ.

ಆಸ್ಪತ್ರೆಯಲ್ಲಿ ಕೆಲಸ ಮಾಡುವ ಹುಡುಗಿಯರು ತಮ್ಮ ಸಹೋದ್ಯೋಗಿಗಳೊಂದಿಗೆ ಆಡುವ ಚಕ್ಕಂದ, ಮಾಡುವ ಮೋಜು, ಪಡುವ ಖುಷಿ ಜನರಿಗೆ ಅಶ್ಲೀಲವೆಂಬಂತೆ, ಪಾಪದಂತೆ ತೋರುತ್ತದೆ. ಆದರೆ, ಎಲ್ಲರನ್ನೂ ಪ್ರೀತಿಯಿಂದ ಕಾಣುವ, ಎಲ್ಲರ ಭಾವನೆಗಳಿಗೆ ಸ್ಪಂದಿಸುವ ಆ ನರ್ಸ್‌ಗಳ, ಸಿಸ್ಟರ್‌ಗಳ, ಡಾಕ್ಟರ್‌ಗಳ ಹೃದಯದಲ್ಲೂ ಕನಸುಗಳಿರುತ್ತವೆ. ತಮ್ಮನ್ನು ಯಾರಾದರೂ ಪ್ರೀತಿಸಲಿ, ತಮ್ಮ ಕಾಳಜಿ ಮಾಡಲಿ ಎಂದು ಅವರೂ ಬಯಸುತ್ತಾರೆ. ತಮ್ಮಂತೇ ನಿರಾಶರಾದ ತಮ್ಮ ಸಹೋದ್ಯೋಗಿಗಳಲ್ಲಿ ಆ ಪ್ರೀತಿ - ಪ್ರೇಮವನ್ನು ಕಂಡುಕೊಳ್ಳಲು ಮುಂದಾಗುತ್ತಾರೆ. ಅವರ ನೋವಿನಲ್ಲಿ, ಒಂಟಿತನದಲ್ಲಿ ಪಾಲು ಕೇಳುತ್ತಾರೆ. ಒಂದಾಗುವ, ಮದುವೆಯ, ಭವಿಷ್ಯದ ನೂರೆಂಟು ಕಲ್ಪನೆಗಳನ್ನು ಕೂಡಿಡುತ್ತಾರೆ.



*ತಾನು ಸಾವಿನಂಚಿನಲ್ಲಿರುವೆನೆಂದು, ಇನ್ನೆಂದೂ ಹಾಸಿಗೆ ಬಿಟ್ಟು ಮೇಲೇಳಲಾರೆನೆಂದು ಗೊತ್ತೇ ಇರದ ರೋಗಿಯೊಬ್ಬ, ಡಿಸ್‌ಚಾರ್ಜ್ ಆದ ತಕ್ಷಣ ಮಾಡಿ ಮುಗಿಸಬೇಕಾಗಿರುವ ಕೆಲಸಗಳ ಕುರಿತು, ಹಮ್ಮಿಕೊಳ್ಳಲಿರುವ ಯೋಜನೆಗಳ ಕುರಿತು ಹೇಳಿಕೊಳ್ಳುವಾಗ..... ಉಕ್ಕಿ ಬರುವ ದುಃಖವನ್ನು ನುಂಗಿ "Get well soon, sir !" ಎಂದು ಮೊಗದಲ್ಲಿ ಚೈತನ್ಯ ತುಂಬಿ ಕೊಂಡು ಹೇಳುತ್ತಾಳಲ್ಲಾ, ಆಕೆಯ ಆ ಒಂದು ಮಾತಿಗೆ ಜನ ಕೊಡುವ ಭಿಕ್ಷೀಸು, ಕಾಣಿಕೆ, ಲಂಚ, ಭಿಕ್ಷೆಗಳು ಸಾಟಿಯಾಗಬಲ್ಲವೇ?*



ತನ್ನ ಆರೋಗ್ಯ ಸರಿಯಿರದಿದ್ದರೂ, ತನಗೂ ವಿಶ್ರಾಂತಿಯ ಅವಶ್ಯಕತೆಯಿದ್ದರೂ, ಹಗಲು ರಾತ್ರಿಯೆನ್ನದೆ ಜೀವದ ಹಂಗು ತೊರೆದು, ಇನ್ನೊಂದು ಜೀವವನ್ನುಳಿಸಲು ಹೋರಾಡುವ ಆ ತ್ಯಾಗಗುಣಕ್ಕೆ ಪ್ರತಿಯಾಗಿ ಏನನ್ನು ಕೊಡಲಾದೀತು ?

ಮುಸ್ಲಿಂ ಹುಡುಗಿ ಹಿಂದುವನ್ನು ಪ್ರೀತಿಸತೊಡಗುತ್ತಾಳೆ. ಆತನ ಮುಗ್ಧತೆ, ಸರಳತೆ ಮತ್ತು ನಾಜೂಕುತನಗಳು ಅವಳನ್ನು ಆಕರ್ಷಿಸಿರುತ್ತವೆ. ಬಾಲ್ಯವಿವಾಹದ ಶಾಪಕ್ಕೆ ಬಲಿಯಾದ ಹುಡುಗಿ ಸ್ವಂತ ಕಾಲ ಮೇಲೆ ನಿಲ್ಲುವ, ಕಟ್ಟುಪಾಡುಗಳನ್ನು ಕಿತ್ತೊಗೆದು ತಾನಿಷ್ಟಪಟ್ಟವನೊಂದಿಗೆ ಬಾಳನ್ನು ಹಂಚಿಕೊಳ್ಳುವ ದಿಟ್ಟ ಸಾಹಸಕ್ಕೆ ಕೈ ಹಾಕುತ್ತಾಳೆ. ಇಂಥ ಅದೆಷ್ಟೋ ನನಸಾಗದ ಕನಸುಗಳನ್ನು, ಈಡೇರದ ಬಯಕೆಗಳನ್ನು ಹೊತ್ತು ಬದುಕು ಸಾಗಿಸುವ ಈ ಹುಡುಗಿಯರಿಗೆ ಒಳಿತಾಗಲೆಂದು, ಇವರು ಬಯಸಿದ್ದೆಲ್ಲ ದೊರಕಲೆಂದು ಹರಸುವ ಹಿರಿತನದ ಕೊರತೆ ನಮ್ಮ ಸಮಾಜಕ್ಕಿದೆ. ನಾವು ಇನ್ನೂ ಬೆಳೆಯಬೇಕಾಗಿದೆ.

ಇಂದು ವೈದ್ಯಕೀಯ ರಂಗ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿರುವುದರಲ್ಲಿ, ಇದೊಂದು ವ್ಯಾಪಾರವಾಗಿ, ಹಣಗಳಿಕೆಯ ಮಾಧ್ಯಮವಾಗಿ, ಅಂತಸ್ತಿನ ಹುದ್ದೆಯಾಗಿ ಪರಿಣಮಿಸುವಲ್ಲಿ ಸಮಾಜ, ಸರಕಾರಗಳ ಪ್ರತ್ಯಕ್ಷ ಮತ್ತು ಪರೋಕ್ಷ ಪಾಲಿದೆ. ❐

# ಮುಗ್ಧ ಮಕ್ಕಳ 'ಪ್ರಬುದ್ಧ' ಪ್ರಶ್ನೆಗಳು

ಭಾಗ - ೨

■ ಡಾ. ನಾ. ಸೋಮೇಶ್ವರ

**ಬೌದ್ಧಿಕ ಮಟ್ಟ ಬೆಳೆದಂತೆ ಮಕ್ಕಳ ವಿಚಾರಧಾರೆಗಳು, ಯೋಚನಾ ಲಹರಿಗಳು, ಪ್ರಶ್ನೆಗಳು, ಪ್ರಯೋಗಗಳು ಪವಾಡವೆನ್ನುವಷ್ಟು ಅದ್ಭುತ ರೀತಿಯಲ್ಲಿ ಬೆಳೆಯುತ್ತಿವೆ. ಇಂದಿನ ಮಕ್ಕಳಿಗೆ ''ಏನು ಗೊತ್ತಿಲ್ಲ ?'' ಎಂದು ಕೇಳಿ ನೋಡಿ; ನೀವೇ ತೆಪ್ಪಗಾಗುವಂತೆ ಉತ್ತರಿಸಿ ಬಿಡುತ್ತಾರೆ. ಅವರೇನಾದರೂ ನಿಮ್ಮನ್ನು ಪ್ರಶ್ನಿಸುವ ಮೂಡಲ್ಲಿದ್ದರೆ ಮುಗೀತು ನಿಮ್ಮ ಕಥೆ.....**

ಐದು ವರ್ಷಗಳಿಗಿಂತ ಕಿರಿಯ ಮಕ್ಕಳಿಗೆ SEX ಎಂಬುದರ ನಿಜವಾದ ಅರ್ಥ ತಿಳಿದಿರುವುದಿಲ್ಲ. ಆದರೆ ಈ ಶಬ್ದ ಮಕ್ಕಳ ಕಿವಿಯ ಮೇಲೆ ಆಗಾಗ ಬೀಳಬಹುದು. ಹಿರಿಯರು ಮಾತನಾಡುವಾಗ ತಮಗರಿವಿಲ್ಲದಂತೆಯೇ ಈ ಶಬ್ದವನ್ನು ಉಪಯೋಗಿಸಬಹುದು. ಅಥವಾ ಟಿ.ವಿ.ಯಲ್ಲಿ ಕೇಳಿರಬಹುದು. ಇಲ್ಲವೇ ದೊಡ್ಡ ಹುಡುಗರು ತಮ್ಮೊಳಗೆ SEX ಬಗ್ಗೆ ಮಾತಾಡುತ್ತಿರುವುದನ್ನು ಈ ಪುಟ್ಟ ಮಕ್ಕಳು ಆಲಿಸಿರಬಹುದು.

''ಅಮ್ಮಾ SEX ಎಂದರೆ ಏನು ?'' ಎಂದು ನಿಮ್ಮ ಮಗು ಪ್ರಶ್ನೆ ಕೇಳಿದರೆ ನೀವು ಒಮ್ಮೆಲೇ ಕಂಗಾಲಾಗಿಬಿಡಬಹುದು. SEX ಎಂಬುದರ ಅರ್ಥ ನಿಮಗೆ ತಿಳಿದಿದೆ. ಅದೇ ಅರ್ಥದಲ್ಲಿ ಮಗು ಪ್ರಶ್ನೆ ಕೇಳುತ್ತಿದೆ ಎಂದು ನೀವು ಗಾಬರಿ ಬೀಳಬಹುದು. ಆದರೆ ಮಗುವು ಖಂಡಿತಾ ಆ ಅರ್ಥದಲ್ಲಿ ಪ್ರಶ್ನೆ ಕೇಳಿರುವುದಿಲ್ಲ.

ನೀವು ಮೊದಲು ನಿಮ್ಮ ಮುಖಭಾವನೆಗಳ ಮೇಲೆ ಹಿಡಿತವಿಟ್ಟುಕೊಳ್ಳಬೇಕು. ಆನಂತರ ನಿಮ್ಮ ಧ್ವನಿಯ ಮೇಲೆ ನೀವು ಗಾಬರಿಯಾದ ಭಾವ ನಿಮ್ಮ ಮುಖದ ಮೇಲೆ ಕಂಡು ಬಂದಿತೆಂದರೆ





ಅದನ್ನು ತಟ್ಟನೆ ನಿಮ್ಮ ಮಗು ಗುರುತಿಸಿಬಿಡುತ್ತದೆ. ತನ್ನ ಪ್ರಶ್ನೆಯಿಂದ ಅಮ್ಮ ಗಾಬರಿಗೊಂಡಿದ್ದಾಳೆ. ಅಂದ ಮೇಲೆ ತಾನು ಕೇಳಬಾರದ ಪ್ರಶ್ನೆಯನ್ನು ಕೇಳಿಬಿಟ್ಟಿದ್ದೇನೆ ಎಂದು ಮಗುವಿಗೆ ಅನಿಸಬಹುದು. ಧ್ವನಿಯು ಸಹಜವಾಗಿರಲಿ. ಸಮಾಧಾನದಿಂದ ಸಹಜವಾಗಿ ಉತ್ತರಿಸಿ. ಸಿಡುಕಿನಿಂದ ಅಥವಾ ಅಸಹನೆಯಿಂದ ಉತ್ತರಿಸಬೇಡಿ. ''ಸುಮ್ಮನಿರೋ..... ಶುದ್ಧ ತಲೆಹರಟೆ'' ಎಂದಂತೂ ಖಂಡಿತ ಬೈಯಬೇಡಿ.

''ನೋಡು ಮಗSEX ಅಂದರೆ, ಕನ್ನಡದಲ್ಲಿ 'ಲಿಂಗ' ಎಂದು ಹೇಳುತ್ತೇವೆ. ಅಂದರೆ ನೀನು ಗಂಡು ಹುಡುಗನೋ ಅಥವಾ ಹೆಣ್ಣು ಹುಡುಗಿಯೋ ಎಂಬುದನ್ನು ತಿಳಿಯಲು ಉಪಯೋಗಿಸುವ ಶಬ್ದವನ್ನು'' ಎಂದು ತಿಳಿಹೇಳಬಹುದು. ನಿಮ್ಮ ಮಗು ಪ್ರಶ್ನಿಸುವುದನ್ನು ಅಲ್ಲೇ ನಿಲ್ಲಿಸಿದರೆ ಚಿಂತೆಯಿಲ್ಲ. ಒಂದು ವೇಳೆ ''SEX ಮಾಡೋದು ಅಂದ್ರೇನಮ್ಮ'' ಎಂದು ಪ್ರಶ್ನಿಸಿತೆಂದರೆ ಎಚ್ಚರಿಕೆಯಿಂದ ಉತ್ತರವನ್ನು ಕೊಡಬೇಕಾಗುತ್ತದೆ. '' SEX ಮಾಡೋದು ಅಂದ್ರೆ ಒಂದು ರೀತಿಯಲ್ಲಿ ಮುದ್ದಿಸೋದು. ಇದನ್ನು ದೊಡ್ಡವರು ಮಾಡುತ್ತಾರೆ'' ಎಂದು ಅದಕ್ಕೆ ತಿಳಿಯುವ ರೀತಿಯಲ್ಲಿ ವಿವರಿಸುವುದು ಸೂಕ್ತವಾಗುತ್ತದೆ.

ಇಲ್ಲಿ ಮೂಲ ಸೂತ್ರವಿಷ್ಟೆ, ನೀನು ಕೇಳಬಾರದ ಪ್ರಶ್ನೆ ಕೇಳಿದೆ ಎಂಬ ಭಾವನೆ ಮಗುವಿಗೆ ಬರಬಾರದು. SEX ಎಂಬುದು ಮುಚ್ಚಿಡುವ ವಿಷಯ ಅಥವಾ ಕೆಟ್ಟ ವಿಷಯ ಎಂಬ ಕಲ್ಪನೆ ಬರಬಾರದು. ಜೊತೆಗೆ ಸುಳ್ಳನ್ನಂತು ಖಂಡಿತ ಹೇಳಬಾರದು. ಸತ್ಯ ವಿಷಯವನ್ನು ಅದಕ್ಕೆ ಅರ್ಥವಾಗುವಂತೆ - ಅನವಶ್ಯಕ ವಿವರಗಳಿಗೆ ಹೋಗದಂತೆ - ವಿವರಿಸುವುದು ಒಳ್ಳೆಯದು.

### ಎಲ್ಲಿಂದ ಬಂದೆ ?

ಈ ಪ್ರಶ್ನೆಯನ್ನು ಎಲ್ಲ ಮಕ್ಕಳು ಒಂದಲ್ಲ ಒಂದು ದಿವಸ ಕೇಳುತ್ತವೆ. ಅದರಲ್ಲೂ ನೀವು ಗರ್ಭಿಣಿಯಾಗಿರುವಾಗ ಈ ಪ್ರಶ್ನೆಯನ್ನು ನಿಮ್ಮ ಮಗು ಕೇಳಬಹುದು. ಹಿರಿಯರು ಹೊಟ್ಟೆಯಲ್ಲಿ ಮಗು ಬೆಳೆಯುತ್ತಿರುವ ವಿಷಯದ ಬಗ್ಗೆ ಒಂದಲ್ಲ ಒಂದು ರೀತಿಯಲ್ಲಿ ಮಾತನಾಡುವುದನ್ನು ಮಗು ಖಂಡಿತ ಕೇಳಿರುತ್ತದೆ. ಅಮ್ಮನ ಹೊಟ್ಟೆಯಲ್ಲಿ ಮಗು ಹೇಗೆ ಹೋಯಿತು ? ಯಾವಾಗ ಹೋಯಿತು ? ಯಾಕೆ ಹೋಯಿತು ? ಹೇಗೆ ಹೊರಬರುತ್ತದೆ ? ಯಾವಾಗ ಹೊರ ಬರುತ್ತದೆ ಎಂಬ ಪ್ರಶ್ನೆಗಳು ಕಾಡಬಹುದು. ಮಗು ಖಂಡಿತ ಇಷ್ಟೆಲ್ಲ ಪ್ರಶ್ನೆಗಳನ್ನು ಕೇಳದಿರಬಹುದು. ಆದರೆ ಪಾಪು ಹೊಟ್ಟೇಲಿ ಹ್ಯಾಗೆ ಹೋಯ್ತು ಎಂದಂತೂ ಸರಳವಾಗಿ ಪ್ರಶ್ನಿಸಬಹುದು. ಈ ಪ್ರಶ್ನೆಗೆ ಅಷ್ಟೇ ಸರಳವಾದ ಉತ್ತರವನ್ನು ಕೊಡಬೇಕು. ''ಪಪ್ಪ ಒಂದು ಬೀಜವನ್ನ ಅಮ್ಮನ ಹೊಟ್ಟೆಯಲ್ಲಿ ನೆಟ್ಟರು. ಅದು ಪಾಪುವಾಗಿ ಬೆಳೆಯುತ್ತಿದೆ''



ಎಂದೆನ್ನಬಹುದು. ನೆಲದಲ್ಲಿ ಬೀಜ ಬಿತ್ತಿದಾಗ ಅದು ಗಿಡವಾಗುವುದನ್ನು ಮಗು ನೋಡಿರುತ್ತದೆ. ಹಾಗಾಗಿ ಹೆಚ್ಚಿನ ಪ್ರಶ್ನೆಯನ್ನು ಕೇಳದಿರಬಹುದು. ''ಮಗು ಹ್ಯಾಗೆ ಹೊರಕ್ಕೆ ಬರುತ್ತೆ ?'' ಎಂಬ ಪ್ರಶ್ನೆಗೂ ಹಾಗೇ ಉತ್ತರಿಸಬಹುದು. ''ಅಮ್ಮಾ ಹುಶ್.... ಮಾಡುತ್ತಾರಲ್ಲ... ಅಲ್ಲಿಂದಲೇ ಮಗು ಆಚೆ ಬರುತ್ತೆ'' ಎಂದು ಹೇಳಬಹುದು.

ಪಾಶ್ಚಾತ್ಯ ದೇಶಗಳಲ್ಲಿ ಪಾಲಕರು ನಮಗಿಂತಲೂ ಪ್ರಾಮಾಣಿಕವಾಗಿ ಮಕ್ಕಳ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಪ್ರಸವಾವಧಿಯಲ್ಲಿ ಗಂಡನೂ ಜೊತೆಗಿರಬೇಕು; ಮಕ್ಕಳೂ ಜೊತೆಗಿರಬೇಕು ಎಂದು ಆಶಿಸುತ್ತಾರೆ. 'ಸಹಜ ಪ್ರಸವ' (ನಾರ್ಮಲ್ ಡೆಲಿವರಿ) ಆಗುವಂತಹ ಪ್ರಸಂಗಗಳಲ್ಲಿ ಮಕ್ಕಳನ್ನು ತಾಯಿಯೊಡನೆ ಇರಲು ಬಿಡಬಹುದು. ತಂದೆ ತಾಯಿಯರು ಹೆದರಬಾರದು. ಆಸ್ಪತ್ರೆಯಲ್ಲಿ ವೈದ್ಯರು, ದಾದಿಯರು ಸಹಜವಾಗಿ ವರ್ತಿಸಬೇಕು. ಆಗ ಮಗುವು ಪ್ರಸವವನ್ನು ಧೈರ್ಯದಿಂದ ನೋಡಬಲ್ಲುದು. ಅದರ ಮನಸ್ಸಿನ ಮೇಲೆ ದುಷ್ಪರಿಣಾಮವಾಗುವ ಸಾಧ್ಯತೆ ಕಡಿಮೆ. ಪ್ರಸವವಾದ ಎಲ್ಲ ಹಂತಗಳನ್ನು ಮಗುವಿಗೆ ತೋರಿಸುವ ಬದಲು, ಮಗು ಹೊರ ಬರುವ ಅವಧಿಯನ್ನಷ್ಟೇ ತೋರಿಸಬಹುದು. ಹುಟ್ಟಿದ ಮಗು ಅಳುವುದು, ಹೊಕ್ಕಳು ಬಳ್ಳಿ ಕತ್ತರಿಸಿ ಅದನ್ನು ಶುಚಿಗೊಳಿಸುವುದು, ಅದಕ್ಕೆ ಸ್ನಾನ ಮಾಡಿಸುವುದು ಇತ್ಯಾದಿಗಳನ್ನೆಲ್ಲ ಮಗು ನೋಡಬಹುದು. ಇದರಿಂದ ಆ ಮಗುವಿನ ಮೇಲೆ ಪ್ರೀತಿ ಹೆಚ್ಚುತ್ತದೆ.

## ಅಜ್ಜಿ ಎಲ್ಲಿ ?

ಸಾವು ಎಂದರೆ ಏನು ?

ಬಹುಶಃ ಈ ಪ್ರಶ್ನೆಗೆ ಯಾರೂ ಉತ್ತರವನ್ನು ತಿಳಿದಿಲ್ಲ. ನಚಿಕೇತನು ಯಮನಿಂದ ಸಾವಿನ ರಹಸ್ಯ ತಿಳಿದ ಎಂಬ ಕಥೆಯು ಸಾವನ್ನು ಅರಿಯಬಯಸುವ ಮಾನವ ಕುತೂಹಲದಿಂದ ಹುಟ್ಟಿರುವಂತಹದ್ದು. ಸಾವಿನ ಬಗ್ಗೆ ನಂಬಿಕೆಗಳು ನಮ್ಮಲ್ಲಿ ಒಬ್ಬರಿಂದ ಒಬ್ಬರಿಗೆ ಬೇರೆ ಬೇರೆಯಾಗಿರುತ್ತದೆ. ಹೀಗಿರುವಾಗ ನಿಮ್ಮ ಮಗು ಸಾವು ಎಂದರೇನು ಎಂಬ ಪ್ರಶ್ನೆಯನ್ನು ಹಾಕಿದರೆ ಅದಕ್ಕೆ ಏನೆಂದು ತಾನೆ ಉತ್ತರಿಸುತ್ತೀರಿ ?

ಮಗು ಸಾವಿನ ಬಗ್ಗೆ ಪ್ರಶ್ನೆ ಕೇಳುವ ಪ್ರಸಂಗಗಳು ಖಂಡಿತ ಬರುತ್ತವೆ. ಮನೆಯಲ್ಲಿ ಎಲ್ಲರ ಮುದ್ದಿನ ಮರಿಯಾಗಿದ್ದ ನಾಯಿ ಒಂದು ದಿವಸ ಸತ್ತು ಹೋಯಿತೆಂದರೆ, ಅದರ ಪ್ರಮುಖ ಪ್ರಭಾವ ಮಕ್ಕಳ ಮೇಲಾಗುತ್ತದೆ. ''ನಾಯಿ ಸತ್ತು ಹೋಯಿತೆ?... ಹಾಗಂದರೇನು ? ಸಾಯುವುದು ಎಂದರೇನು ?.... ಸತ್ತ ಮೇಲೆ ಯಾಕೆ ಮತ್ತೆ ಬರುವುದಿಲ್ಲ?'' ಎಂದು ಪ್ರಶ್ನಿಸುತ್ತದೆ. ಮಕ್ಕಳ ಈ ಪ್ರಶ್ನೆಯನ್ನು ಲಘುವಾಗಿ ಗಣಿಸಬಾರದು. ಮಗುವಿನ ದೃಷ್ಟಿಯಲ್ಲಿ ಸಾಕು ಪ್ರಾಣಿಗಳೂ ಸಹ ಮನೆಯ ಸದಸ್ಯರೇ ಆಗಿರುತ್ತವೆ.

ಅಷ್ಟು ಮುದ್ದು ಮಾಡುತ್ತಿದ್ದ ಅಜ್ಜಿ ಒಮ್ಮೆಲ

### ನಿಮ್ಮ ಮಕ್ಕಳ 'ಪ್ರಬುದ್ಧ' ಪ್ರಶ್ನೆಗಳಿಗೆ ಉತ್ತರಿಸಲು ಕೆಲವು ಕಿವಿಮಾತುಗಳು

೧. ನಿಮ್ಮ ಮಗುವಿನೊಡನೆ ಸಾಧ್ಯವಾದಷ್ಟರ ಮಟ್ಟಿಗೆ ಪ್ರಾಮಾಣಿಕವಾಗಿರಿ. ಪ್ರಾಮಾಣಿಕವಾಗಿ ಉತ್ತರಿಸಿ. ಪ್ರಾಮಾಣಿಕವಾಗಿ ವ್ಯವಹರಿಸಿ.

೨. ಪ್ರಶ್ನೆಗಳಿಗೆ ಉತ್ತರಿಸುವಾಗ ಮಗುವಿನ ವಯಸ್ಸಿನ ಕಡೆಗೆ ಗಮನ ಕೊಡಿ. ಅದರ ಬೌದ್ಧಿಕ ಸಾಮರ್ಥ್ಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳಿ. ಅದಕ್ಕನುಗುಣವಾಗಿ ಉತ್ತರಿಸಿ.

೩. ಮಗು ಪ್ರಶ್ನೆ ಕೇಳಿದಾಗ ಮಾತ್ರ ಉತ್ತರಿಸಿ. ಸಾವಿನ ಬಗ್ಗೆ ಮಗು ಪ್ರಶ್ನಿಸದಿದ್ದರೆ, ಆ ಬಗ್ಗೆ ಉತ್ತರಿಸಲು ಪ್ರಯತ್ನಿಸಬೇಡಿ. ಮಗುವಿನ ಪ್ರಶ್ನೆಗಳ ಜಾಡನ್ನೇ ಅನುಸರಿಸಿ ಉತ್ತರಿಸಿ.

೪. ಪ್ರಶ್ನೆಗಳಿಗೆ ಉತ್ತರಿಸುವಾಗ ಸರಳ ಶಬ್ದಗಳನ್ನು ಬಳಸಿ. ನೀವು ಹೇಳಿದುದು ಮಗುವಿಗೆ ಅರ್ಥವಾಯಿತೆಂಬುದನ್ನು ಖಚಿತಪಡಿಸಿಕೊಳ್ಳಿ. ಇದು ಬಹಳ ಮುಖ್ಯ.

೫. ಮಗುವಿನ ಪ್ರಶ್ನೆಗಳನ್ನು ತಳ್ಳಿಹಾಕಬೇಡಿ.

೬. ಪ್ರಶ್ನೆಗಳಿಗೆ ಉತ್ತರಿಸುವಾಗ ನೀವು ಮುಜುಗರ ಪಡಬಾರದು. ಸಹಜ ಧ್ವನಿ, ಸಹಜ ಭಾವದೊಡನೆ ಉತ್ತರಿಸಿ.

೭. ಮಗು ಪ್ರಶ್ನೆ ಕೇಳಿದಾಗ ನಗಬೇಡಿ. ಅಪಹಾಸ್ಯ ಮಾಡಬೇಡಿ. ಮಗು ಎಷ್ಟೇ ವಿಚಿತ್ರ ಪ್ರಶ್ನೆಯನ್ನು ಕೇಳಲಿ...... ಅದರ ದೃಷ್ಟಿಯಲ್ಲಿ ಆ ಪ್ರಶ್ನೆ ಸಹಜವಾಗಿರುತ್ತದೆ. ಆದುದರಿಂದ ಗಂಭೀರವಾಗಿಯೇ ಉತ್ತರಿಸಿ.

೮. ಉತ್ತರ ನಿಮಗೆ ತಿಳಿದಿಲ್ಲ ಎಂದಾದಾಗ, ಅದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಿ. ಪುಸ್ತಕ ಓದಿ ಹೇಳಿ ಅಥವಾ ತಜ್ಞ (ಉದಾ: ಡಾಕ್ಟರ್) ರನ್ನು ಕೇಳಿ ಹೇಳುತ್ತೇನೆ ಎಂದು ವಿವರಿಸಿ.

೯. ಮಗುವಿನ ಪ್ರಶ್ನೆಗಳ ಹಿಂದೆ - ಮಗು ಆತಂಕವನ್ನು ಹೊಂದಿದೆಯೇ ಎಂಬುದನ್ನು ಗಮನಿಸಿ. ಮಗುವಿಗೂ ಸಮಸ್ಯೆಗಳಿರುತ್ತವೆ - ಟೆನ್‌ಶನ್ ಇರುತ್ತದೆ ಎಂಬುದನ್ನು ನೆನಪಿಡಿ. ಅದನ್ನು ಸಕಾಲದಲ್ಲಿ ಪರಿಹರಿಸುವುದು ಮುಖ್ಯ.

೧೦. ಚಿಕ್ಕ ವಯಸ್ಸಿನಲ್ಲಿ ನೀವು ಅದರ ಎಲ್ಲ ಪ್ರಶ್ನೆಗಳಿಗೆ ಉತ್ತರಿಸಿದರೆ, ಆ ಮಗು ದೊಡ್ಡದಾದ ಮೇಲೂ ನಿಮ್ಮಲ್ಲಿ ನಂಬಿಕೆ ವಿಶ್ವಾಸಗಳನ್ನು ಇಡುತ್ತದೆ. ತನ್ನ ಸಮಸ್ಯೆಗಳನ್ನು ಹೇಳಿಕೊಳ್ಳುತ್ತದೆ ಎಂಬುದನ್ನು ಮರೆಯದಿರಿ.

ತ್ತು ಸದ್ದಿಲ್ಲದಂತೆ ಮಲಗಿದಾಗ ಮಗು ಖಂಡಿತಾ ಪ್ರಶ್ನಿಸುತ್ತದೆ. ಅಜ್ಜಿಯನ್ನು ಸುಡಲು ಎತ್ತಿಕೊಂಡು ಹೋಗುವಾಗ, ಮಕ್ಕಳು ಏಕೆಂದು ಪ್ರಶ್ನಿಸುತ್ತವೆ. ಅಜ್ಜಿಗೆ ನೋವಾಗುವುದಿಲ್ಲವೆ ಎಂದು ಕೇಳುತ್ತವೆ. ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ನೀಡಬೇಕಾದರೆ, ಸಾವಿನ ಬಗ್ಗೆ ನಮ್ಮ ನಂಬಿಕೆಗಳೇನು ?



ಕಲ್ಪನೆಗಳೇನು? ಎಂಬುದು ಮುಖ್ಯವಾಗುತ್ತದೆ.

''ಅಜ್ಜಿ ಸ್ವರ್ಗಕ್ಕೆ ಹೋಗಿದ್ದಾರೆ ಮಗು. ಆಕೆ ಅಲ್ಲೇ ಇರುತ್ತಾಳೆ. ದೇವರು ಆಕೆಯನ್ನು ಅಲ್ಲೇ ಇರಿಸಿಕೊಂಡಿದ್ದಾರೆ. ನಾವು ಅಲ್ಲಿಗೆ ಹೋಗಲು ಸಾಧ್ಯವಿಲ್ಲ ಎಂದು ಹೇಳಬಹುದು. ''ಸ್ವರ್ಗ ಎಲ್ಲಿದೆ?'' ಎಂದು ಮಗು ಪ್ರಶ್ನಿಸಿದಾಗ ನಾವು ಪ್ರಾಮಾಣಿಕ ಉತ್ತರವನ್ನೇ ಕೊಡಬೇಕು. ''ಸ್ವರ್ಗ ಅನ್ನೋದು ಎಲ್ಲಿದೆ ಅಂತ ನಮಗೆ ತಿಳಿಯದು ಮಗು. ಬಹಳ ಜನ ಅದು ಆಕಾಶದಲ್ಲಿದೆ ಅಂತ ತಿಳ್ಕೊಂಡಿದ್ದಾರೆ'' ಎಂದು ಸಮಾಧಾನ ಮಾಡಬಹುದು. ''ನಾವು ಅಜ್ಜಿಯಷ್ಟು ವಯಸ್ಸಾದಾಗ ನಾವೂ ಸಾಯುತ್ತೇವೆ. ಆಗ ಬೇಕಾದರೆ ನಾವೂ ಸ್ವರ್ಗಕ್ಕೆ ಹೋಗಿ ಅಜ್ಜಿಯನ್ನು ಭೇಟಿ ಮಾಡಬಹುದು'' ಎಂದು ಉತ್ತರಿಸಿ ಮಗುವನ್ನು ಸಮಾಧಾನಪಡಿಸಬಹುದು.

ನಿಮ್ಮ ಮಗುವಿನಷ್ಟೇ ವಯಸ್ಸಾಗಿರುವ ಮತ್ತೊಂದು ಮಗು ಸತ್ತಾಗ ಅಥವಾ ಆ ಮಗುವಿನ ಅಣ್ಣ ತಮ್ಮಂದಿರೇ ಸತ್ತಾಗ - ಮಗುವಿನ ಮನಸ್ಸಿನ ಮೇಲೆ ಅಗಾಧ ಪ್ರಭಾವವುಂಟಾಗುತ್ತದೆ. ಅದರಲ್ಲೂ ಸತ್ತ ಮಗುವಿನೊಡನೆ ನಿಮ್ಮ ಮಗು ಭಾವನಾತ್ಮಕ ಸಂಬಂಧವನ್ನು ಹೊಂದಿದ್ದರಂತೂ ಇಕ್ಕಟ್ಟಿನ ಪರಿಸ್ಥಿತಿ ಏರ್ಪಡುತ್ತದೆ. ವಯಸ್ಸಾದವರು ಸಾಯುವುದು ಅಪರೂಪವಲ್ಲ ಎಂಬುದನ್ನು ನಿಮ್ಮ ಮಗು ಒಪ್ಪಬಹುದು. ಆದರೆ ತನ್ನ ವಯಸ್ಸಿನವರೂ ಸಾಯುವುದನ್ನು ಆ ಮಗು ಅಷ್ಟು ಸುಲಭವಾಗಿ ಒಪ್ಪುವುದಿಲ್ಲ. ಅಂತಹ ಸಂದರ್ಭಗಳಲ್ಲಿ ''ಸಾಮಾನ್ಯವಾಗಿ ಚಿಕ್ಕಮಕ್ಕಳು ಸಾಯುವುದಿಲ್ಲ. ಇದೊಂದು ಅಪರೂಪದ ಸಂದರ್ಭವಷ್ಟೆ'' ಎಂದು ವಿವರಿಸಬಹುದು.

ಮುಗ್ಧ ಮಕ್ಕಳ 'ಪ್ರಬುದ್ಧ' ಪ್ರಶ್ನೆಗಳು ಹೆತ್ತವರ ತಾಳ್ಮೆ ಹಾಗೂ ಜಾಣ್ಮೆಗೆ ಸವಾಲನ್ನು ಹಾಕುತ್ತವೆ. ಕೋಪಗೊಳ್ಳದೆ ಅವುಗಳಿಗೆ ಅರ್ಥವಾಗುವಂತೆ ವಿವರಿಸಿದರೆ, ಆ ಮಕ್ಕಳ ಮಾನಸಿಕ ಆರೋಗ್ಯ ಉತ್ತಮವಾಗಿ ಬೆಳೆಯುತ್ತದೆ. ಅವುಗಳಿಗೆ ಉತ್ತಮ ಸಂಸ್ಕಾರ ದೊರೆಯುತ್ತದೆ. ಹೆತ್ತವರು ಈ ಬಗ್ಗೆ ವಿಶೇಷ ಜಾಗ್ರತೆ ವಹಿಸಬೇಕು.

(ಮುಗಿಯಿತು)

# ಅನಾರೋಗ್ಯ ಉಂಟಾದಾಗ ಅನುಸರಿಸಬೇಕಾದ ನಿಯಮಗಳು

ಮನುಷ್ಯನಿಗೆ ಆಹಾರದ ವ್ಯತ್ಯಾಸದಿಂದ, ಜಲಮಾಲಿನ್ಯದಿಂದ ಅಥವಾ ವಾತಾವರಣದಲ್ಲಿನ ವೈಪರೀತ್ಯದಿಂದ ಕಾಯಿಲೆ ಬರುವುದುಂಟು. ಈ ರೀತಿಯ ಕಾಯಿಲೆಗೆ ತುತ್ತಾದಾಗ ರೋಗಿಯ ರಕ್ಷಣೆಗಾಗಿ, ಶೀಘ್ರ ಗುಣಮುಖ ಹೊಂದಲು ಕೆಲವು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗುತ್ತದೆ.

ಜ್ವರ ಬಂದಾಗಾಗಲಿ, ವಾಂತಿ ಭೇದಿ ಉಂಟಾದಾಗಾಗಲಿ ರೋಗಿಯನ್ನು ಯಾವಾಗಲೂ ಪ್ರಶಾಂತ ಹಾಗೂ ಪರಿಶುಭ್ರವಾದ ಕೋಣೆಯಲ್ಲಿ ಮಲಗಿಸಬೇಕು. ಬೇಸಿಗೆ ಕಾಲದಲ್ಲಾದರೆ ತಂಪಾಗಿರುವ ಕೋಣೆಯಲ್ಲಿ, ಚಳಿಗಾಲವಾದರೆ ಬೆಚ್ಚಗೆ ಇರುವ ಕೋಣೆಯಲ್ಲಿ ಮಲಗಿಸಬೇಕು. ರೋಗಿ ವಿಶ್ರಾಂತಿ ತೆಗೆದುಕೊಳ್ಳುವ ಸ್ಥಳದಲ್ಲಿ ಗದ್ದಲ ಕೋಲಾಹಲ ವಿರಕೂಡದು. ರೋಗಿಯ ಪಕ್ಕದಲ್ಲಿ ಕುಳಿತು ಮಾತನಾಡಕೂಡದು. ಆತನನ್ನು ಹೆಚ್ಚು ಮಾತಿಗೆಳೆಯಬಾರದು. ಹೆಚ್ಚು ನಿದ್ರೆ ಹೋಗುವಂತಹ ವಾತಾವರಣ ಕಲ್ಪಿಸಬೇಕು. ಪ್ರಶಾಂತವಾಗಿ, ಹಾಯಾಗಿ ಎಷ್ಟು ಹೆಚ್ಚು ನಿದ್ರೆ ಮಾಡುತ್ತಾರೊ ಅಷ್ಟು ಆರೋಗ್ಯಕ್ಕೆ ಅನುಕೂಲ. ಇದರಿಂದ ಬೇಗ ಗುಣ ಮುಖ ಹೊಂದಲು ನಿದ್ರೆ ಹೆಚ್ಚು ನೆರವಾಗುತ್ತದೆ.

ಅನಾರೋಗ್ಯದಿಂದಿರುವ ವ್ಯಕ್ತಿಗೆ ಜ್ವರ, ವಾಂತಿಯಿಂದ ಬಳಲುತ್ತಿದ್ದರೂ ಹೆಚ್ಚು ನೀರು ಕುಡಿಯಲು ಕೊಡಬೇಕು. ಶುದ್ಧವಾದ ನೀರು ಎಂತಹ ರೋಗವನ್ನಾದರೂ ನಿಯಂತ್ರಣದಲ್ಲಿಡುತ್ತದೆ. ನೀರಿನೊಂದಿಗೆ ಹಣ್ಣಿನ ರಸ, ಎಳನೀರು, ಗ್ಲೂಕೋಸ್ ಅಧಿಕವಾಗಿ ಕೊಡುತ್ತಿದ್ದರೆ ಒಳ್ಳೆಯದು.

ರೋಗಿ ಮಲಗಿದ ಹಾಸಿಗೆ ಶುಭ್ರವಾಗಿರಬೇಕು. ಮೆತ್ತಗೆ ಕೂಡಾ ಇರಬೇಕು. ಗಟ್ಟಿಯಾದ ಹಾಸಿಗೆ, ಕೊಳೆಯಾದ ಬೆಡ್‌ಶೀಟ್‌ಗಳು ರೋಗವನ್ನು ಉಲ್ಬಣಗೊಳಿಸುತ್ತವೆ. ರೋಗಿ ಇರುವ ಕೋಣೆಯನ್ನು ದಿನಕ್ಕೆರಡು ಬಾರಿ ಫೆನಾಯಿಲ್ ಇಲ್ಲವೆ ಡೆಟ್ಟಾಲ್‌ನಿಂದ ಒರೆಸಬೇಕು. ವಾಂತಿ ಮಾಡಿಕೊಂಡಾಗಲು ತಕ್ಷಣ ಶುಭ್ರಗೊಳಿಸಬೇಕು.

ಅನಾರೋಗ್ಯದಿಂದಿರುವ ವ್ಯಕ್ತಿಯ ಶರೀರವನ್ನು ಉಗುರು ಬೆಚ್ಚಗಿನ ನೀರಿನಿಂದ ದಿನಕ್ಕೆ ಎರಡು ಮೂರು ಬಾರಿ ಒರೆಸಬೇಕು. ಬಾಯಿ ಶುಭ್ರವಾಗಿರಿಸಬೇಕು. ಎರಡು ಬಾರಿ ಹಲ್ಲು ತೊಳೆಯಬೇಕು. ಶುಭ್ರವಾದ ಬಟ್ಟೆ ಹಾಕಬೇಕು.

ಬೇಗ ಜೀರ್ಣವಾಗುವ ಸರಳ ಆಹಾರ ನೀಡಬೇಕು. ನೀಡುವ ಆಹಾರ ಹೆಚ್ಚು ಕೆಲರಿಯಿಂದ ಕೂಡಿದ್ದರಂತೂ ತುಂಬಾ ಒಳ್ಳೆಯದು. ಅದಕ್ಕಾಗಿ ಹಣ್ಣು, ಹಣ್ಣಿನ ರಸ, ನೀರಲ್ಲಿ ಗ್ಲೂಕೋಸ್ ಬೆರೆಸಿ ಕುಡಿಸಿದರೆ ತುಂಬಾ ಉತ್ತಮ. ಅಗತ್ಯ ಪೌಷ್ಠಿಕ ಆಹಾರ ನೀಡದಿದ್ದರೆ ರೋಗಿ ದೈಹಿಕವಾಗಿ ಕುಸಿಯುತ್ತಾನೆ. ಇದರಿಂದ ಶೀಘ್ರ ಗುಣಮುಖವಾಗಲಿಕ್ಕೆ ಅಡ್ಡಿಯಾಗುತ್ತದೆ.

ಶರೀರದಲ್ಲಿನ ಯಾವುದೇ ಭಾಗದಿಂದ ರಕ್ತಸ್ರಾವ ಉಂಟಾದರೆ, ಕೆಮ್ಮಿದಾಗ ರಕ್ತ ಬೀಳುವುದು. ಮೂಗಿನಿಂದ ರಕ್ತ ಬೀಳುವುದು. ತುಟಿ, ಉಗುರು ನೀಲಿಯಾಗಿ ಮಾರ್ಪಡುವುದು, ಕಣ್ಣಿಗೆ ಚಕ್ರ ಬಂದಂತಾಗಿ ಬೀಳುವುದು. ಮೂತ್ರ ವಿಸರ್ಜನೆ ಕ್ರಮವಾಗಿಲ್ಲದಿರುವಾಗ ತಕ್ಷಣ ವೈದ್ಯರನ್ನು ಸಂಪರ್ಕಿಸಬೇಕು. ಕೆಲವು ಕಾಯಿಲೆಗಳು ತುಂಬಾ ತೊಂದರೆ ಉಂಟು ಮಾಡುವಂತಿದ್ದರೂ ಹೆಚ್ಚಿನ ಹಾನಿಯೇನು ಉಂಟು ಮಾಡುವುದಿಲ್ಲ. ಆಹಾರ, ವಿಶ್ರಾಂತಿ ಯಿಂದ ಕಡಿಮೆಯಾಗುತ್ತದೆ. ಅದೇನಿದ್ದರೂ ರೋಗ ಲಕ್ಷಣಗಳು ಅಪಾಯಕಾರಿಯಾದುದೆ? ಅಲ್ಲವೆ, ಎಂಬುದನ್ನು ಖಚಿತಪಡಿಸಿಕೊಳ್ಳಲು ವೈದ್ಯರನ್ನು ಭೇಟಿ ಮಾಡಬೇಕು. ●

# ಮೃಗರಾಜನನ್ನೂ ಕೊಂದ ಕ್ಷಯರೋಗ

• ಸಜನಾ

ಆಕಾರ ಕಿರಿದಾದರೂ ಬೃಹದಾಕಾರದ ಸಲಗವನ್ನೇ ತನ್ನ ಅಡಿಯಾಳಾಗಿಸಿಕೊಂಡು ಆಳಬಲ್ಲುದು. ಒಂದು ಪುಟ್ಟ ಬೆಂಕಿಯ ಕಿಡಿ ಕಾಡನ್ನೇ ಸುಟ್ಟು ಬೂದಿ ಮಾಡಬಲ್ಲುದು.

ಕೀತ ಎಂಬುವರು ದಕ್ಷಿಣ ಆಫ್ರಿಕೆಯ ಪ್ರಾಣಿ ವಿಜ್ಞಾನಿಗಳು. ಅವರಿಗೆ ಕಾಡು ಪ್ರಾಣಿಗಳ ಆರೋಗ್ಯದ ಬಗ್ಗೆ ಜಾಸ್ತಿ ಆಸಕ್ತಿ. ಸೆಪ್ಟೆಂಬರ್ ತಿಂಗಳ ೧೯೯೫ರಲ್ಲಿ ಕೀತ ಅವರು ದಕ್ಷಿಣ ಆಫ್ರಿಕೆಯ ಕಾಡಿನಲ್ಲಿ ಒಂದು ನರಳುವ ಸಿಂಹವನ್ನು ಕಂಡರು. ನೋಡಲು ಆ ಪ್ರಾಣಿ ಭವ್ಯ ಎನಿಸದೇ ಕೇವಲ ಎಲುವು - ತೊಗಲುಗಳ ಗೂಡು ಎನಿಸಿತ್ತು. ಸಿಂಹವನ್ನು ಯಾರಾದರೂ ನುಗಿಸಿ ಕೆಡುಹಲು ಸಾಧ್ಯವಿತ್ತು. ಆದರೂ ಹೆದರಿಕೆ. ದೂರಿನಿಂದಲೇ ನೋಡುತ್ತ ನಿಂತಿದ್ದರು. ಕೊನೆಗೆ ಒಂದು ದಿನ ಸಿಂಹವು ಕುಸಿದು ಮರಣ ಹೊಂದಿತು. ಕೀತ ಅವರಿಗೆ ಈಗ ಧೈರ್ಯ ಬಂದಿತು. ಆ ಪ್ರಾಣಿಯ ದೇಹವನ್ನು ಒಂದು ವಾಹನದಲ್ಲಿ ಹೇರಿ ಪಶುವೈದ್ಯ ಆಸ್ಪತ್ರೆಗೆ ಬಂದರು. ಪ್ರಾಣಿಯನ್ನು ಕೊಯ್ದು ಪರೀಕ್ಷಿಸಿದರು. ಅವರಿಗೆ ಆಘಾತ ಕಾದಿತ್ತು. ಸಿಂಹದ ಕರುಳಿನಲ್ಲಿ ಕ್ಷಯರೋಗದ ಗಂಟುಗಳು! ಪ್ರಾಣಿರೋಗ ತಜ್ಞರಾದ ಕೀತ ಅವರಿಗೆ ಕ್ಷಯರೋಗದ ಗಂಟುಗಳನ್ನು ಗುರುತಿಸುವುದು ಸುಲಭವಾಗಿದ್ದರೂ ಖಚಿತಗೊಳಿಸಲು ಪ್ರಯತ್ನಿಸಿದರು. ಗಂಟುಗಳನ್ನು ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಆ ರೋಗ ಕ್ಷಯರೋಗ ಎಂದು ಖಚಿತವಾಯಿತು. ಸಿಂಹವು ಜರ್ಜರಿತವಾದದ್ದೂ, ಎಲುವು ಚರ್ಮಗಳ ಗೂಡಾದದ್ದೂ ಕ್ಷಯದಿಂದಲೇ.

ಇಂಥ ಸಿಂಹವು ಉಳಿದ ಪ್ರಾಣಿಗಳಿಂದ ದೂರ ಉಳಿದು ಸಾಯಬೇಕು. ಇಲ್ಲವಾದರೆ ಬೇರೆ ಸಿಂಹಗಳು ಏರಿ ಬಂದು ಕೊಂದು ಹಾಕುತ್ತವೆ.

ಇಂಥದೇ ಇನ್ನೊಂದು ಘಟನೆ. ಅದೇ ವರ್ಷದ ಆಗಸ್ಟ್ ತಿಂಗಳಲ್ಲಿ ಒಂದು ಚಿರತೆ ಮನುಷ್ಯರ ಮೇಲೆ ಏರಿ ಬರತೊಡಗಿತು. ಅದೂ ಸಹ ಕ್ಷೀಣವಾಗುತ್ತ ನಡೆದಿತ್ತು. ಅಡವಿಯ ಪ್ರಾಣಿಗಳ ಬೆನ್ನು ಹತ್ತಿ, ಓಡಿ, ಅವುಗಳನ್ನು ಹಿಡಿದು ತಿನ್ನುವ ಸಾಮರ್ಥ್ಯ ಕಳೆದುಕೊಂಡಿತ್ತು. ಜನರನ್ನು ರಕ್ಷಿಸಲು ಆ ಚಿರತೆಯನ್ನು ಗುಂಡುಹಾಕಿ ಸಾಯಿಸಿದರು. ಸತ್ತ ಚಿರತೆಯನ್ನು ಪರೀಕ್ಷಿಸಿದಾಗ ಅದೂ ಸಹ ಕ್ಷಯರೋಗದಿಂದ ಬಳಲುವುದು ಪತ್ತೆಯಾಯಿತು. ಈ ವನ್ಯಮೃಗಗಳು ಪಟಪಟನೆ ಮರಣ ಹೊಂದದಿದ್ದರೂ ಕ್ರಮೇಣ ಅವು ಸಾಯುತ್ತಿವೆ. ಕೇವಲ ಮೂರು ವರ್ಷಗಳಲ್ಲಿ ಹದಿಮೂರು ಸಿಂಹಗಳು ಸತ್ತಿವೆ.



ಹಾಗಾದರೆ ಕ್ಷಯರೋಗ ಅಡವಿಯಲ್ಲಿ ಸೇರಿ ವನ್ಯಮೃಗಗಳನ್ನು ಕೊಲ್ಲಹತ್ತಿದರೆ ಕೆಲವೇ ವರ್ಷಗಳಲ್ಲಿ ಎಲ್ಲ ಕಾಡು ಪ್ರಾಣಿಗಳೂ ನಾಶವಾಗಿ ಹೋಗಬಹುದು. ಈ ಪ್ರಾಣಿಗಳಿಗೆ ಔಷಧಾಲಯ ತೆರೆಯಲು ಅಥವಾ ಉಪಚರಿಸಲು ಸಾಧ್ಯವಿಲ್ಲ. ಇದೊಂದು ದೊಡ್ಡ ಪ್ರಶ್ನೆ.

ಏನೇ ಆಗಲಿ, ಕ್ಷಯರೋಗ ಅಡವಿಯನ್ನು ಹೇಗೆ ಸೇರಿತು ಎಂಬ ಸಂಗತಿ ಗೊತ್ತಾಗಬೇಕು. ಇದನ್ನು ಪತ್ತೆಹಚ್ಚಲು ಪ್ರಾಣಿ ವಿಜ್ಞಾನಿಗಳ ಒಂದು ಗುಂಪು ನಿರ್ಧರಿಸಿತು. ಅವರ ಹಲವಾರು ಪ್ರಯತ್ನಗಳಲ್ಲಿ ಒಂದು ಪ್ರಯತ್ನ ಯಶಸ್ವಿ ಆಯಿತು. ಒಂದುದಿನ ಈ ವಿಜ್ಞಾನಿಗಳು ಆ ಅರಣ್ಯದಲ್ಲಿ ಮೇಯುತ್ತಿದ್ದ ಕಾಡೆಮ್ಮೆ - ಕಾಡುಕೋಣಗಳ ಹಿಂಡನ್ನು ಕಂಡರು. ಅವುಗಳಿಗೆ ವಿಷಯುಕ್ತ ಬಾಣಗಳನ್ನು ಹೊಡೆದು ಕೊಂದು ಹಾಕಿದರು. ಅದೇ ಸ್ಥಳದಲ್ಲಿ ತಕ್ಷಣ ಅವುಗಳನ್ನು ಕೊಯ್ದು ಪರೀಕ್ಷಿಸಿದರು. ಈ ಕಾಡೆಮ್ಮೆಗಳ ಪುಪ್ಪುಸಗಳು ಕ್ಷಯರೋಗದಿಂದ ಹಾಳಾಗಿದ್ದವು.

ಸಿಂಹಗಳಿಗೆ ಹಾಗೂ ಚಿರತೆಗಳಿಗೆ ಈ ಕಾಡೆಮ್ಮೆಗಳು ಆಹಾರ, ಕ್ಷಯ ರೋಗದಿಂದ ಬಳಲುವ ಈ ಪ್ರಾಣಿಗಳನ್ನು ತಿನ್ನುವ ಸಿಂಹ ಚಿರತೆಗಳು ಕ್ಷಯದಿಂದ ಬಳಲಲೇಬೇಕು. ರೋಗಾಣುಗಳನ್ನು ಆಹಾರದ ಮೂಲಕ ಸೇವಿಸುವುದರಿಂದ ಈ ಮೃಗಗಳ ಕರುಳಿನಲ್ಲಿ ಕ್ಷಯ ಮೂಡುವುದು.

ಎರಡನೆಯ ಹೆಜ್ಜೆ ಎಂದರೆ ಈ ಕಾಡೆಮ್ಮೆ - ಕಾಡುಕೋಣಗಳಿಗೆ ಕ್ಷಯ ಹೇಗೆ ಬಂತು ? ಸಂಶೋಧನೆ ನಡೆಸಿದಾಗ ಇದರ ಕಾರಣವೂ ಸಿಕ್ಕಿತು. ಹತ್ತೊಂಬತ್ತು ನೂರಾ ಐವತ್ತರಲ್ಲಿ ಸಾಕು ಪ್ರಾಣಿಗಳ ಗುಂಪು ಅಡವಿಯ ಎಮ್ಮೆಗಳ ಗುಂಪು ಆಗೀಗ ಸೇರುತ್ತಿದ್ದವು. ಕ್ಷಯರೋಗದಿಂದ ಬಳಲುವ ಸಾಕು ಪ್ರಾಣಿಗಳು ಕೆಮ್ಮಿದಾಗ - ಶ್ವಾಸ ಬಿಟ್ಟಾಗ ಹೊರಬರುವ ಕ್ಷಯರೋಗಾಣುಗಳು ಕಾಡೆಮ್ಮೆ - ಕಾಡುಕೋಣಗಳ ಪುಪ್ಪುಸ ಸೇರಿರಬೇಕು. ಅಲ್ಲಿ ಕ್ಷಯ ಹುಟ್ಟಿಸಿರಬೇಕು. ಮುಂದೆ ಈ ಪ್ರಾಣಿಗಳು ತಮ್ಮ ಮರಿಗಳಿಗೆ ಹಾಗೂ ಬಂಧುಗಳಿಗೆ ರೋಗ ಪ್ರಸಾರ ಮಾಡಿರಲು ಸಾಕು.

ಹೀಗೆ ಸಾಕುಪ್ರಾಣಿಗಳ ಕ್ಷಯವು ಅಡವಿಯ ಕೋಣಗಳಿಗೂ, ಅಡವಿಕೋಣಗಳ ಕ್ಷಯವು ಮೃಗಗಳಿಗೂ ಹಬ್ಬಿದೆ ಎಂದು ತಿಳಿದು ಬಂದಿತು. ಇದು ಕೇವಲ ಆಫ್ರಿಕೆಯಲ್ಲಿ ಮಾತ್ರ ಜರುಗಿದೆ ಎನ್ನಲಾಗದು. ಈ ಅನಾಹುತ ಜಗತ್ತಿನಾದ್ಯಂತ ನಡೆಯಲು ಸಾಧ್ಯ.

ಹಾಗಾದರೆ ಈ ಅನಾಹುತವನ್ನು ಹೇಗೆ ತಡೆಯುವುದು ? ಯಾರು ತಡೆಯುವುದು ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ನಾವು ಹುಡುಕಬೇಕು. ●

## ಅಪರೂಪದ ಪ್ರಸಂಗ

# ತಿರುಗು ಮುರುಗಾದ ಲಿಂಗ!

ಅಂಶುಮಾಲಿ

> ಅದೊಂದು ಮಾನವ ಜೀವಿ. ಮಾನವ ಎಂದ ಮೇಲೆ ಅದು ಹೆಣ್ಣು, ಗಂಡು ಅಥವಾ ನಪುಂಸಕ ಆಗಿರಬೇಕು. ಆದರದು ಏಕಕಾಲದಲ್ಲಿ ಮೂರೂ ಆಗಿರಲು ಸಾಧ್ಯವೇ? ಹೌದು... ಗಂಡಿನಲ್ಲಿರುವ ಕ್ರೋಮೋಸೋಮುಗಳು, ಹೆಣ್ಣಿನ ಅಂಗಾಂಗಗಳು, ಜೊತೆಗೆ ನಪುಂಸಕತ್ವ ಸೇರಿಕೊಂಡಿದ್ದರೆ ಅದನ್ನೇನೆಂದು ಕರೆಯಬೇಕು?

**ಭಾ**ವೀ ತಂದೆ ತಾಯಿಯರನ್ನು ಒಂದು ಪ್ರಶ್ನೆ ಸದಾ ಕಾಡುತ್ತಿರುತ್ತದೆ. ತಾಯಿಯಾದವಳು ತನಗೆ ಗಂಡು ಮಗುವೇ ಹುಟ್ಟಲಿ ಎಂದು ಬಯಸುತ್ತಿದ್ದರೆ ತಂದೆಯಾದವನು ಹೆಣ್ಣೇ ಹುಟ್ಟಲಿ ಎಂದು ಆಶಿಸುತ್ತಿರುತ್ತಾನೆ. ಆದರೂ ಸಹ ತಮಗೆ ಎಂತಹ ಮಗು ಹುಟ್ಟಬಹುದೆಂಬ ಕುತೂಹಲ ಅವರಿಗೆ ಇದ್ದೇ ಇರುತ್ತದೆ.

ಗರ್ಭದಲ್ಲಿ ಬೇರು ಬಿಟ್ಟ ಭ್ರೂಣದ ಲಿಂಗ ನಿರ್ಣಯ ಹೇಗೆ ಆಗುತ್ತದೆ ? ಈ ಪ್ರಶ್ನೆ ವಿಜ್ಞಾನಿಗಳನ್ನು ಅನಾದಿ ಕಾಲದಿಂದಲೂ ಕಾಡುತ್ತಾ ಬಂದಿದೆ. ಇದೊಂದು ನಿಜಕ್ಕೂ ಪ್ರಕೃತಿಯ ನಿಗೂಢ ವಿಷಯವಾಗಿದೆ. ಆಧುನಿಕ ವೈದ್ಯ ವಿಜ್ಞಾನ ಸರ್ವತೋಮುಖ ಅಭಿವೃದ್ಧಿ ಹೊಂದುತ್ತಿರುವಂತೆ ಪ್ರಕೃತಿಯ ನಿಗೂಢ ರಹಸ್ಯಗಳೆಲ್ಲ ಒಂದೊಂದೇ ಅನಾವರಣ ಗೊಳ್ಳುತ್ತಿದೆ. ನಿಜಕ್ಕೂ ಇವು ಮಾನವ ಕುಲವನ್ನು ಆಶ್ಚರ್ಯಚಕಿತವಾಗಿಸಿವೆ.

**ಕ್ರೋಮೋಸೋಮು :**

ಈ ಭೂಮಿಯ ಮೇಲಿರುವ ಪ್ರತಿಯೋರ್ವ ಮನುಷ್ಯರಲ್ಲಿ ೪೬ ಕ್ರೋಮೋಸೋಮುಗಳಿರುತ್ತವೆ. ಇವುಗಳಲ್ಲಿ ೨೩ ಕ್ರೋಮೋಸೋಮುಗಳು ತಂದೆಯ ಕಡೆಯಿಂದ, ಉಳಿದ ೨೩ ಕ್ರೋಮೋಸೋಮುಗಳು ತಾಯಿಯ ಕಡೆಯಿಂದ ಬಂದಿರುತ್ತವೆ.

೨೩ ಕ್ರೋಮೋಸೋಮುಗಳಲ್ಲಿ ೨೨ ಕ್ರೋಮೋಸೋಮುಗಳನ್ನು ಕಾಯ ಕ್ರೋಮೋಸೋಮು (ಆಟೋ)ಗಳು ಎಂದು ಉಳಿದ ಒಂದು ಕ್ರೋಮೋಸೋಮನ್ನು ಲಿಂಗ ಕ್ರೋಮೋಸೋಮು (ಸೆಕ್ಸ್) ಎಂದು ಕರೆಯುತ್ತಾರೆ. ಹೆಸರೇ ಸೂಚಿಸುವಂತೆ ಕಾಯಕ್ರೋಮೋಸೋಮುಗಳು ವ್ಯಕ್ತಿಯ ದೇಹದ ಗುಣಲಕ್ಷಣಗಳನ್ನು ನಿರ್ಧರಿಸುತ್ತವೆ. ಲಿಂಗ ಕ್ರೋಮೋಸೋಮು ಗಂಡೋ ಅಥವಾ ಹೆಣ್ಣೋ ಎಂಬುದನ್ನು ನಿರ್ಣಯಿಸುತ್ತದೆ.

ಮನುಷ್ಯರಲ್ಲಿ ಜನನ ಗ್ರಂಥಿಗಳಿವೆ. ಪುರುಷ ಜನನ ಗ್ರಂಥಿಯನ್ನು 'ವೃಷಣ' ಎಂದೂ, ಸ್ತ್ರೀ ಜನನ ಗ್ರಂಥಿಯನ್ನು ಅಂಡಾಶಯ ಎಂದು ಕರೆಯುತ್ತೇವೆ. ವೃಷಣದಲ್ಲಿ ವೀರ್ಯಾಣುಗಳು ಉತ್ಪತ್ತಿಯಾಗುತ್ತವೆ. ಅಂಡಾಶಯದಲ್ಲಿ ಅಂಡಾಣುಗಳಲ್ಲಿ ಉತ್ಪತ್ತಿಯಾಗುತ್ತವೆ.

ವೀರ್ಯಾಣುವಿನಲ್ಲಿ ತಂದೆಯ ೨೨ ಕಾಯ ಕ್ರೋಮೋಸೋಮುಗಳ ಜೊತೆ ಒಂದು ಲಿಂಗ ಕ್ರೋಮೋಸೋಮಿರುತ್ತದೆ. ಈ ಲಿಂಗ




ಕ್ರೋಮೋಸೋಮು X ಆಗಿರುತ್ತದೆ ಅಥವಾ Y ಆಗಿರಬಹುದು. ಹಾಗೂ ಒಂದು ಲಿಂಗ ಕ್ರೋಮೋಸೋಮಿರುತ್ತದೆ. ಇದು ಯಾವಾಗಲೂ X ಆಗಿರುತ್ತದೆ. ಇದನ್ನು ಮತ್ತೊಂದು ರೀತಿ ಹೇಳಬಹುದು. ವೀರ್ಯಾಣುಗಳಲ್ಲಿ ''X ಧಾರಿ ವೀರ್ಯಾಣು'' ಮತ್ತ ''Y ಧಾರಿ ವೀರ್ಯಾಣು'' ಎಂದು ಎರಡು ವಿಧಗಳಲ್ಲಿರುತ್ತವೆ. ಆದರೂ ಸ್ತ್ರೀಯರಲ್ಲಿ ಕೇವಲ X ಧಾರಿ ಅಂಡಾಣುಗಳು ಮಾತ್ರ ಇರುತ್ತವೆ.

ಸಂಭೋಗದಲ್ಲಿ ವೀರ್ಯ ಸ್ಖಲಿಸಿದಾಗ, ವೀರ್ಯಾಣುಗಳು ಯೋನಿಯ ಮೂಲಕ ಅಂಡಾಣುವನ್ನು ತಲುಪಲು ಮೆರಥಾನ್ ಓಟವನ್ನು ಆರಂಭಿಸುತ್ತವೆ. ವೀರ್ಯದಲ್ಲಿ X ಧಾರಿ ಮತ್ತು Y ಧಾರಿ ವೀರ್ಯಾಣುಗಳು ಸರಿಸುಮಾರು ಶೇಕಡ ೫೦ - ಶೇಕಡ -೫೦ ರಷ್ಟಿರುತ್ತವೆ. X ಧಾರಿ ವೀರ್ಯಾಣು ಅಂಡಾಣುವನ್ನು ಕೂಡಬಹುದು. ಆಗ ರೂಪುಗೊಳ್ಳುವ ಮಗು ಹೆಣ್ಣಾಗುತ್ತದೆ. ವೀರ್ಯಾಣುವಿನಲ್ಲಿ ೨೨ + X ಇರುತ್ತದೆ. ಅಂಡಾಣುವಿನಲ್ಲಿ ೨೩ + X ಇರುತ್ತದೆ. ಇವೆರಡೂ ಸೇರಿ ೪೪ + XX = ೪೬ ಕ್ರೋಮೋಸೋಮುಗಳಾಗುತ್ತವೆ. ಒಂದು ವೇಳೆ Y ಧಾರಿ ವೀರ್ಯಾಣು ಅಂಡಾಣುವಿನೊಡನೆ ಬೆರೆತರೆ, ಗಂಡು ಮಗು ಹುಟ್ಟುತ್ತದೆ. ವೀರ್ಯಾಣುವಿನಲ್ಲಿ ೨೨ + Y ಇರುತ್ತದೆ. ಅಂಡಾಣುವಿನಲ್ಲಿ ೨೨ + X ಇರುತ್ತವೆ. ಇವೆರಡು ಸೇರಿ ೪೪ + XY = ೪೬ ಕ್ರೋಮೋಸೋಮುಗಳಾಗುತ್ತವೆ.

ಅಂದರೆ ಹುಟ್ಟುವ ಮಗುವಿನ ಲಿಂಗವನ್ನು ವೀರ್ಯಾಣು ನಿರ್ಧರಿಸುತ್ತದೆ ಎಂದಾಯಿತು. Y ಧಾರಿ ಕ್ರೋಮೋಸೋಮು ಗಂಡು ಮಗುವಿಗೆ ಹಾಗೂ X ಧಾರಿ ಕ್ರೋಮೋಸೋಮು ಹೆಣ್ಣು ಮಗುವಿನ ಹುಟ್ಟಿಗೆ ಕಾರಣವಾಗುತ್ತದೆ. ಇದು ನಮಗೆ ಖಚಿತವಾಗಿ ತಿಳಿದು ಬಂದಿರುವ ಅಂಶ.

ಈಗ ಈ ಬಗ್ಗೆ ಮತ್ತಷ್ಟು ವಿಷಯ ತಿಳಿದುಬಂದಿದೆ.

**ಭ್ರೂಣ ಜನನ :**

ಭ್ರೂಣವು ರೂಪುಗೊಳ್ಳುವಾಗ, ಭಾವೀ ಜನನ ಗ್ರಂಥಿಯ ಆದಿಕೋಶಗಳು ಏಕರೂಪವಾಗಿರುತ್ತದೆ. ಈ ಅವಧಿಯಲ್ಲಿ ಜನನ

ಗ್ರಂಥಿಯಾಗಬಲ್ಲ ಅಂಗಾಂಶವನ್ನು ಪರೀಕ್ಷಿಸಿದರೆ, ಅದು ವೃಷಣವಾಗುತ್ತದೆಯೋ ಅಥವಾ ಅಂಡಾಶಯವಾಗುತ್ತದೆಯೋ ಎಂಬುದನ್ನು ಹೇಳಲು ಸಾಧ್ಯವಿರುವುದಿಲ್ಲ. ಅದು ಅಂಡಾಶಯವೂ ಆಗಬಲ್ಲುದು. ವೃಷಣವೂ ಆಗಬಲ್ಲುದು. ಎರಡೂ ಸಾಮರ್ಥ್ಯವಿರುತ್ತದೆ.



**ಅರ್ಧನಾರೀಶ್ವರ!**
ಪ್ರತಿಯೋರ್ವ ಸ್ತ್ರೀಪುರುಷರು ಅರ್ಧನಾರೀಶ್ವರರು. ಮನುಷ್ಯನಲ್ಲಿ ೪೬ ಕ್ರೋಮೋಸೋಮುಗಳಿರುತ್ತವೆ. ಇವುಗಳಲ್ಲಿ ೨೩ ತಂದೆಯಿಂದ ೨೩ ತಾಯಿಯ ಕಡೆಯಿಂದ ಬಂದಿರುತ್ತವೆ.

ಭ್ರೂಣಕ್ಕೆ ೬ ವಾರಗಳ ವಯಸ್ಸಾದಾಗ, ಭಾವೀ ಜನನಗ್ರಂಥಿಯ ಆದಿಕೋಶಗಳು ತಾವು ಅಂಡಾಶಯವಾಗಬೇಕೆ ಅಥವಾ ವೃಷಣವಾಗಬೇಕೆ ಎಂಬ ''ಆಜ್ಞೆ' ಯನ್ನು ಪಡೆಯುತ್ತವೆ. ಈ ಆಜ್ಞೆ ಎಲ್ಲಿಂದ ಬರುತ್ತದೆ ಎಂಬ ವಿಷಯ ಕುತೂಹಲಕರವಾಗಿದೆ.

X ಕ್ರೋಮೋಸೋಮನ್ನು ಲಿಂಗ ನಿರ್ಣಯ ಕ್ರೋಮೋಸೋಮು ಎಂದು ಕರೆಯುತ್ತೇವೆಯಷ್ಟೆ. ಇದು ಹೆಣ್ಣು ಮಗು ಹುಟ್ಟಲು ಕಾರಣವಾಗುತ್ತದೆ.

X ಕ್ರೋಮೋಸೋಮು ಆಕೃತಿಯಲ್ಲಿ ದೊಡ್ಡದಾಗಿರುತ್ತದೆ. ಇದರಲ್ಲಿ ಲಿಂಗ ನಿರ್ಣಾಯಕ ವಂಶವಾಹಿಗಳಲ್ಲದೆ, ಇತರ ಗುಣಲಕ್ಷಣಗಳನ್ನು ನಿರ್ಧರಿಸುವ ವಂಶವಾಹಿಗಳೂ ಇರುತ್ತವೆ. ಕೆಲವು ವಂಶವಾಹಿಗಳು ರಕ್ತ ಹೆಪ್ಪುಗಟ್ಟುವಿಕೆಯಲ್ಲಿ ಭಾಗವಹಿಸುವ ಘಟಕಗಳನ್ನು ರೂಪಿಸುತ್ತವೆ. ಇನ್ನು ಕೆಲವು ಅಕ್ಷಿಪಟಲ (ರೆಟೀನ)ದ ದ್ಯುತಿ ಸಂವೇದಿ ಬಣ್ಣಕಗಳನ್ನು ರೂಪಿಸುತ್ತದೆ. ಉಳಿದ ವಂಶವಾಹಿಗಳು ಅನೇಕ ಮುಖ್ಯ ಪ್ರೋಟೀನುಗಳನ್ನು ಉತ್ಪಾದಿಸುತ್ತವೆ.

Y ಕ್ರೋಮೋಸೋಮು ಆಕೃತಿಯಲ್ಲಿ ಕಿರಿದಾಗಿರುತ್ತದೆ. ಇದರಲ್ಲಿ ಲಿಂಗ ನಿರ್ಣಾಯಕ ವಂಶವಾಹಿಗಳಲ್ಲದೆ, ಇತರ ಕೆಲವು ವಂಶವಾಹಿಗಳೂ ಇರುತ್ತವೆ.

**ತಿರುಗು ಮುರುಗು :**

ಭಾರತದ ಹೈದ್ರಾಬಾದಿನಲ್ಲಿ ''ಸೆಂಟರ್ ಫಾರ್ ಸೆಲ್ಯುಲಾರ್ ಅಂಡ್ ಮಾಲೆಕ್ಯುಲಾರ್ ಬಯಾಲಜಿ'' (CCMB) ಎಂಬ ಸಂಸ್ಥೆಯಿದೆ. ಇದರ ನಿರ್ದೇಶಕರು ಡಾ। ಲಾಲ್ಜಿಸಿಂಗ್ ಎಂಬುವವರು. ಇವರ ಜೊತೆ ಕುಮಾರಸ್ವಾಮಿ ತಂಗರಾಜ್, ನಲಿನಿ ಜೆ ಗುಪ್ತ ಮತ್ತು ಬೈದ್ಯನಾಥ್ ಚಕ್ರವರ್ತಿ ಎಂಬ ಸಂಗಡಿಗರಿದ್ದಾರೆ. ಇವರೆಲ್ಲರೂ ಸೇರಿ ನಡೆಸಿದ ಸಂಶೋಧನೆಯಿಂದ, ಲಿಂಗ ನಿರ್ಣಯ ದಲ್ಲಿ X ಮತ್ತು Y ಕ್ರೋಮೋ ಸೋಮುಗಳಲ್ಲದೆ ಇತರ ಹಲವು ಅಂಶಗಳು ಪ್ರಧಾನ ಪಾತ್ರ ವಹಿಸುತ್ತವೆ ಎಂಬ ಮಾಹಿತಿ ತಿಳಿದು ಬಂದಿದೆ.

**ಕ್ರೋಮೋಸೋಮು ವಿನ್ಯಾಸ**




ಮನುಷ್ಯನಲ್ಲಿ ೨೩ ಜೊತೆ ಕ್ರೋಮೋಸೋಮುಗಳು (ವರ್ಣತಂತುಗಳು) ಇವೆ. ಇವುಗಳಲ್ಲಿ ೨೨ ಜೊತೆ ಕಾಯ ಕ್ರೋಮೋಸೋಮುಗಳು ಹಾಗೂ ಒಂದು ಜೊತೆ ಲಿಂಗ ಕ್ರೋಮೋಸೋಮುಗಳಿರುತ್ತವೆ. ಲಿಂಗ ಕ್ರೋಮೋಸೋಮುಗಳನ್ನು X ಮತ್ತು y ಎಂದು ಗುರುತಿಸುವುದು ವಾಡಿಕೆ. X ಕ್ರೋಮೋಸೋಮು ದೊಡ್ಡದಾಗಿರುತ್ತದೆ. y ಕ್ರೋಮೋಸೋಮು ಚಿಕ್ಕದಾಗಿರುತ್ತದೆ. ಗಂಡಿನಲ್ಲಿ Xy ಕ್ರೋಮೋಸೋಮುಗಳಿದ್ದರೆ ಹೆಣ್ಣಿನಲ್ಲಿ XX ಕ್ರೋಮೋಸೋಮುಗಳಿರುತ್ತವೆ.

ಒಬ್ಬ ವ್ಯಕ್ತಿ ೧೫ ವರ್ಷದವ. ತಳಿ ವಿನ್ಯಾಸದ ಪ್ರಕಾರ ಅವನು ಗಂಡು. ಆದರೆ ದೇಹ ಹೆಣ್ಣಿನದು. ಸ್ತನಗಳು ಸುಂದರವಾಗಿ ಮೂಡಿವೆ. ಯೋನಿ ತುಟಿಗಳು ಬೆಳೆದಿವೆ. ಭಗಾಂಕುರವು ದೊಡ್ಡ ದಾಗಿದೆ. ದೇಹದ ರೋಮ ವಿನ್ಯಾಸ ಹೆಣ್ಣಿನಂತೆಯೇ ಇದೆ. ಭಗದ ನಡುವೆ ಮೂತ್ರದ್ವಾರವಿದೆ. ಯೋನಿ ೫ ಸೆಂ.ಮೀ. ಆಳವಾಗಿದೆ. ಗರ್ಭಾಶಯವು ಇನ್ನೂ ನೆರೆಯದ ಹೆಣ್ಣಿನ ಗರ್ಭಾಶಯದಂತಿದೆ. ಯೋನಿ ಪರೀಕ್ಷೆಯಲ್ಲಿ ಗರ್ಭಕೊರಳು ಬೆರಳಿಗೆ ಸಿಗದಿದ್ದರೂ, ಅಲ್ಟ್ರಾಸೋನೋಗ್ರಾಫಿ ಪರೀಕ್ಷೆಯಲ್ಲಿ ಮೂತ್ರಾಶಯ ಸಹಜ ಗಾತ್ರ, ಹಾಗೂ ಆಕೃತಿಯನ್ನು ಹೊಂದಿತ್ತು. ಗರ್ಭಾಶಯದ ಆಕೃತಿ ಸಹಜವಾಗಿತ್ತಾದರೂ ಆಕೃತಿಯಲ್ಲಿ ಸ್ವಲ್ಪ ಚಿಕ್ಕದಾಗಿತ್ತು. ಉದರ ದರ್ಶಕದ ಮೂಲಕ ವೀಕ್ಷಿಸಿದಾಗ ಗರ್ಭಾಶಯ ಸಹಜವಾಗಿರುವುದು ಕಂಡು ಬಂದಿತು. ಬಲ ಅಂಡಾಶಯದ ಗಾತ್ರ ಸರಿಯಾಗಿತ್ತು. ಆಕಾರವೂ ಸರಿಯಾಗಿತ್ತು. ಅಂಡಾಶಯದೊಂದಿಗೆ ಒಂದು ಜಲಚೀಲ (ಸಿಸ್ಟ್) ಇತ್ತು. ಗರ್ಭನಾಳ ಚೆನ್ನಾಗಿ ಬೆಳೆದಿತ್ತು. ಎಡ ಅಂಡಾಶಯವು ಒಂದು ಮಡಿಕೆಯ ಕೆಳಗೆ ಅಡಗಿತ್ತಾದ ಕಾರಣ ಅದರ ವಿವರಗಳನ್ನು ತಿಳಿಯಲಾಗಲಿಲ್ಲ. ಇಷ್ಟೆಲ್ಲ ಸ್ತ್ರೀ ಲಕ್ಷಣಗಳಿದ್ದರೂ, ಆ ವ್ಯಕ್ತಿಯ ಕ್ರೋಮೋಸೋಮುಗಳ ಅಧ್ಯಯನ, ಆ ವ್ಯಕ್ತಿ ಗಂಡೆಂದು ಹೇಳುತ್ತಿತ್ತು!

**ಮಗುವಿನ ಲಿಂಗ ನಿರ್ಣಯ**




ಅಂಡಾಣು ಯಾವಾಗಲೂ X ವರ್ಣತಂತುವನ್ನು ಹೊಂದಿರುತ್ತದೆ. ವೀರ್ಯಾಣು X ಧಾರಿಯಾಗಿರಬಹುದು ಇಲ್ಲವೆ Y ಧಾರಿಯಾಗಿರಬಹುದು. X ವೀರ್ಯಾಣು ಗರ್ಭಕಟ್ಟಿದರೆ ಹೆಣ್ಣು, Y ವೀರ್ಯಾಣು ಗರ್ಭಕಟ್ಟಿದರೆ ಗಂಡು ಮಗು ಹುಟ್ಟುತ್ತದೆ. ಮಗುವಿನ ಲಿಂಗ ನಿರ್ಣಾಯಕ ತಂದೆ. ತಾಯಿಯಲ್ಲ!

### ಕ್ಲಿನ್‌ಫೆಲ್ಟರನ ಲಕ್ಷಣಾವಳಿ

ಲಿಂಗ ಕ್ರೋಮೋಸೋಮಿನ ವಿರೂಪತೆಯಿಂದ ತಲೆದೋರುವ ವೈಪರೀತ್ಯವಿದು. ಗಂಡಿನ ದೇಹದಲ್ಲಿ ಸಹಜವಾಗಿ XY ಕ್ರೋಮೋಸೋಮುಗಳಿರುತ್ತವೆ. ಕ್ಲಿನ್‌ಫೆಲ್ಟರ್ ಲಕ್ಷಣಾವಳಿಯನ್ನು ಹೊಂದಿರುವ ವ್ಯಕ್ತಿಯಲ್ಲಿ XYಗಳ ಜೊತೆಯಲ್ಲಿ ಮತ್ತೊಂದು ಅಧಿಕ ಕ್ರೋಮೋಸೋಮಿರುತ್ತದೆ. ಸಾಮಾನ್ಯವಾಗಿ ಈ ಅಧಿಕ ಕ್ರೋಮೋಸೋಮು X ಆಗಿರುತ್ತದೆ. ಹಾಗಾಗಿ ಇವರ ವಿನ್ಯಾಸ XXY ಆಗಿರುತ್ತದೆ.

ಇಂತಹ ವೈಪರೀತ್ಯ ಪ್ರತಿ ೫೦೦ ಗಂಡಸರಲ್ಲಿ ಒಬ್ಬರಿಗೆ ಕಂಡುಬರಬಹುದು. ಇವರಲ್ಲಿ ಒಂದು X ಕ್ರೋಮೋಸೋಮು ಅಧಿಕವಾಗಿರುವುದರಿಂದ ಕೆಲವು ಸ್ತ್ರೀ ಲಕ್ಷಣಗಳು ಈ ಪುರುಷರಲ್ಲಿ ಕಂಡುಬರಬಹುದು. ಈ ಲಕ್ಷಣಗಳು ಹದಿಹರಯದುದಿ ಮೊದಲು ಕಂಡುಬರುವುದು ಅಪರೂಪ. ವೃಷಣಗಳು ಚಿಕ್ಕದಾಗಿರುತ್ತವೆ. ಸಾಮಾನ್ಯವಾಗಿ ಇವರು ಮಕ್ಕಳನ್ನು ಹೆರಲಾರರು. ಶಿಶ್ನವೂ ಕಿರಿದಾಗಿರುತ್ತದೆ. ಸ್ತನಗಳು ದೊಡ್ಡದಾಗಬಹುದು. ಇನ್ನೂ ಕೆಲವು ಸ್ತ್ರೀ ಲಕ್ಷಣಗಳು ಕಂಡುಬರಬಹುದು. ಇವರಿಗೆ ಲೈಂಗಿಕಾಸಕ್ತಿ ಇರುವುದು ಅಪರೂಪ.

ಈ ಗಂಡಸರು ತೆಳ್ಳಗೆ, ಉದ್ದಕ್ಕೆ ಮಡಿಕೋಲಿನ ಹಾಗೆ ಇರುತ್ತಾರೆ. ಇವರು ಲಿಂಗ ಗೊಂದಲಕ್ಕೆ ತುತ್ತಾಗುವುದು ಹೆಚ್ಚು. ಗಂಡಾದರೂ ಹೆಣ್ಣಿನಂತೆ ಉಡುಪು ಧರಿಸಬಯಸಬಹುದು. ಅನ್ಯಲಿಂಗ ಕಾಮಿಗಳ ಬದಲು ಸಲಿಂಗ ಕಾಮಿಗಳಾಗುವ ಸಾಧ್ಯತೆ ಹೆಚ್ಚು. ಬುದ್ಧಿ ಮಾಂದ್ಯತೆಯೂ ಕಂಡುಬರಬಹುದು.

ಇವರು ವೈದ್ಯರನ್ನು ಕಾಣಬೇಕು. ಶಸ್ತ್ರಚಿಕಿತ್ಸೆಯಿಂದ ವೃದ್ಧಿಸಿದ ಸ್ತನಗಳನ್ನು ಛೇದಿಸಬಹುದು. ಪುರುಷ ಹಾರ್ಮೋನುಗಳನ್ನು ನೀಡಿ, ದ್ವಿತೀಯಕ ಲೈಂಗಿಕ ಲಕ್ಷಣಗಳನ್ನು ತರಿಸಬಹುದು.



ಕ್ಲಿನ್‌ಫೆಲ್ಟರನ ಲಕ್ಷಣಾವಳಿ : ಈ ಗಂಡಸರಲ್ಲಿ ಒಂದು ಅಧಿಕ X ಕ್ರೋಮೋಸೋಮಿರುತ್ತವೆ. (XXy) ಈ ಅಧಿಕ X ಕ್ರೋಮೋಸೋಮು ಇವರಲ್ಲಿ ಕೆಲವು ಸ್ತ್ರೀ ಲಕ್ಷಣಗಳನ್ನು ಉಂಟು ಮಾಡಬಹುದು. ಇವರು ನೀಳಕಾಯರು. ದ್ವಿತೀಯಕ ಲೈಂಗಿಕ ಲಕ್ಷಣಗಳು ಕಡಿಮೆ. ಶಿಶ್ನ ಚಿಕ್ಕದು. ಬೀಜಗಳು ಬೆಳೆದಿರುವುದಿಲ್ಲ. ಇವರನ್ನು ಸಕಾಲದಲ್ಲಿ ಗುರುತಿಸಿ ಚಿಕಿತ್ಸೆ ನೀಡಬೇಕು.

ಇದೊಂದು ಲಿಂಗ ತಿರುಗು ಮುರುಗಿನ ಅಪರೂಪದ ಪ್ರಕರಣವಾಗಿ ಪರಿಣಮಿಸಿತ್ತು!

ಈ ವಿವರಣೆಯಿಂದ X ಕ್ರೋಮೋಸೋಮಿನ ಮಹತ್ವ ಅರಿವಾಗುತ್ತದೆ. ಗಂಡಾಗಲಿ ಅಥವಾ ಹೆಣ್ಣಾಗಲಿ X ಕ್ರೋಮೋ ಸೋಮು ಇರಲೇಬೇಕು. ಗಂಡಿನಲ್ಲಿ ಒಂದು X ಕ್ರೋಮೋಸೋಮು ಇರುವ ಕಾರಣದಿಂದ ರಕ್ತ ಹೆಪ್ಪುಗಟ್ಟುವಿಕೆಯು ಹೆಣ್ಣಿನಂತೆಯೇ ನಡೆಯಲು ಸಾಧ್ಯವಾಗಿದೆ.

X ಕ್ರೋಮಸೋಮಿನಲ್ಲಿ ಲಿಂಗ ನಿರ್ಣಾಯಕ ವಂಶವಾಹಿಗಳಲ್ಲದೆ, ಲಿಂಗ ನಿರ್ಣಾಯಕೇತರ ವಂಶವಾಹಿಗಳೂ ಇವೆಯೆಂದಾಯಿತು. ಇವನ್ನು ಲಿಂಗಸಂಬಂಧಿತ ಲಕ್ಷಣ (ಸೆಕ್ಸ್‌ಲಿಂಕಡ್ ಟ್ರೇಟ್ಸ್)ಗಳು ಎಂದು ಕರೆಯುತ್ತೇವೆ. ಲಿಂಗ ಸಂಬಂಧಿತ ಲಕ್ಷಣಗಳಲ್ಲಿ ಬಹುಪಾಲಿನವು X ಸಂಬಂಧಿತವಾದಂತಹವು.

Y ಕ್ರೋಮೋಸೋಮು ವೃಷಣ ನಿರ್ಮಾಣಕ್ಕೆ ಕಾರಣ Y ಕ್ರೋಮೋಸೋಮಿನಲ್ಲಿ ಲಿಂಗ ನಿರ್ಣಾಯಕ ವಂಶವಾಹಿಗಳೊಡನೆ ಲಿಂಗ ನಿರ್ಣಾಯಕೇತರ ವಂಶವಾಹಿಗಳೂ ಇರುತ್ತವೆಯಲ್ಲವೆ! ಈಗ ವಿಜ್ಞಾನಿಗಳು Y ಕ್ರೋಮೋಸೋಮಿನಲ್ಲಿರುವ ಲಿಂಗ ನಿರ್ಣಾಯಕ ವಂಶವಾಹಿಗಳನ್ನು ಪತ್ತೆ ಹಚ್ಚಿದ್ದಾರೆ. ಇದನ್ನು "ಲಿಂಗ ನಿರ್ಣಾಯಕ ಪ್ರದೇಶ Y" ಎಂದು ಗುರುತಿಸಿದ್ದಾರೆ. (ಸೆಕ್ಸ್ ಡಿಟರ್ಮಿನಿಂಗ್ ರೀಜನ್ Y ಅಥವಾ SRY) ಈ SRY ಸಮಗ್ರವಾಗಿದ್ದಾಗ ಮಾತ್ರ ವೃಷಣಗಳು ರೂಪುಗೊಳ್ಳುತ್ತವೆ. Y ಕ್ರೋಮೋಸೋಮಿನಲ್ಲಿರುವ ZFY ವಂಶವಾಹಿ ಮತ್ತು ಕಾಯಕ್ರೋಮೋಸೋಮಿನಲ್ಲಿರುವ ೫೦ X ೯ ವಂಶವಾಹಿ ಮೂರು ಹಂತ: ಯೂ ಲಿಂಗ ನಿರ್ಣಾಯಕವಾಗಬಲ್ಲವು. ಒಬ್ಬ ವ್ಯಕ್ತಿಯ ಲಿಂಗ ನಿರ್ಣಯ ಮೂರು ಹಂತದಲ್ಲಿ ನಡೆಯುತ್ತದೆ. ಮೊದಲನೆಯದು ಕ್ರೋಮೋಸೋಮುಗಳ ಮಟ್ಟದಲ್ಲಿ. ಎರಡನೆಯದು ಜನನ ಗ್ರಂಥಿಯ ಮಟ್ಟದಲ್ಲಿ ಮತ್ತು ಮೂರನೆಯದು ದೈಹಿಕ ಲಕ್ಷಣ ಮಟ್ಟದಲ್ಲಿ.

ಒಬ್ಬ ವ್ಯಕ್ತಿಯ ಕ್ರೋಮೋಸೋಮುಗಳ ವಿನ್ಯಾಸವು ಜನನಗ್ರಂಥಿಯ ರಚನೆಯನ್ನು ನಿರ್ಣಯಿಸುತ್ತದೆ. ಜನನ ಗ್ರಂಥಿಯ ರಚನೆ ಮತ್ತು ಕಾರ್ಯ, ಆ ವ್ಯಕ್ತಿಯ ದೈಹಿಕ ಲಕ್ಷಣಗಳನ್ನು ಅದರ ಮೂಲಕ ಆ ವ್ಯಕ್ತಿಯ ಲಿಂಗವನ್ನು ನಿರ್ಣಯಿಸುತ್ತದೆ.

ಇದರಲ್ಲಿ ಯಾವುದೇ ಗೊಂದಲವಿಲ್ಲ.

ಕೆಲವು ಸಂದರ್ಭಗಳಲ್ಲಿ ಗೊಂದಲಗಳು ಮೂಡಬಹುದು. ಕ್ರೋಮೋಸೋಮು ದೋಷಗಳು, ಹಾರ್ಮೋನು ವೈಪರೀತ್ಯಗಳು ಹಾಗೂ ಪರಿಸರ ದುಷ್ಪ್ರಭಾವಗಳು ಈ ಗೊಂದಲಕ್ಕೆ ಪ್ರಮುಖ ಕಾರಣಗಳಾಗಿರುತ್ತವೆ.

ಒಬ್ಬ ವ್ಯಕ್ತಿಯ ತಳಿವಿನ್ಯಾಸ XXY ಆಗಬಹುದು. ಆಗ ಆ ವ್ಯಕ್ತಿ ಗಂಡಾಗುತ್ತದೆ. ಆದರೆ ಆ ವ್ಯಕ್ತಿ ಸಂತಾನ ಭಾಗ್ಯವನ್ನು ಪಡೆದಿರುವುದಿಲ್ಲ!

ಡಾ। ಲಾಲ್ಜಿಸಿಂಗ್ ಮತ್ತು ತಂಡದವರು ಅಭ್ಯಸಿಸಿದ ವ್ಯಕ್ತಿಯ ತಳಿ ವಿನ್ಯಾಸ XXY ಆಗಿತ್ತು. ಅಂದರೆ ಆ ವ್ಯಕ್ತಿ ಗಂಡಾಗಬೇಕಿತ್ತು. ಆದರೆ ಆ ವ್ಯಕ್ತಿ ಜನನಗ್ರಂಥಿ ಮಟ್ಟದಲ್ಲಿ ಹಾಗೂ ದೈಹಿಕ ಲಕ್ಷಣ ಮಟ್ಟದಲ್ಲಿ ಹೆಣ್ಣಾಗಿತ್ತು. ಅಂಡಾಶಯಗಳಿದ್ದವು. ಗರ್ಭಾಶಯ ಸ್ತನ ಮುಂತಾದವಿದ್ದವು. ತಳಿವಿನ್ಯಾಸ ಗಂಡಿನದ್ದಾದರೂ ದೇಹ ಹೆಣ್ಣಿನದ್ದಾಗಿತ್ತು.

ಈ ವಿಜ್ಞಾನಿಗಳು ಹಾರ್ಮೋನುಗಳ ಮಟ್ಟವನ್ನು ಅಳೆದರು. ಅವು ಸರಾಸರಿ ಹೆಣ್ಣಿನಂತಿದ್ದವು. ವಿಜ್ಞಾನಿಗಳು ವಂಶವಾಹಿಗಳ ಅಧ್ಯಯನ ನಡೆಸಿದರು. SRY, ZFY ಮತ್ತು ೫೦X೯ ವಂಶವಾಹಿಗಳಲ್ಲಿ ಯಾವುದೇ ದೋಷಗಳಿರಲಿಲ್ಲ. ಹಾಗಾಗಿ ಈ ವ್ಯಕ್ತಿ ಪರಿಪೂರ್ಣ ಗಂಡಾಗಲೇಬೇಕಿತ್ತು.

ಅಂದರೆ......

ಓರ್ವ ವ್ಯಕ್ತಿ, ಗಂಡು ಎಂದು ನಿರ್ಣಯಿಸುವಲ್ಲಿ SRY, ZFY , ೫೦ X ೯ ಅಲ್ಲದೆ ಇನ್ನೂ ಹಲವು ವಂಶವಾಹಿಗಳು ಇರಲೇಬೇಕು! ಈ ಹೊಸ ಲಿಂಗ ನಿರ್ಣಾಯಕ ವಂಶವಾಹಿಗಳನ್ನು ಬೇಟೆಯಾಡುವಲ್ಲಿ ಈ XXY ಪ್ರಕರಣ ಸ್ಫೂರ್ತಿಯನ್ನು ಕೊಟ್ಟಿದೆ.

ಈ ಮೇಲಿನ ಪ್ರಕರಣದ ವಿವರಗಳನ್ನು ಕುರಿತು ಡಾ। ಲಾಲ್ಜಿಸಿಂಗ್ ಒಂದು ಪ್ರಬಂಧವನ್ನು ಬರೆದಿದ್ದಾರೆ. ಅದನ್ನು ಬ್ರಿಟನ್ನಿನ ಖ್ಯಾತ ವೈದ್ಯಕೀಯ ನಿಯತಕಾಲಿಕ 'ಲ್ಯಾನ್ಸೆಟ್' ಪ್ರಕಟಿಸಲು ಒಪ್ಪಿದೆ. ಈ ಲೇಖನ, ವಿಶ್ವದಾದ್ಯಂತ ವಿಜ್ಞಾನಿಗಳ ಕುತೂಹಲವನ್ನು ಕೆರಳಿಸುವಲ್ಲಿ ಯಾವುದೇ ಸಂಶಯವಿಲ್ಲ. ❑

# ಕೌಟುಂಬ ಆರೋಗ್ಯ ರಕ್ಷಣೆ

## ಕಿವಿಮಾತುಗಳು

◊ ಡಾ। ಎ.ಟಿ. ಪಾಟೀಲ್

*ನನ್ನ ೨೫ ವರ್ಷಗಳ ವೈದ್ಯಕೀಯ ಕ್ಷೇತ್ರದಲ್ಲಿಯ ಅನುಭವಗಳನ್ನು ಕ್ರೋಢೀಕರಿಸಿ ಕುಟುಂಬ ಆರೋಗ್ಯದ ವಿಷಯದಲ್ಲಿ ಕೆಲವೊಂದು ಸರಳವಾದ ಕಿವಿಮಾತುಗಳು/ ಸೂತ್ರಗಳ ಬಗ್ಗೆ ಒಂದು ಟಿಪ್ಪಣಿ ಮಾಡಿ. ಪ್ರತಿ ತಿಂಗಳು ಒಂದೊಂದಾಗಿ ನಿಮ್ಮ ಮುಂದೆ ಇಡಲು ಇಚ್ಛಿಸಿದ್ದೇನೆ. ಈ ಟಿಪ್ಪಣಿಯ ಸರಳ ಸೂತ್ರಗಳು ನಿಮ್ಮ ಕುಟುಂಬ ಆರೋಗ್ಯ ಸಂರಕ್ಷಣೆಯ ವಿಷಯದಲ್ಲಿ ಸಹಕಾರಿಯಾಗಬಲ್ಲದೆಂದು ನನ್ನ ವೈಯಕ್ತಿಕ ಅಭಿಪ್ರಾಯ. ಇಲ್ಲಿ ಮಂಡಿಸಿದ ವಿಷಯಗಳ ಬಗ್ಗೆ ನಿಮಗೆ ಏನಾದರೂ ಸಂಶಯಗಳು ಕಾಡುತ್ತಿದ್ದಲ್ಲಿ ನೀವುಗಳು ನಿಮ್ಮ ಕುಟುಂಬ ವೈದ್ಯರ ಸಲಹೆಗಳನ್ನು ಪಡೆಯಬಹುದು.*



''ಕುಟುಂಬ ಆರೋಗ್ಯ'' ನೆಮ್ಮದಿ ಜೀವನದ ಪ್ರಥಮ ಸೋಪಾನ. ಕುಟುಂಬದ ಎಲ್ಲ ಸದಸ್ಯರ ಆರೋಗ್ಯ ಸರಿಯಿದ್ದರೇ, ಕುಟುಂಬದ ಯಜಮಾನನ ಚಿಂತೆಗಳು ದೂರವಾಗಿ ಆತನ ಕಾರ್ಯಕ್ಷಮತೆ ಹೆಚ್ಚುವುದು, ಹಾಗೂ ಜೀವನ ಆದರ್ಶ ಗುರಿಯನ್ನು ಲೀಲಾಜಾಲವಾಗಿ ತಲುಪುವಲ್ಲಿ ಯಾವುದೇ ಎಡರುತೊಡರುಗಳು ಅಡ್ಡಿಯಾಗಲಾರವು. "if wealth is lost nothing is lost, if health is lost something is lost, if character is lost everything is lost'' - ಆರೋಗ್ಯದ ಬಗ್ಗೆ ನಿಖರವಾಗಿ ಹೇಳುವ ಈ ನುಡಿಮುತ್ತುಗಳು ಆರೋಗ್ಯದ ಮಹತ್ವವನ್ನು ಪ್ರತಿಪಾದಿಸುವಲ್ಲಿ ಯಶಸ್ವಿಯಾಗಿವೆ. ''ಆರೋಗ್ಯವಂತರ ಕುಟುಂಬ ಸುಖಿಗಳ ಕುಟುಂಬ'' ವೆಂಬುದನ್ನು ಎಲ್ಲ ಹಿರಿ-ಕಿರಿಯರು ಬಲ್ಲರು. ರೋಗ ರುಜಿನಗಳು ಆಕ್ರಮಣ ಮಾಡದಂತೆ ಎಚ್ಚರ ವಹಿಸುವುದೇ ಜಾಣ ಕುಟುಂಬದ ಎಲ್ಲ ಸದಸ್ಯರ ಪ್ರಥಮ ಕರ್ತವ್ಯ. Prevention is better than cure'' ಎಂಬ ಮರೆಯಲಾರದ ದಿನ ನಿತ್ಯ ನಾವುಗಳು ಬಳಸುವ ವಾಕ್ಯಗಳು ಅರ್ಥಪೂರ್ಣವಾಗಿದೆ. ಸ್ವಚ್ಛವಾದ ಪರಿಸರ, ನಿಯಮಿತ ಪೌಷ್ಟಿಕ ಆಹಾರ ಸೇವನೆ, ನಿರ್ಮಲವಾದ ಕೌಟುಂಬಿಕ ವಾತಾವರಣ ಹಾಗೂ ಇದ್ದುದರಲ್ಲಿಯೇ ಸಂತೃಪ್ತಿ ಪಡೆಯುವ ಮನಸ್ಸುಗಳಿದ್ದರೆ ಮಾತ್ರ ಜೀವನ ಸುಖಮಯವಾಗಬಲ್ಲದು. Hurry Worry and Curry should avoided".

### ★ ವೈಯಕ್ತಿಕ ಮತ್ತು ಪರಿಸರ ನೈರ್ಮಲ್ಯತೆ :

i. ಉಗುರುಗಳನ್ನು ಆಗಾಗ್ಗೆ ಕತ್ತರಿಸಿ, ಉಗುರಿನ ಸಂದುಗಳನ್ನು ಸ್ವಚ್ಛಗೊಳಿಸಬೇಕು. ಆಧುನಿಕ ಫ್ಯಾಶನ್‌ಗಳ ಮೊರೆ ಹೋಗಿ ಉಗುರುಗಳಿಗೆ ಬಣ್ಣಗಳನ್ನು ಲೇಪಿಸದೇ ಇದ್ದರೆ ಒಳಿತು. ಉಗುರು ಕಡಿಯುವ ಚಟಗಳಿಂದ ದೂರವಿರಬೇಕು.

ii. ಊಟದ ಮೊದಲು ಮತ್ತು ಮಲವಿಸರ್ಜನೆಯ ನಂತರ ನಿಮ್ಮ ಕೈಗಳನ್ನು ಸೋಪು ಹಾಗೂ ಸಾಧ್ಯವಿದ್ದರೆ ಬಿಸಿ ನೀರಿನಿಂದ ತೊಳೆಯುವ ರೂಢಿ ರೋಗರಹಿತ ಜೀವನದ ಪ್ರಥಮ ಮೆಟ್ಟಿಲು.

iii. ಸಿಕ್ಕಸಿಕ್ಕ ಸ್ಥಳಗಳಲ್ಲಿ ಬಾಯರುಚಿಗಾಗಿ ಆಹಾರ ಸೇವನೆಯನ್ನು ವರ್ಜಿಸಬೇಕು. 'ಬಾಯಿರುಚಿ' ಯೊಂದೇ ಜೀವನದ ಗುರಿಯಲ್ಲ.

iv. ಕಾಯಿಸಿ ಆರಿಸಿದ ನೀರನ್ನೇ ಕುಡಿಯುವುದು ಉತ್ತಮ. ಪ್ರಮಾಣೀಕರಿಸಿದ ಕುಡಿಯಲು ಯೋಗ್ಯವಾದ ಬೋರಿನ ನೀರನ್ನು ಸಹ ಬಳಸಬಹುದು.

v. ಅದೇ ಆಗ ಸಂತೆಯಿಂದ ತಂದ ತಾಜಾ ಸೊಪ್ಪು ಮತ್ತು ತರಕಾರಿಗಳನ್ನು ತಿನ್ನುವ ಗೊಡವೆಗೆ ಹೋಗಬಾರದು. ಇವನ್ನು ಚೆನ್ನಾಗಿ ತೊಳೆದೇ ಬಳಸಬೇಕು.

vi. ನೀವುಗಳು ಮಾಂಸಾಹಾರಿಗಳಾಗಿದ್ದರೆ, ಮಾಂಸವನ್ನು ನಿಮ್ಮ ವಿಶ್ವಾಸಿಕರ ಅಂಗಡಿಯಿಂದಲೆ ಪಡೆಯಿರಿ. ಉಪಯೋಗಿಸುವ ಮೊದಲು ಚೆನ್ನಾಗಿ ಬೇಯಿಸಿರಿ.

vii. ನಿಮ್ಮ ಮನೆ ಮತ್ತು ಮನೆಯ ಸುತ್ತಮುತ್ತಲಿನ ವಾತಾವರಣ/ ಪರಿಸರವನ್ನು ಸ್ವಚ್ಛವಾಗಿಡಲು ಸದಾಕಾಲ ಶ್ರಮಿಸಿರಿ. ಪಾರ್ಥೇನಿಯಂ (ಕಾಂಗ್ರೆಸ್ ಹುಲ್ಲು) ಬೆಳೆಯದಂತೆ ನೋಡಿಕೊಳ್ಳಬೇಕು. ಗಲೀಜು ನೀರು ನಿಲ್ಲದಂತೆ ಎಚ್ಚರವಹಿಸಬೇಕು.

viii. ಸಾಧ್ಯವಾದಷ್ಟೂ ನಿಮ್ಮ ಬಟ್ಟೆಗಳನ್ನು ಮನೆಯಲ್ಲಿಯೇ ಒಗೆದು ಮಡಿ ಮಾಡಿಕೊಳ್ಳುವುದು ಒಳಿತು. ❐

# ವೈದ್ಯ ವೃತ್ತಿ ಮತ್ತು ಏಯ್ಡ್ಸ್

*'ಏಡ್ಸ್ ಪರಿಹಾರವಿಲ್ಲದ ಭಯಂಕರ ರೋಗ. ಇದನ್ನು ಜಯಿಸುವ ಶಕ್ತಿ ಸಾಮರ್ಥ್ಯಗಳು ನಮ್ಮಲ್ಲಿಲ್ಲ ಎಂದ ಮೇಲೆ ಇದರಿಂದ ದೂರವಿರುವ ಉಪಾಯಗಳನ್ನಾದರೂ ಕಂಡುಕೊಳ್ಳುವುದು ಅವಶ್ಯಕ. ಈ ಮಾತಿಗೆ ವೈದ್ಯರೂ ಹೊರತಲ್ಲ.*

ಡಾ। ಬಿ.ಜಿ. ಚಂದ್ರಶೇಖರ್




'ಎಲ್ಲರೂ ದುಡಿಯುವುದು ಗೇಣುದ್ದ ಹೊಟ್ಟೆಗಾಗಿ, ಚೋಟುದ್ದ ಬಟ್ಟೆಗಾಗಿ' ಎಂಬುದು ಎಲ್ಲರಿಗೂ ತಿಳಿದೇ ಇದೆ. ಅಂದು ತುಂಡು ಬಟ್ಟೆಯಿಂದ ಮಾನ ಮುಚ್ಚಿಕೊಂಡು, ಹಿಡಿ ಅನ್ನದಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ ಮಾನವ ಇಂದು ಆಡಂಬರದ ಜೀವನಕ್ಕೆ ಆಕರ್ಷಿತನಾಗಿದ್ದಾನೆ. ಅನೇಕ ದುಶ್ಚಟಗಳಿಗೆ ದಾಸನಾಗಿ ಕ್ಷಣಿಕ ಸ್ವರ್ಗ ಸುಖಕ್ಕೆ ಜೋತು ಬೀಳುತ್ತಿದ್ದಾನೆ. ಈ ಎಲ್ಲ ಬಯಕೆಗಳ ಈಡೇರಿಕೆಗೆ ಹೇರಳ ಹಣಬೇಕು. ಹಣ ಸಂಪಾದನೆಗೆ ಕೆಲವರು ಎಂತಹ ಮಾರ್ಗ ತುಳಿಯಲೂ ಹಿಂಜರಿಯುವುದಿಲ್ಲ.

ವೈದ್ಯ ವೃತ್ತಿ ಅತ್ಯಂತ ಪವಿತ್ರ ವೃತ್ತಿ. ಇದು ಪ್ರವೃತ್ತಿಯಿಂದ ಪ್ರಾರಂಭವಾಗಿ ಉಪವೃತ್ತಿಯಾಗಿ ಮುಂದುವರಿದು ಇಂದು ಕೇವಲ ಹಣ ಗಳಿಕೆಯ ಮುಖ್ಯ ವೃತ್ತಿಯಾಗಿದೆ. ಜನಸೇವೆಯೇ ಪ್ರಧಾನ ಗುರಿಯಾಗಿದ್ದ ವೈದ್ಯಕೀಯ ಸೇವೆ ಇಂದು ಒಂದು ವ್ಯಾಪಾರವಾಗಿದೆ. ಅಧಿಕ ಸಂಪಾದನೆಗೆ ಹೆಚ್ಚು ರೋಗಿಗಳ ಭೀಕರ ರೋಗಗಳ ಸಂಪರ್ಕ ಅನಿವಾರ್ಯ. ಹೀಗಾಗಿ ಅಗತ್ಯ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳದೇ ಇದ್ದಲ್ಲಿ ಅನೇಕ ರೋಗಗಳು ರೋಗಿಗಳಿಂದ ವೈದ್ಯರಿಗೂ, ವೈದ್ಯರಿಂದ ರೋಗಿಗಳಿಗೂ ಹರಡುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಇಪ್ಪತ್ತನೇ ಶತಮಾನದ ಅಂತ್ಯ ಭಾಗದ ಭಯಾನಕವಾದ HIV ಸೋಂಕು. ಮತ್ತು AIDS ರೋಗಗಳು ವೈದ್ಯವೃತ್ತಿಯಲ್ಲಿ ತೊಡಗುವವರಿಗೆ ಬರುವ ಸಂಭವ ಇದೆಯೇ? ಹೌದಾದರೆ ಅದನ್ನು ನಿಯಂತ್ರಿಸುವುದು ಹೇಗೆ? ಎಂಬುದರ ಅರಿವನ್ನು ಎಲ್ಲರೂ ಪಡೆಯುವುದು ಇಂದು ಅತ್ಯವಶ್ಯಕ.

### ಎಚ್.ಐ.ವಿ. (HIV) ಸೋಂಕಿನ ಮುನ್ನೋಟ:

ಅನೇಕ ವೃತ್ತಿಗಳಲ್ಲಿರುವಂತೆ ವೈದ್ಯ ವೃತ್ತಿಯಲ್ಲಿಯೂ ಸಿಬ್ಬಂದಿವರ್ಗಕ್ಕೆ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ತೊಂದರೆಗಳಿಗೆ ಹಾಗೂ ಎಚ್.ಐ.ವಿ. ಸೋಂಕಿಗೆ ತುತ್ತಾಗುವ ಸಾಧ್ಯತೆ ಉಂಟು. ೨,೦೦೦ ಇಸ್ವಿ ಹೊತ್ತಿಗೆ ಮೂರರಿಂದ ನಾಲ್ಕು ಕೋಟಿ ಜನ HIV ಸೋಂಕಿಗೆ ಒಳಗಾಗುವ ನಿರೀಕ್ಷೆ ಇದೆ. ಅದರಲ್ಲಿ AIDS ರೋಗದಿಂದ ಒಂದು ಕೋಟಿ ಜನ ನರಳುವರೆಂದು ಅಂದಾಜು ಮಾಡಲಾಗಿದೆ. ಅದರಲ್ಲಿ ಶೇಕಡಾ೯೦ರಷ್ಟನ್ನು ಹಿಂದುಳಿದ ಮತ್ತು ಪ್ರಗತಿ ಪರ ರಾಷ್ಟ್ರಗಳಲ್ಲೇ ಕಾಣಬಹುದು.

೧೯೮೩ ರಲ್ಲಿ ಬಾಲ್ಟಿಮೋರ್‌ನ ಔಷಧ ಶಾಸ್ತ್ರತಜ್ಞರೊಬ್ಬರು ರೋಗಿಯೊಬ್ಬನ ರಕ್ತದ ಸಂಪರ್ಕವನ್ನು ರೋಗಿಗೆ ಇಂಜಕ್ಷನ್‌ಕೊಟ್ಟ ನಂತರ ಅದರ ಸೂಜಿ ಆಕಸ್ಮಿಕವಾಗಿ ಅವರಿಗೆ ಚುಚ್ಚಿದ ಪರಿಣಾಮವಾಗಿ ಆ ತಜ್ಞರು AIDS ಸೋಂಕು ಪಡೆದು ೧೯೮೬ ರಲ್ಲಿ ಅಸು ನೀಗಿದರು.

೧೯೭೫ - ೭೬ ರಲ್ಲಿ ಸ್ತ್ರೀ ಶಸ್ತ್ರ ಚಿಕಿತ್ಸಕರೊಬ್ಬರು ಡಾನಿಶ್‌ನಲ್ಲಿ ಅನೇಕ ಚುಚ್ಚುಗಾಯಗಳಿಂದ AIDS ಗೆ ತುತ್ತಾಗಿ ೧೯೭೭ ರಲ್ಲಿ ಮರಣ ಹೊಂದಿದರು.

ವೈದ್ಯರು ಅಜಾಗರೂಕರಾದರೆ AIDS ಗೆ ಬಲಿಯಾಗುವ ಸಾಧ್ಯತೆ ಇದೆಯೆಂದು ಇದರಿಂದ ಗೊತ್ತಾಗುತ್ತದೆ.

### ರೋಗಪ್ರಸಾರ:

ಎಚ್.ಐ.ವಿ. ರೋಗಕಾರಗಳು ವೈದ್ಯ ಸಿಬ್ಬಂದಿಯು ರೋಗಿಗಳ ತಪಾಸಣೆ ಮತ್ತು ಚಿಕಿತ್ಸೆಗೆ ಉಪಯೋಗಿಸಿದ ಸಿರಿಂಜ್, ಸೂಜಿ, ಜೈವಿಕ ದ್ರವಗಳು ಯೋನಿ ದ್ರವ (ಹೆರಿಗೆ ಸಮಯದಲ್ಲಿ) ಮತ್ತು ಎದೆ ಹಾಲಿನಲ್ಲಿ ಇರುತ್ತವೆ. ಈ ವೈರಸ್ಸುಗಳು ಸಾಮಾನ್ಯವಾಗಿ ರೋಗಿಯಿಂದ ರೋಗಿಗೆ, ಆಗಾಗ ರೋಗಿಗಳಿಂದ ವೈದ್ಯ ಸಿಬ್ಬಂದಿಗೆ ಅಪರೂಪವಾಗಿ ವೈದ್ಯ ಸಿಬ್ಬಂದಿಯಿಂದ ರೋಗಿಗಳಿಗೆ ಹರಡಬಹುದು. ಇದು ಮುಖ್ಯವಾಗಿ ಎಚ್‌ಐವಿ ಸೋಂಕಿನವರ ಸಂಖ್ಯೆ ಕಲುಷಿತ ಉಪಕರಣಗಳ

ಸಂಪರ್ಕ, ವೈರಸ್ ಸೋಂಕಿನ ಸಾಮರ್ಥ್ಯ, ರಕ್ತದಲ್ಲಿ ಅವುಗಳ ಸಂಖ್ಯೆ, ರೋಗಿಗಳಿಗೆ ಕೊಡುವ ಚಿಕಿತ್ಸಾ ವಿಧಾನ, ಸಂಪರ್ಕದ ಅವಧಿ, ರೋಗ ನಿರೋಧಕ ಶಕ್ತಿಯ ಮಟ್ಟ ಮುಂತಾದವುಗಳನ್ನು ಅವಲಂಬಿಸಿರುತ್ತದೆ. ರೋಗಕಾರಕಗಳು ಹರಡಲು ಮುಖ್ಯವಾಗಿ ರೋಗಿಯ ರಕ್ತ, ರಕ್ತಸಿಕ್ತವಾದ ದ್ರವಗಳು ಪ್ರಧಾನ ಪಾತ್ರ ವಹಿಸುತ್ತವೆ.

ಚಿಕಿತ್ಸೆಗೆ ಉಪಯೋಗಿಸಿದ ಸಿರಿಂಜ್, ಸೂಜಿ, ಮತ್ತು ಇತರ ಉಪಕರಣಗಳಿಂದ ಸಿಬ್ಬಂದಿಯವರಿಗೆ ಚುಚ್ಚುಗಾಯ ಅಥವಾ ತರಚುಗಾಯಗಳಾದರೆ ಅಥವಾ ರೋಗಿಯ ರಕ್ತದಿಂದೊಡಗೂಡಿದ ಅಥವಾ ದ್ರವ ತುಂಬಿದ ಸಿರಿಂಜ್‌ನ ಸೂಜಿಯಿಂದ ಗಾಯವಾದರೆ ಅವುಗಳಲ್ಲಿ ವೈರಸ್‌ಗಳ ಸಂಖ್ಯೆ ಅಧಿಕವಾಗಿರುವುದರಿಂದ ಸಿಬ್ಬಂದಿಯವರಿಗೆ HIV ಸೋಂಕು ತಗುಲುವ ಸಾಧ್ಯತೆ ಹೆಚ್ಚು.

ಸೂಜಿ ಅಥವಾ ಹರಿತವಾದ ಆಯುಧಗಳು ರೋಗಿಯ ರಕ್ತದಿಂದ ಕಲುಷಿತವಾಗಿದ್ದರೆ, ಸಿರಿಂಜ್‌ನಿಂದ ಸೂಜಿಯನ್ನು ಬೇರ್ಪಡಿಸುವಾಗ ಅಥವಾ ಸಿಬ್ಬಂದಿಯ ಲೋಳೆಪೊರೆಗೆ (Mucous Membrane) ರೋಗಿಯ ರಕ್ತ ಸಂಪರ್ಕವಾದರೆ ಸೋಂಕು ತಗುಲುತ್ತದೆ. ಇದು ಒಟ್ಟು ಸೋಂಕಿನಲ್ಲಿ ಶೇಕಡಾ ೦.೩೩ ರಷ್ಟು ಮಾತ್ರ ಕಾರಣವಾಗುವುದೆಂಬ ಅಂದಾಜಿದೆ. ಪ್ರಯೋಗಾಲಯಗಳಲ್ಲಿ ಕೆಲಸ ಮಾಡುವವರಿಗೆ, ಚರ್ಮದ ಮೇಲೆ ವ್ರಣ ಅಥವಾ ತರಚುಗಾಯಗಳಿದ್ದರೆ ರೋಗಿಯ ರಕ್ತದಲ್ಲಿರುವ ವೈರಸ್ಸು ಈ ಭಾಗವನ್ನು ಸಂಪರ್ಕಿಸಿದಾಗ ಸೋಂಕು ಉಂಟಾಗುತ್ತದೆ. ಪ್ರತಿ ೧೨೨೦ ಬಾರಿ ಸೂಜಿ ಚುಚ್ಚಿದಾಗ ಆಗುವ ಗಾಯದಿಂದ ಕೇವಲ ೫ ಮಂದಿ (ಶೇ. ೦.೩೮) ಈ ತರಹ ನಂಜು ಪಡೆಯುತ್ತಾರೆಂದು ಗೊತ್ತಾಗಿದೆ. ಇದು ಶೇಕಡಾ ೦.೧೩ ರಿಂದ ೦.೫ ವರೆಗೂ ಇರಬಹುದು.

ರೋಗಿಯ ರಕ್ತದಲ್ಲಿ ನಂಜಿನ ಸ್ವರೂಪವು (Window Period) ತೋರುವುದಕ್ಕೆ ಮೊದಲೇ ರೋಗಿಯು ರೋಗ ಪ್ರಸಾರಕ್ಕೆ ಹೆಚ್ಚು ಪಾತ್ರನಾಗುತ್ತಾನೆ. ಈ ಹಂತದಲ್ಲಿ ರಕ್ತದಲ್ಲಿ ರೋಗನಿರೋಧಕ ಘಟಕಗಳು (Anti Bodies) ಇಲ್ಲದಿರುವುದರಿಂದ ರೋಗವನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ. ಈ ರಕ್ತವನ್ನು ಪರೀಕ್ಷಿಸಿ ರಕ್ತದಾನಿಯು ನಂಜಿಲ್ಲದವನೆಂದು ಪರಿಗಣಿಸಿ ರಕ್ತದಾನವನ್ನು ಪಡೆದ ಇತರರು ನಂಜಿಗೆ ಒಳಗಾಗುವ ಸಾಧ್ಯತೆ ಉಂಟು ಮತ್ತು ಈ ರಕ್ತದ ಸಂಪರ್ಕವನ್ನು ಹೊಂದಿದವರು ನಂಜನ್ನು ಪಡೆಯಬಹುದು.

ವೈದ್ಯವೃತ್ತಿಯವರಲ್ಲಿ ಶಸ್ತ್ರ ಚಿಕಿತ್ಸಕರು (Surgeous) ಪ್ರಸವಶಸ್ತ್ರ ತಜ್ಞರು (Obstetricians & Gynaecalogists) ರೋಗನಿರ್ಧಾರ ವಿಭಾಗದಲ್ಲಿ ಕೆಲಸ ನಿರ್ವಹಿಸುವವರು (Official of Pattalagy Dept.) ಹೆಚ್ಚಾಗಿ ಈ ತರಹದ ರೋಗಪ್ರಸಾರಕ್ಕೆ ತುತ್ತಾಗುತ್ತಾರೆ. ಈ ಸಿಬ್ಬಂದಿಯವರು ಕಾರ್ಯನಿರ್ವಹಿಸುವ ಊರುಗಳಲ್ಲಿ ರೋಗಿಗಳ ಸಂಖ್ಯೆ ಹೆಚ್ಚಾಗಿದ್ದರೆ ಈ ರೋಗದ ವಿರುದ್ಧ ಇವರ ರಕ್ಷಣೆ ಅತೀ ಮುಖ್ಯ. ಈ ರೀತಿಯ ರೋಗಪ್ರಸಾರದ ಪ್ರಮಾಣ ಅತೀ ಕಡಿಮೆ ಇದ್ದರೂ ಇವರು ರೋಗಿಗಳಿಂದ ರೋಗಪೀಡಿತರಾಗಬಹುದು ಮತ್ತು ಅದು ವೈದ್ಯರ ಗಮನವನ್ನು ಸೆಳೆಯದಿರಬಹುದು.

ವೈದ್ಯಕೀಯ ಸಿಬ್ಬಂದಿಗೆ ರೋಗ ತಗಲುವ ಸಂಭವ ಇಲ್ಲವೇ ಇಲ್ಲವೆಂದು ಖಚಿತವಾಗಿ ಹೇಳುವುದು ಅಸಾಧ್ಯ. ಆದರೆ ''ಹೆಪಟೈಟಿಸ್ ಬಿ'' ರೋಗಕ್ಕೆ ಹೋಲಿಸಿದರೆ ಇದರ ಸಂಭವ ತೀರ ಕಡಿಮೆ. ಸಾವಿರಾರು ಜನ HIV ನಂಜಿಗೆ ಈಡಾಗುತ್ತಿದ್ದರೂ ೩೮ ಜನ ಮಾತ್ರ ಇದುವರೆಗೆ ಪ್ರಪಂಚದಲ್ಲಿ ವೈದ್ಯವೃತ್ತಿಯ ಸಮಯದಲ್ಲಿ ರೋಗ ಪಡೆದರೆಂದು ೧೯೯೩ ರಲ್ಲಿ ವರದಿ ಮಾಡಲಾಗಿದೆ ಮತ್ತು ೬೯ ಜನರಲ್ಲಿ ರೋಗದ ಸಂಶಯವಿದೆ. ಮೇಲಣ ೩೮ ಜನರಲ್ಲಿ ೨೪ ಮಂದಿ ಸಂಶಯಾತ್ಮಕ ಮತ್ತು ೬೯ ರಲ್ಲಿ ೨೭ ಮಂದಿ ವೃತ್ತಿಸಂಬಂಧದಿಂದ ಪಡೆದಿರಬಹುದೆಂಬ ಶಂಕೆ ಇದೆ. ಇದು ಹೆಚ್ಚಾಗಿ ಶುಶ್ರೂಷಕರಲ್ಲಿ (Nurses) ಮತ್ತು ಪ್ರಯೋಗಶಾಲಾ ತಂತ್ರಜ್ಞರಲ್ಲಿ ಕಂಡು ಬಂದಿದೆ.



ಅದೃಷ್ಟ ಹೀನ!

ಜಗಳಾಡುವ ಒಂದು ಜೋಡಿಗೆ ಮಾನಸತಜ್ಞರು ತಿಳಿ ಹೇಳುತ್ತಾ ಗಂಡನಿಗೆ ಹೇಳಿದರು ''ನಿಮಗೆ ಗೊತ್ತಾ, ಮದುವೆಯೆನ್ನುವುದೊಂದು ಲಾಟರಿಯೆಂದು?'' ಎಂದರು.

''ನನಗ್ಗೊತ್ತಿಲ್ಲ''

''ಯಾಕೆ ಗೊತ್ತಿಲ್ಲ!''

''ಅದರಲ್ಲಿ ಮತ್ತೆ ಅದೃಷ್ಟ ಪರೀಕ್ಷಿಸಿಕೊಳ್ಳುವ ಸೌಲಭ್ಯವಾದರೂ ಇರುತ್ತದೆ'' ಎಂದ ಆ ಬಡಪಾಯಿ ಗಂಡ.

+ ರೂತಿ

## ದಂತ ವೈದ್ಯರು ಮತ್ತು ಏಯ್ಡ್ಸ್ ಸೋಂಕು

೧೯೭೦ ರಿಂದ ೧೯೮೭ ರವರೆಗೆ ಹೆಪಟೈಟಿಸ್ - ಬಿ *(HEPATITIS 'B')* ವೈರಸ್‌ನ ನಂಜಿಗೊಳಗಾಗಿದ್ದ ದಂತ ಚಿಕಿತ್ಸಾ ಸಿಬ್ಬಂದಿಯಿಂದ ಚಿಕಿತ್ಸೆ ಪಡೆದ ೯ ಗುಂಪಿನವರಲ್ಲಿ ಹೆಪಟೈಟಿಸ್ ಬಿ ತಲೆದೋರಿತು. ಇದರೊಡನೆ ೬ ಜನರು *HIV* ಗೆ ತುತ್ತಾದರು. ೧೯೮೭ ರ ಮೊದಲು ದಂತ ಚಿಕಿತ್ಸಕರಿಂದ ರೋಗಿಗಳಿಗೆ ರೋಗ ಹರಡಿದ ಯಾವ ದಾಖಲೆಯೂ ಇರಲಿಲ್ಲ. ಇದುವರೆವಿಗೂ ಯಾವ ದಂತ ವೈದ್ಯರೂ ತಮ್ಮ ವೃತ್ತಿಯಿಂದ ರೋಗಪೀಡಿತರಾದ ದಾಖಲೆ ಇಲ್ಲ. ಆದರೂ ದಂತ ಚಿಕಿತ್ಸಕರಿಗೆ ಚಿಕಿತ್ಸಾ ಸಮಯದಲ್ಲಿ ರೋಗಹೊಂದುವ ಆಸ್ಪದವಿದೆ. ರೋಗಿಯರಕ್ತ, ರಕ್ತಪೂರಿತ ಜೊಲ್ಲು, ಲೋಳೆಪರೆಯ ಸಂಪರ್ಕದಿಂದ ಅಮೇರಿಕಾದಲ್ಲಿ ನಡೆದ ಒಂದು ಅಧ್ಯಯನದಲ್ಲಿ ಪ್ರತಿ ದಂತ ಚಿಕಿತ್ಸಕನಿಗೆ ಪ್ರತಿವರ್ಷ ಸರಾಸರಿ ಮೂರು ಚುಚ್ಚುಗಾಯಗಳಾಗುವುದೆಂದು ತಿಳಿದು ಬಂದಿದೆ. *HIV* ಸೋಂಕು ಹೊಂದುವ ಸಂಭವ ಚುಚ್ಚುಗಾಯದ ಆಳ ಮತ್ತು ಉಪಯೋಗಿಸಿದ ಸಲಕರಣೆಗಳಲ್ಲಿ ರೋಗಿಯ ರಕ್ತ ಕಾಣುತ್ತಿತ್ತೋ ಇಲ್ಲವೋ ಎಂಬುದನ್ನು ಅವಲಂಬಿಸುತ್ತದೆ.

ಏಕೆಂದರೆ ಈ ವರ್ಗದ ಕೆಲಸಗಾರರು ಕೊಳವೆ ಹೊಂದಿದ ಸೂಜಿಯನ್ನು ಉಪಯೋಗಿಸಿ ರಕ್ತವನ್ನು ಪರೀಕ್ಷೆಗಾಗಿ ಶೇಖರಿಸುವುದರಿಂದ ಹೆಚ್ಚು ಸಾಧ್ಯತೆ ಇದೆ.

ಪಾಶ್ಚಾತ್ಯ ದೇಶದ ಇತ್ತೀಚಿನ ವರದಿಗಳ ಪ್ರಕಾರ HIV ನಂಜಗೊಳಗಾಗಿದ್ದ ೫೭ ವೈದ್ಯ ಸಿಬ್ಬಂದಿಯವರಿಂದ ಚಿಕಿತ್ಸೆ ಪಡೆದ ೧೯೦೩೬ ಜನರಲ್ಲಿ ಯಾರೊಬ್ಬರೂ ಈ ನಂಜಿಗೆ ತುತ್ತಾಗಿಲ್ಲ.

೧೯೯೦ ರ ಜುಲೈ ೨೯ ರಂದು HIV ನಂಜಿನ ವೈದ್ಯ ಮತ್ತು ದಂತ ಸಿಬ್ಬಂದಿಯಿಂದ ಚಿಕಿತ್ಸೆ ಪಡೆದ ರೋಗಿಗಳು ಇದಕ್ಕೆ ತುತ್ತಾಗುವ ಸಂಶಯವನ್ನು ವರದಿ ಮಾಡಿದರು.

ಫ್ಲೋರಿಡಾದಲ್ಲಿ ದಂತವೈದ್ಯರೊಬ್ಬರು ತಮ್ಮ ೫ ಜನ ರೋಗಿಗಳಿಗೆ HIV ನಂಜನ್ನು ಹರಡಿರುವ ಸುದ್ದಿಯನ್ನು ಪ್ರಕಟಿಸಲಾಗಿದೆ. ಆದರೆ ಇದುವರೆಗೂ ಯಾವ ದಂತ ವೈದ್ಯ ವೃತ್ತಿಯವರೂ ವೃತ್ತಿ ಮೂಲದಿಂದ ಈ ನಂಜು ಪಡೆದಿಲ್ಲವೆಂಬ ಅಂಶ ಗಮನಿಸಬೇಕಾದುದು.

HIV ಮತ್ತು AIDS ಬಗ್ಗೆ ಸಾರ್ವಜನಿಕರಿಗೆ ಸಾರ್ವತ್ರಿಕ ಶಿಕ್ಷಣ ಮಾಧ್ಯಮಗಳ ಮೂಲಕ ಈ ರೋಗದ ಸಾವು - ನೋವು, ದುಃಖ ದುಮ್ಮಾನಗಳ ಬಗ್ಗೆ ಮಾಹಿತಿ ದೊರೆಯುತ್ತಿರುವುದರಿಂದ ಈ ವೃತ್ತಿಯಲ್ಲಿರುವವರು ತಮ್ಮ ವೃತ್ತಿಯಿಂದ ಮತ್ತು ರೋಗಿಗಳಿಂದ ತಾವು ರೋಗಪೀಡಿತರಾಗುವ ಸಾಧ್ಯತೆ ಎಷ್ಟಿದೆಯೆಂಬುದನ್ನು ಪ್ರಶ್ನಿಸುವಂತಾಗಿದೆ. ಆದುದರಿಂದ ವೈದ್ಯರು ಈ ರೋಗಿಗಳ ಪರೀಕ್ಷೆಗೆ ಮತ್ತು ಚಿಕಿತ್ಸೆಗೆ ಹಿಂದು ಮುಂದು ನೋಡುವ ಪರಿಸ್ಥಿತಿ ಉಂಟಾಗುತ್ತಿದೆ. ಸೋಂಕಿಗೊಳಗಾದ ವೈದ್ಯರು ಅದರಲ್ಲೂ ಚುಚ್ಚು ಚಿಕಿತ್ಸೆ ನೀಡುವವರು ಈ ವೃತ್ತಿಯನ್ನು ಮುಂದುವರಿಸಬೇಕೇ! ಬೇಡವೇ! ಅಥವಾ ವೃತ್ತಿ ಬದಲಾವಣೆ ಅವಶ್ಯಕವೇ ? ಎಂದು ವಿಚಾರಿಸಬೇಕಾದ ಸ್ಥಿತಿ ಉದ್ಭವಿಸಿದೆ. ಅವರನ್ನು ವೃತ್ತಿಯಿಂದ ಹೊರಗಿಡಬೇಕೆಂಬ ಅಭಿಪ್ರಾಯಗಳೂ ಇಲ್ಲದಿಲ್ಲ. ವೈದ್ಯರು ತಮ್ಮ ಜೀವದ ಬೆಲೆಯನ್ನು ಪರಿಗಣಿಸದೇ ಇಂತಹ ರೋಗಿಗಳ ಚಿಕಿತ್ಸೆಗೆ ಅರ್ಪಣ ಮನೋಭಾವದಿಂದ ದುಡಿಯುತ್ತಿರುವುದು ಖಂಡಿತ ಹೊಗಳಬೇಕಾದ್ದೇ.

### ಸೋಂಕಿನಿಂದ ರಕ್ಷಣೆ

ಎಲ್ಲಾ ವೈದ್ಯಕೀಯ ಸಿಬ್ಬಂದಿ ಈ ರೋಗದ ಬಗ್ಗೆ ಸಂಪೂರ್ಣ ಮಾಹಿತಿ ಹೊಂದಿರಬೇಕು. ವೈದ್ಯರು, ಪ್ರಯೋಗಾಲಯ ಮತ್ತು ರಕ್ತ ಭಂಡಾರಗಳಲ್ಲಿ ಕೆಲಸ ಮಾಡುವವರು ತಮ್ಮ ಕೈ ರಕ್ತಸಿಕ್ತವಾಗಿದ್ದರೆ ಸೋಪು ಮತ್ತು ನೀರಿನಿಂದ ತಕ್ಷಣ ಕೈ ತೊಳೆಯಬೇಕು. ನಂತರ ನಂಜು ನಿರೋಧಕ (Antiseptic) ರಾಸಾಯನಿಕಗಳಿಂದ ಕೈ ತೊಳೆಯಬೇಕು. ರೋಗಿಗಳಿಗೆ ರಕ್ತ ಕೊಡುವಾಗ, ರಕ್ತ ದಾನಿಗಳಿಂದ AIDS ಪರೀಕ್ಷೆಗೆ ರಕ್ತಪಡೆಯುವಾಗ ಎಲ್ಲಾ ಮುನ್ನೆಚ್ಚರಿಕೆ ಕ್ರಮ ವಹಿಸಿ ರಕ್ತದ ಸಂಪರ್ಕವಾಗದಂತೆ ನೋಡಿಕೊಳ್ಳಬೇಕು. ಸಿರಿಂಜ್ ಮತ್ತು ಸೂಜಿಗಳನ್ನು ಚೆನ್ನಾಗಿ ಸಂಸ್ಕರಿಸಬೇಕು. ರೋಗಿಗೆ ಚಿಕಿತ್ಸೆ ನೀಡುವಾಗ ಗ್ಲೌಸ್‌ಗಳನ್ನು ತಪ್ಪದೇ ಉಪಯೋಗಿಸಬೇಕು. ಗ್ಲೌಸ್ ಲಭ್ಯವಿಲ್ಲದಿದ್ದರೆ ಇತರೇ ಕ್ರಮ ಅನುಸರಿಸಿ ಒಟ್ಟಿನಲ್ಲಿ ರಕ್ತಸಂಪರ್ಕವಾಗದಂತೆ ನಿಗಾ ವಹಿಸಬೇಕು. ಆಕಸ್ಮಿಕ ಚುಚ್ಚುಗಾಯಗಳಾಗುವಂತಹ ಸಂಭವವಿದ್ದಲ್ಲಿ ಅದರಲ್ಲೂ ಚೂಪಾದ ಶಸ್ತ್ರಗಳ ಬಳಕೆ ಮಾಡುವಾಗ ವಿಶೇಷ ರೀತಿಯ ಗ್ಲೌಸ್ (Extra Heavy Duty Glowes) ಗಳನ್ನು ಉಪಯೋಗಿಸಬೇಕು.

ಶಸ್ತ್ರಚಿಕಿತ್ಸೆ ಮಾಡುವಾಗ ಮತ್ತು ಹೆರಿಗೆ ಮಾಡಿಸುವಾಗ ರಕ್ತವು ಚಿಮ್ಮುವ (ಪುಟಿದು ಸಿಡಿಯುವ) ಸಂಭವವುಂಟು. ಆದುದರಿಂದ ಈ ಸಮಯದಲ್ಲಿ ಕಣ್ಣು, ಮೂಗು, ಮತ್ತು ಬಾಯಿ ಕಲುಷಿತವಾಗದಂತೆ ಮುಖಕ್ಕೆ ಶೀಲ್ಡ್ ಅಥವಾ ಮಾಸ್ಕ್ ಕಟ್ಟಿಕೊಳ್ಳಬೇಕು. ಕಣ್ಣಿಗೆ ವಿಶೇಷ ರೀತಿಯ ಕನ್ನಡಕ ಧರಿಸುವುದು ಉತ್ತಮ. ನೀರನ್ನು ಹೀರದ ಪ್ಲಾಸ್ಟಿಕ್ ಅಥವಾ ಪಾಲಿಥಿನ್ ಏಪ್ರಾನ್ ಅಥವಾ ನಿಲುವಂಗಿ ಧರಿಸಬೇಕು. ಅಲ್ಲದೇ ಸಂದರ್ಭೋಚಿತವಾದ ರಕ್ಷಣಾ ಕ್ರಮಗಳನ್ನು ಪಾಲಿಸಬೇಕು. ಹೆರಿಗೆಯ ನಂತರ ಮಗುವು ಉಸಿರಾಡದಿದ್ದರೆ ಜೀವ ತುಂಬುವ (Resucitation) ಉಪಕರಣ ಬಳಸಿ ನಂತರ ಅದನ್ನು ಬಿಸುಟಬೇಕು ಅಥವಾ ಉಪಯೋಗಿಸಿದ ತಕ್ಷಣ ನಂಜು

## HIV ಸೋಂಕು ಮತ್ತು AIDS ರೋಗಿಗಳ ಸಾಮಾಜಿಕ ಮತ್ತು ಮಾನಸಿಕ ಪರಿಸ್ಥಿತಿ

*ರೋಗಿಯು HIV ಸೋಂಕಿಗೊಳಗಾದ ನಂತರ ಹಲವು ತಿಂಗಳುಗಳು ಸಾವಿನ ಬಗ್ಗೆ ಭಯ, ಕೋಪ, ಅಪನಂಬಿಕೆ, ಅನುಮಾನ ಮತ್ತು ಕುತೂಹಲಗಳನ್ನು ಹೊಂದಿರುತ್ತಾನೆ. ಅನೇಕ ಸಲ ಚಿಕಿತ್ಸಕರ ಮೇಲೆ ಕೋಪ ತೋರುತ್ತಾನೆ. ವಿಶೇಷ ಸವಲತ್ತು ಕೋರಿ ಕಾನೂನು ಕ್ರಮ ಜರುಗಿಸುವ ಬೆದರಿಕೆಯನ್ನೂ ಅನೇಕ ವೇಳೆ ರೋಗಿಯು ಹಾಕಬಹುದು. ರೋಗಿಯ ಮನೆಯವರು ಸಹ ಮಾನಸಿಕ ಒತ್ತಡಕ್ಕೆ ಗುರಿಯಾಗಿ ರೋಗಿಗೆ ಚಿಕಿತ್ಸೆ ಮಾಡಿಸಲು ಪ್ರಧಾನ ಪಾತ್ರ ವಹಿಸಬಹುದು. ರೋಗದ ತೀವ್ರತೆ ಕಡಿಮೆಯಾದಾಗ ಮಾನಸಿಕ ಸಮತೋಲನ ಹೊಂದಿ, ಲಕ್ಷಣ ರಹಿತ ಹಂತವನ್ನು ತಲುಪಿ, ಆರೋಗ್ಯವಂತನಂತಿದ್ದು ತಾನು ರೋಗಿಯೇ ಅಲ್ಲ ಎಂಬ ತೀರ್ಮಾನಕ್ಕೆ ಬರುತ್ತಾನೆ ಇದರಿಂದ ಅನೇಕ ಸಲ ಮುಂದಿನ ಭೇಟಿಯಲ್ಲಿ ತಮ್ಮ ರೋಗ ಚರಿತ್ರೆಯಲ್ಲಿ ತಾವು ನರಳಿದ ಅನುಭವವನ್ನು ವೈದ್ಯರಿಗೆ ತಿಳಿಸದೇ ಇರಬಹುದು.*

*ರೋಗ ಲಕ್ಷಣ ತೋರಿದಾಗ ರೋಗಿಗೆ ತೀವ್ರತರದ ಸಾಮಾಜಿಕ ಒತ್ತಡ ಬರಬಹುದು. ರೋಗಲಕ್ಷಣಗಳ ಜ್ಞಾಪಕ ಶಕ್ತಿ ಮರುಕಳಿಸಿ ತನ್ನ ಅಭಿಪ್ರಾಯ ಬದಲಾಯಿಸಿಕೊಂಡು ಸೋಂಕಿನ ಭೀತಿಗೆ ಒಳಗಾಗುತ್ತಾನೆ. ನಂತರ ಖಿನ್ನತೆಯಿಂದ ಪ್ರಾಣಹತ್ಯೆಯ ನಿರ್ಧಾರ ಸಹ ಮಾಡಬಹುದು. ಮನೋವಿಕಾರ ಹೊಂದಬಹುದು. ಹಲವು ಸೌಲಭ್ಯಗಳಿಂದ ವಂಚಿತನಾಗಬಹುದು. ಜ್ಞಾಪಕಶಕ್ತಿ ಹಾಳಾಗಿ ಅತಿಸುಸ್ತಿನಿಂದೊಡಗೂಡಿ ಆಸ್ಪತ್ರೆ ಸೇರುವ ಹಂತ ತಲುಪುತ್ತಾನೆ. ಕಡೆಯ ಹಂತದಲ್ಲಿ ರೋಗಿಯು ಸಾವಿಗೊಳಗಾಗುತ್ತಾನೆ. ಈ ಸಮಯದಲ್ಲಿ ದಂತವೈದ್ಯ ಸಿಬ್ಬಂದಿಯು ಮಾನವೀಯ ದೃಷ್ಟಿಯಿಂದ ಕುತೂಹಲ ಮತ್ತು ಕೋಪತಾಪಗಳ ಶಮನಕ್ಕೆ ಶ್ರಮಿಸಬೇಕಾಗುತ್ತದೆ.*

# ದಂತ ವೈದ್ಯರ ಮಾನಸಿಕ ಪರಿಸ್ಥಿತಿ

ಇವರು ರೋಗಿಯ ರಕ್ತ ಮತ್ತು ಜೊಲ್ಲಿನ ನೇರಸಂಪರ್ಕ ಹೊಂದುವುದರಿಂದ ಇವರಿಗೆ ನಂಜಿನ ಸಾಧ್ಯತೆ ಹೆಚ್ಚು. ಇವರಿಗೆ ರೋಗ ಹರಡುವುದು ಅತೀ ವಿರಳವಾದರೂ ರೋಗದ ಬಗ್ಗೆ ಭಯ ಮತ್ತು ಚಿಂತೆ ಇದ್ದೇ ಇರುತ್ತದೆ. ಆದುದರಿಂದ ಅವರು ಮಾನಸಿಕ ಒತ್ತಡಕ್ಕೆ ಒಳಗಾಗಿ ಭಯ, ಸುಸ್ತು, ಔಷಧವ್ಯಸನ ಮತ್ತು ಮಧ್ಯಪಾನಕ್ಕೆ ಶರಣಾಗುತ್ತಾರೆ. ಈ ಹಂತದಲ್ಲಿ ಸಿಬ್ಬಂದಿಯ ಮನೆಯವರು ವ್ಯತ್ಯಾಸವನ್ನು ಬೇಗ ಕಾಣುತ್ತಾರೆ.

ಸಿಬ್ಬಂದಿವರ್ಗದವರು ಸೋಂಕು ಹರಡುವ ಬಗೆ ಆರೋಗ್ಯಶಿಕ್ಷಣ ಕೊಡುವ ಬಗ್ಗೆ ಮತ್ತು ಅದರ ನಿಯಂತ್ರಣವನ್ನು ಅರಿತಿರಬೇಕು. ಪ್ರಾಕೃತಿಕ ಲೈಂಗಿಕ ವಿಧಾನಗಳ ಬಗ್ಗೆ ಮನಬಿಚ್ಚಿ ರೋಗಿಗಳೊಡನೆ ಮಾತನಾಡುವಂತಿರಬೇಕು. ಮುಂಬರುವ ವರ್ಷಗಳಲ್ಲಿ ರೋಗ ಚಿಕಿತ್ಸೆಯನ್ನು ತಪ್ಪಿಸಿಕೊಳ್ಳುವುದು ಬಹಳ ಕಷ್ಟ. ಬಹಳಷ್ಟು ಸೋಂಕಿಗೊಳಗಾದವರು ಲಕ್ಷಣ ರಹಿತರಾಗಿರುವುದರಿಂದ ಸುಲಭವಾಗಿ ಗುರುತಿಸಲೂ ಆಗುವುದಿಲ್ಲ. ಆದರೂ ಈ ರೋಗಿಗಳ ಚಿಕಿತ್ಸೆ ದಂತವೈದ್ಯರ ಕರ್ತವ್ಯ.

''ನಡೆಯುವವನು ಎಡವದೇ ಕುಳಿತಿರುವವನು ಎಡವುತ್ತಾನೆಯೇ?'' ''ಕೈ ಕೆಸರಾದರೆ ಬಾಯಿ ಮೊಸರು'' ಎಲ್ಲಾ ಉದ್ಯಮಗಳಲ್ಲೂ ಒಂದಲ್ಲ ಒಂದು ಗೊಂದಲ ಇದ್ದೇ ಇರುತ್ತದೆ. ಅದನ್ನು ಅರಿತು, ನುರಿತು ಅದರಿಂದ ತಪ್ಪಿಸಿಕೊಂಡು ಮುಕ್ತಿ ಪಡೆದಾಗ ಮಾತ್ರ ಮಾನವ ದೇವರಾಗುತ್ತಾನೆ.

ಸೇವೆಗಳಲ್ಲೆಲ್ಲ ಉತ್ತಮವಾದುದು ರೋಗಿಗಳ ಸೇವೆ. ಇಂತಹ ಸೇವಾಮನೋಭಾವದ ವೈದ್ಯ ವೃತ್ತಿ ಶ್ರೇಷ್ಠ ವೃತ್ತಿ. ಅದರ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳುವುದು ವೈದ್ಯರ ಕರ್ತವ್ಯ.

ನಿವಾರಕಗಳಿಂದ ಶುದ್ಧಿಗೊಳಿಸಬೇಕು.

ಪ್ರಯೋಗಶಾಲೆ ಸಿಬ್ಬಂದಿಗಳು ರೋಗಿಯರಕ್ತ ಮತ್ತು ದೈಹಿಕ ದ್ರವವನ್ನು ಮುಟ್ಟುವಾಗ ಗ್ಲೌಸ್ ಉಪಯೋಗಿಸಬೇಕು. ಬಾಯಿಯಿಂದ ಎಳೆಯುವ ಪಿಪೆಟ್ ಉಪಯೋಗಿಸಬಾರದು. ಟೇಬಲ್ ಅಥವಾ ನೆಲದ ಮೇಲೆ ರೋಗಿಯ ರಕ್ತ ಅಥವಾ ದೈಹಿಕ ದ್ರವ ಸಿಡಿದರೆ ತಕ್ಷಣ ಶೇಕಡಾ ೦.೫ ರ ಸೋಡಿಯಂ ಹೈಪೋ ಕ್ಲೋರೈಟ್‌ನಿಂದ ಶುದ್ಧಿಗೊಳಿಸಿ ನಂತರ ಒರೆಸಬೇಕು.

ಸಿಬ್ಬಂದಿಯ ಎಲ್ಲಾ ತರಹದ ಗಾಯಗಳನ್ನು ದ್ರವಹೀರದ ವಸ್ತುಗಳಿಂದ ಪಟ್ಟಿಕಟ್ಟಬೇಕು ಮತ್ತು ಆದಷ್ಟು ರೋಗಿಯ ದ್ರವ ಮತ್ತು ರಕ್ತದಿಂದ ದೂರವಿರಬೇಕು. ಅನಾವಶ್ಯಕವಾಗಿ ರೋಗಿಗೆ ಇಂಜಕ್ಷನ್ ಕೊಡಬಾರದು. ಇದರಿಂದ ರೋಗಿ ಮತ್ತು ವೈದ್ಯರಿಬ್ಬರಿಗೂ ಕ್ಷೇಮ ಮತ್ತು ಸುರಕ್ಷತೆ. ಮತ್ತೆ ಮತ್ತೆ ಉಪಯೋಗಿಸುವ ಪರಿಕರಗಳನ್ನು ಸೋಂಕು ನಾಶಕಗಳಿಂದ ಶುದ್ಧಗೊಳಿಸಿ ವೈಜ್ಞಾನಿಕ ವಿಧಿಗಳಿಂದ ರೋಗ ಪ್ರಸಾರದಿಂದ ಮುಕ್ತ ಮಾಡಬೇಕು. ಸೂಜಿ ಮತ್ತು ಹರಿತ ಆಯುಧಗಳನ್ನು ಸುರಕ್ಷಿತವಾಗಿಡಬೇಕು.

ವೈದ್ಯರ ಅಥವಾ ಸಿಬ್ಬಂದಿಯ ದೇಹದ ಯಾವುದೇ ಭಾಗವು ರೋಗಿಯ ರಕ್ತ ಮತ್ತು ದೈಹಿಕ ದ್ರವದಿಂದ ಸ್ಪರ್ಶಹೊಂದಿದ್ದರೆ ಆ ಭಾಗವನ್ನು ಚೆನ್ನಾಗಿ ತೊಳೆಯಬೇಕು. ದೇಹದ ಯಾವುದೇ ಭಾಗ ಕೊಯ್ದು ರಕ್ತಸ್ರಾವವಾದರೆ ಸ್ವಲ್ಪ ಹೆಚ್ಚು ರಕ್ತಸ್ರಾವವಾಗುವಂತೆ ಸ್ವಲ್ಪ ಕಾಲ ಬಿಡಬೇಕು. ಕಣ್ಣುಗಳು ಕಲುಷಿತವಾದರೆ ನಲ್ಲಿ ನೀರಿನಿಂದ ಅಥವಾ ಸಲೈನ್‌ನಿಂದ ತೊಳೆಯಬೇಕು. ಯೋನಿ ಮತ್ತು ಗುದನಾಳ ಪರೀಕ್ಷೆ ಅಪಾಯಕರ. ಅಲ್ಲಿ HIV ವೈರಸ್ಸುಗಳು ಇರಬಹುದು. HIV ಸೋಂಕಿಗೆ ಯಾವ ಲಸಿಕೆಯೂ ಇಲ್ಲ. ಇದಕ್ಕೆ ನಿಯಂತ್ರಣ ಒಂದೇ ದಾರಿ.




''ಸೊಳ್ಳೆಗಳ ಕಡಿತದಿಂದಾಗಿ ನನ್ನ ಮಕ್ಕಳಿಗೆ ಬಹಳ ತೊಂದರೆಯಾಗುತ್ತಿದೆ. ಯಾವುದಾದರೂ ಔಷಧಿ ಕೊಡಿ.'' ಎಂದಳು ಮಹಿಳೆ.
ಮೆಡಿಕಲ್ ಸ್ಟೋರಿನವ ಒಂದು ತೈಲದ ಬಾಟಲಿಯನ್ನು ಆಕೆಯ ಕೈಗಿತ್ತು ದುಡ್ಡು ಪಡೆದ. ಆಕೆ ಹೋಗುತ್ತ ಕೇಳಿದಳು.
'' ಈ ಎಣ್ಣೆಯನ್ನು ಮಕ್ಕಳಿಗೆ ಹಚ್ಚಬೇ ಕೋ..ಸೊಳ್ಳೆಗಳಿಗೋ?''
+ ರೂತಿ

HIV ಸೋಂಕಿನವರ ಗೌಪ್ಯತೆ ಕಾಪಾಡುವುದು ಮುಖ್ಯ. ಆದರೆ ಇತರ ವೈದ್ಯಸಿಬ್ಬಂದಿಯೊಡನೆ ಚರ್ಚಿಸಿದರೆ ಅಡ್ಡಿ ಇಲ್ಲ. ಈ ಸೋಂಕಿನ ಮತ್ತೊಬ್ಬ ಲೈಂಗಿಕ ಸಂಗಾತಿಯನ್ನು ಹುಡುಕಿ ಸೂಕ್ತಕ್ರಮ ಕೈಗೊಳ್ಳುವುದು ಒಳ್ಳೆಯದು.

ವೈದ್ಯರು ಏಯ್ಡ್ಸ್ ಸೋಂಕಿಗೆ ಒಳಗಾದವರನ್ನು ಚಿಕಿತ್ಸೆಗೆ ನಿರಾಕರಿಸಬಹುದೇ? ಎಂಬುದನ್ನು ನ್ಯಾಯಾಲಯ ಇನ್ನೂ ತೀರ್ಮಾನ ಮಾಡಿಲ್ಲ. ಇತರ ರೋಗಿಗಳಿಗೆ ಚಿಕಿತ್ಸೆ ನೀಡುವಂತೆ ಏಯ್ಡ್ಸ್ ರೋಗಿಗಳಿಗೂ ಚಿಕಿತ್ಸೆ ನೀಡುವುದು ವೈದ್ಯಕೀಯ ರೀತಿ ನೀತಿಗಳಿಗೆ ಬದ್ಧವಿದ್ದಂತೆ ಎನ್ನುವವರೇ ಇದ್ದಾರೆ. ಆದರೆ ಕೆಲವರು ಅವರ ಪರೀಕ್ಷೆ ಮತ್ತು ಚಿಕಿತ್ಸೆ ಮಾಡುವ ನಿಯಮವಿಲ್ಲ ಎನ್ನುತ್ತಾರೆ.

ಅಮೆರಿಕಾ ವೈದ್ಯ ಪರಿಷತ್ತು ವೈದ್ಯರು ಈ ರೋಗಿಗಳ ಚಿಕಿತ್ಸೆ ನಿರಾಕರಿಸಬಾರದು. ಈ ರೋಗಿಗಳೂ ಚಿಕಿತ್ಸೆಯ ಅರ್ಹತೆ ಪಡೆದಿದ್ದಾರೆ. ಅವರಿಗೂ ಚಿಕಿತ್ಸೆ ನೀಡಬೇಕು ಎನ್ನುತ್ತದೆ. ಇಲ್ಲಿ ಮನುಷ್ಯ ಕೇವಲ HIV ಸೋಂಕಿಗೆ ಒಳಗಾಗಿದ್ದಾನೆಯೇ ಹೊರತು AIDS ರೋಗಕ್ಕಲ್ಲ ಎಂಬುದು ಆ ಪರಿಷತ್ತಿನ ವಾದ. ಈ ಅಭಿಪ್ರಾಯವನ್ನು ಅನೇಕರು ಅನುಮೋದಿಸಿದ್ದಾರೆ. ಮಾನವೀಯತೆಯ ದೃಷ್ಟಿ ಮತ್ತು ವೈದ್ಯಕೀಯ ನೀತಿ, ಧರ್ಮ, ಮತ್ತು ವೈದ್ಯ ಪದವಿಗೆ ಮುಂಚೆ ಸ್ವೀಕರಿಸಿದ ಪ್ರಮಾಣ ವಚನದ ಪ್ರಕಾರ ಯಾವ ರೋಗಿಯನ್ನೂ ನಿರಾಕರಿಸುವಂತಿಲ್ಲ.

''ಅಂಜಿಕೆ ಬೇಡ, ಗ್ಲೋವ್ಸ್ ಧರಿಸಿ ಮತ್ತೆ ಕೈ ತೊಳೆಯಿರಿ. ಆಗ ಸೋಂಕಿನಿಂದ ದೂರವಾಗುವಿರಿ''



**ವೈದ್ಯರು ಮತ್ತು ವಕೀಲರೆದುರು ಸುಳ್ಳು ಹೇಳಬಾರದು ಮತ್ತು ಸತ್ಯವನ್ನು ಮುಚ್ಚಿಡಬಾರದು ಎಂದು ಹೇಳುತ್ತಾರೆ. ಅದು ಅಕ್ಷರಶಃ ಸತ್ಯ. ನಮ್ಮಲ್ಲಿ ಉಂಟಾಗುವ ವೈದ್ಯಕೀಯ ಸಮಸ್ಯೆಗಳನ್ನು ಮರೆಮಾಚುವುದರಿಂದ, ಅನನುಭವಿಗಳ ಸಲಹೆ ಪಾಲಿಸುವುದರಿಂದ ದೊಡ್ಡ ಅನಾಹುತಗಳೇ ಸಂಭವಿಸಬಹುದು. ಚಿಕ್ಕದೆಂದು ಅಲಕ್ಷಿಸಿದ ಸಂಗತಿ ನಮ್ಮ ಪ್ರಾಣಕ್ಕೇ ಕುತ್ತು ತರಬಲ್ಲದು.**

ಹ್ಯಾರಿ ನಿಯಮಿತವಾಗಿ ವೈದ್ಯರ ಬಳಿಗೆ ಹೋಗಿ ತನ್ನ ಆರೋಗ್ಯವನ್ನು ಪರೀಕ್ಷಿಸಿಕೊಳ್ಳುತ್ತಿದ್ದನು. ಹಾಗೆಯೇ ಅಂದೂ ಸಹ ವೈದ್ಯರ ಬಳಿಗೆ ಹೋದನು. ಅವನ ಕುಟುಂಬ ವೈದ್ಯರು ಹ್ಯಾರಿಯನ್ನು ಪರೀಕ್ಷಿಸಿದರು. ನಂತರ ''ಹ್ಯಾರಿ..... ನಿನ್ನ ರಕ್ತದೊತ್ತಡ, ಸ್ವಲ್ಪ ಹೆಚ್ಚಿದೆ. ಆದರೆ ಚಿಂತಿಸಬೇಕಾದ ಅಗತ್ಯವಿಲ್ಲ. ನಾನೊಂದು ಗುಳಿಗೆ ಬರೆದುಕೊಡುತ್ತೇನೆ. ಅದನ್ನು ತೆಗೆದುಕೋ. ಸರಿಹೋಗುತ್ತದೆ'' ಎಂದು ಸಮಾಧಾನ ಹೇಳಿ ಒಂದು ಮೂತ್ರ ಪ್ರಚೋದಕ

# ಬಟಾಣಿ ಕಾಳು

(ಡೈಯೂರೆಟಿಕ್) ಗುಳಿಗೆಯನ್ನು ಬರೆದುಕೊಟ್ಟರು.

ಮೂತ್ರ ಪ್ರಚೋದಕ ಔಷಧಗಳು ನೇರವಾಗಿ ಮೂತ್ರಪಿಂಡಗಳ ಮೇಲೆ ಪ್ರಭಾವ ಬೀರುತ್ತದೆ. ಅಧಿಕ ಮೂತ್ರ ವಿಸರ್ಜನೆಗೆ ಕಾರಣವಾಗುತ್ತದೆ. ಆರಂಭದಲ್ಲಿ ವೈದ್ಯರು, ರಕ್ತದಲ್ಲಿರುವ ಅಧಿಕ ನೀರಿನಂಶ ಮೂತ್ರದ ಮೂಲಕ ವಿಸರ್ಜಿತವಾಗುವ ಕಾರಣ, ರಕ್ತದ ಗಾತ್ರ (ವಾಲ್ಯೂಮ್) ಕಡಿಮೆಯಾಗುತ್ತದೆ. ಆ ಕಾರಣದಿಂದ ಏರಿರುವ ರಕ್ತದೊತ್ತಡ ಇಳಿಯುತ್ತದೆ ಎಂದು ಭಾವಿಸಿದ್ದರು. ಆದರೆ ಇದು ಸರಿಯಾದ ವಿವರಣೆಯಾಗಿರಲಿಲ್ಲ. ರಕ್ತದ ಗಾತ್ರ ಅಲ್ಪ ಕಾಲದಲ್ಲಿಯೇ ತನ್ನ ಪ್ರಮಾಣವನ್ನು ಮರಳಿ ಹೊಂದುತ್ತಿದ್ದುದ್ದನ್ನು ತೋರಿಸಿದರು. ಈಗ ಡೈಯೂರೆಟಿಕ್‌ಗಳು ಹೇಗೆ ಕೆಲಸ ಮಾಡುತ್ತವೆ ಎಂಬುದು ನಮಗೆ ತಿಳಿದು ಬಂದಿದೆ. ಈ ಔಷಧಗಳು ಧಮನಿಗಳಲ್ಲಿರುವ ನಯಸ್ನಾಯುಗಳನ್ನು ಸಡಿಲಗೊಳಿಸುತ್ತವೆ. ಆಗ ಧಮನಿಯ ವ್ಯಾಸವೂ ವಿಸ್ತಾರವಾಗುತ್ತದೆ. ಅದರ ಫಲವಾಗಿ ಏರಿರುವ ರಕ್ತದೊತ್ತಡ ಇಳಿಯುತ್ತದೆ.

ಹ್ಯಾರಿ ಡೈಯೂರೆಟಿಕ್ ಔಷಧವನ್ನು ಸೇವಿಸಲಾರಂಭಿಸಿದನು. ಏರಿದ್ದ ರಕ್ತದೊತ್ತಡ ಇಳಿದು ಸಹಜಮಟ್ಟವನ್ನು ತಲುಪಿತು. ಆದರೆ ಅವನಿಗೆ ಒಂದು ಸಮಸ್ಯೆ ಕಾಡಲಾರಂಭಿಸಿತು. ಡೈಯೂರೆಟಿಕ್ ಗುಳಿಗೆಗಳು ಮೂಲತಃ ಅಧಿಕ ನೀರಿನಂಶವನ್ನು ಮೂತ್ರದ ರೂಪದಲ್ಲಿ ವಿಸರ್ಜಿಸುತ್ತದೆಯಲ್ಲವೆ! ಹ್ಯಾರಿ ಪದೇ ಪದೇ ಮೂತ್ರ ವಿಸರ್ಜಿಸಬೇಕಾಗುತ್ತಿತ್ತು. ರಾತ್ರಿಯಲ್ಲಿ



ಅನೇಕ ಸಲ ಏಳಬೇಕಾಗುತ್ತಿತ್ತು. ಕೆಲವು ಸಲ ಅವನಿಗೆ ಅರಿವಿಲ್ಲದಂತೆಯೇ ಮೂತ್ರ ಸೋರುತ್ತಿತ್ತು. ಹ್ಯಾರಿಗೆ ತೀರಾ ಮುಜುಗರವಾಗುತ್ತಿತ್ತು. ಅಧಿಕ ಮೂತ್ರದ ಬಗ್ಗೆ ಹ್ಯಾರಿಯು ತನ್ನ ಕುಟುಂಬ ವೈದ್ಯರ ಬಳಿ ಪ್ರಸ್ತಾಪಿಸಿದನು. ಆದರೆ ವೈದ್ಯರು ''ಅಧಿಕ ಮೂತ್ರ ಸಹಜ ಕಣಯ್ಯ...... ಅಲ್ಪಸ್ವಲ್ಪ ತೊಂದರೆಗಳನ್ನು ಸಹಿಸಿಕೊಳ್ಳಬೇಕು. ಅಧಿಕ ರಕ್ತದೊತ್ತಡ ನಿಯಂತ್ರಣಕ್ಕೆ ಬರುವುದು ಮುಖ್ಯ. ಹೋಗು...... ಔಷಧವನ್ನು ಮುಂದುವರಿಸು'' ಎಂದು ಹೇಳಿ ಹ್ಯಾರಿಯನ್ನು ಕಳಿಸಿಬಿಟ್ಟರು.

ಹ್ಯಾರಿ ಹ್ಯಾಪು ಮೋರೆಯೊಡನೆ ಹಿಂದಿರುಗಿದನು. ಮೂತ್ರ ಸೋರುವಿಕೆ ನಿಜಕ್ಕೂ ಅವನಿಗೆ ಒಂದು ದೊಡ್ಡ ಸಮಸ್ಯೆಯಾಗಿಬಿಟ್ಟಿತ್ತು. ಸೋತ ಹ್ಯಾರಿಯ ಮುಖವನ್ನು ಕಂಡ, ಗೆಳೆಯನೊಬ್ಬನು ''ಏನಯ್ಯ ಚಿಂತೆ..... ಹೀಗಿದ್ದೀಯ?'' ಎಂದು ಪ್ರಶ್ನಿಸಿದನು. ಹ್ಯಾರಿ

ಗೆಳೆಯನ ಬಳಿ ತನ್ನ ಸಮಸ್ಯೆಯನ್ನು ಮುಚ್ಚೂ ಮರೆಯಿಲ್ಲದೆ ಹೇಳಿದನು. ಹ್ಯಾರಿಯ ಗೋಳನ್ನು ಕೇಳಿದ ಗೆಳೆಯನು ''ಇದಕ್ಕೆ ಯಾಕಯ್ಯ ಯೋಚಿಸ್ತಿದ್ದೀಯ? ಒಂದು ಬಿರಟೆ ಹಾಕಿದರೆ ಸಾಕಾಗುತ್ತೆ.... ಅಲ್ಲವೆ?''ಎಂದನು. ಗೆಳೆಯನ ಸಲಹೆ ಕೇಳಿ ಇದೆಂತಹ ಹುಚ್ಚು ಪರಿಹಾರ? ಎಂದು ಕಕ್ಕಾಬಿಕ್ಕಿಯಾದನು.

''ಬಿರಟೆ ಅಂದ್ರೆ ನಿಜವಾದ ಬಿರಟೆ ಅಲ್ಲ ಕಣಯ್ಯ....... ಸೋರುವ ಮೂತ್ರವನ್ನು ತಡೆಯಬಹುದಾದಂತಹ, ಉರುಟುರುಟಾದ, ರಂಧ್ರದಲ್ಲಿ ಹೋಗಬಹುದಾದಂತಹ ಸ್ವಚ್ಛ ಸುರಕ್ಷಿತ ತಡೆ ಒಂದು ಸಿಕ್ಕರೆ ಸಾಕು ಅದನ್ನು ಉಪಯೋಗಿಸಬಹುದು'' ಎಂದನು. ಸ್ವಲ್ಪ ಹೊತ್ತು ಯೋಚಿಸಿ ಆ ಗೆಳೆಯನೇ ಸಲಹೆ ನೀಡಿನು. ''ನೀನು ಒಣ ಬಟಾಣಿ ಕಾಳನ್ನೇ ಉಪಯೋಗಿಸಬಹುದಲ್ಲ.....''

ಹ್ಯಾರಿ ಯೋಚಿಸಲಾರಂಭಿಸಿದನು.

''ಹೂಂ ಕಣಯ್ಯ. ಸರಿಯಾದ ಗಾತ್ರದ ಬಟಾಣಿಕಾಳು ತೆಗೆದುಕೊಂಡು ರಂಧ್ರದೊಳಗೆ ಹಾಕು. ಸ್ವಲ್ಪ ದೂರ ಅಷ್ಟೆ! ಬೇಡವೆಂದಾಗ ಅದನ್ನು ಕರೆದು ತೆಗೆಯುವುದು ಸುಲಭ?'' ಎಂದನು.

ಹ್ಯಾರಿ ತಕ್ಷಣ ಗೆಳೆಯನ ಸಲಹೆಯನ್ನು ಪಾಲಿಸಲಿಲ್ಲ. ಒಂದಷ್ಟು ದಿನ ತಡೆದನು. ಆದರೆ ಮೂತ್ರ ಸೋರುವಿಕೆಯು ಅವನ ಸಾಮಾಜಿಕ ಬದುಕನ್ನೇ ಅಸ್ತವ್ಯಸ್ತಗೊಳಿಸಲಾರಭಿಸಿತು. ಇದರಿಂದ ರೋಸಿ ಹೋದ ಹ್ಯಾರಿ ಗೆಳೆಯನ ಸಲಹೆಯನ್ನು ಪಾಲಿಸಲು ನಿಶ್ಚಯಿಸಿದನು. ತಡಮಾಡದೆ ಮಾರುಕಟ್ಟೆಗೆ ಹೋಗಿ ಒಂದು ಪೌಂಡು ಒಣ ಬಟಾಣಿಯನ್ನು ತಂದನು. ಸುರಿದನು. ಬಟಾಣಿಯಲ್ಲಿ ಹಲವು ಗಾತ್ರದವು ಇದ್ದವು. ಅವನ್ನು ಹಿಸುಕಿ ನೋಡಿದನು. ಬಟಾಣಿ ಬಹಳ ಗಟ್ಟಿಯಾಗಿತ್ತು. ತನಗೆ ಸೂಕ್ತವಾದ ಬಟಾಣಿಯನ್ನು ಆರಿಸಿಕೊಂಡು ಮೂತ್ರದ್ವಾರ ದೊಳಗೆ ಸ್ವಲ್ಪ ದೂರ ತಳ್ಳಿದನು.

ಹ್ಯಾರಿಗೆ ಗೆಳೆಯನ ಸಲಹೆ ಅತ್ಯದ್ಭುತ ವೆನಿಸಿತು. ಈಗ ಮೂತ್ರ ಸೋರುತ್ತಿರಲಿಲ್ಲ. ಮೂತ್ರ ವಿಸರ್ಜನೆಗೂ ಯಾವುದೇ ತೊಂದರೆ ಯಾಗುತ್ತಿರಲಿಲ್ಲ. ಬೇಕೆಂದಾಗ ಮೂತ್ರ ಹೊಯ್ಯಬಹುದಿತ್ತು.

ಹ್ಯಾರಿ ಆರಾಮವಾಗಿ ಎರಡು ಮೂರು ದಿನ ಕಳೆದನು.

ನಂತರ ಅವನಿಗೆ ಬಟಾಣಿಯನ್ನು ಬದಲಿಸಿದರೆ ಒಳ್ಳೆಯದು ಎಂದೆನಿಸಿತು. ಗೌಳಿಗನು ಹಸುವಿನ ಕೆಚ್ಚಲಿನಿಂದ ಹಾಲನ್ನು ಕರೆಯುವಂತೆ ಹ್ಯಾರಿ ಶಿಶ್ನವನ್ನು ಕರೆದು ಬಟಾಣಿಯನ್ನು ಹೊರತರಲು ಪ್ರಯತ್ನಿಸಿನು. ಆದರೆ ಬಟಾಣಿಕಾಳು ಬರಲೇ ಇಲ್ಲ!

ಹ್ಯಾರಿಗೆ ಒಂದು ಉಪಾಯ ಹೊಳೆಯಿತು.

ಹುಬ್ಬುಕೂದಲನ್ನು ಕೀಳುವಿ ಒಂದು ಸೂಕ್ಷ್ಮ ಇಕ್ಕಳ ಅವನ ಮನೆಯಲ್ಲಿತ್ತು. ಈ ಇಕ್ಕಳದಿಂದ ಬಟಾಣಿಯನ್ನು ಹೊರತೆಗೆಯಲು ಪ್ರಯತ್ನಿಸಿದನು. ಇದೇ ಅವನು ಮಾಡಿದ ತಪ್ಪು ಬೀಜ ಹೊರ ಬರುವ ಬದಲು ಮತ್ತಷ್ಟು ಒಳಗಡೆಗೆ ಹೋಗಿಬಿಟ್ಟಿತು. ಜೊತೆಗೆ ಸಾಕಷ್ಟು ನೋವಾಯಿತು.

ಹ್ಯಾರಿ ಒಂದೆರಡು ದಿನ ಕಾದು ನೋಡಲು ನಿಶ್ಚಯಿಸಿದನು.

ಒಂದು ವಾರ ಕಳೆದುಹೋಯಿತು.

ಈಗ ಹ್ಯಾರಿಗೆ ನಿಜವಾದ ತೊಂದರೆ ಆರಂಭವಾಯಿತು. ಶಿಶ್ನ ಊದಿಕೊಂಡು ದಪ್ಪವಾಗಿಬಿಟ್ಟಿತ್ತು. ನೋಯುತ್ತಿತ್ತು. ಮೂತ್ರ ವಿಸರ್ಜನೆಗೆ ಅಸಾಧ್ಯವಾಗಿ ಬಿಟ್ಟಿತ್ತು.

ಹ್ಯಾರಿಗೆ ಹೆದರಿಕೆಯಾಯಿತು. ತಾನು ಮಾಡಿಕೊಂಡ ಸ್ವಯಂ ಚಿಕಿತ್ಸೆಯ ಬಗ್ಗೆ ವೈದ್ಯರಲ್ಲಿ ಹೇಳಿಕೊಳ್ಳಲು ಸಂಕೋಚವೆನಿಸಿತು. ಆದರೆ ಹ್ಯಾರಿಗೆ ಬೇರೆ ದಾರಿಯೇ ಇರಲಿಲ್ಲ. ಮೂತ್ರ ಕಟ್ಟಿಕೊಂಡುಬಿಟ್ಟಿತ್ತು!

ಹ್ಯಾರಿ ನಿಜವಾದ ಹ್ಯಾಪು ಮೋರೆಯೊಡನೆ ತನ್ನ ಕುಟುಂಬ ವೈದ್ಯರ ಬಳಿ ಹೋದನು. ತನ್ನ ಗೆಳೆಯನ ಸಲಹೆಯ ಬಗ್ಗೆ, ತಾನು ಬಟಾಣಿ ಯನ್ನು ಒಳಗೆ ಹಾಕಿಕೊಂಡ ಬಗ್ಗೆ, ಇಕ್ಕಳದಿಂದ ತೆಗೆಯಲೆತ್ನಿಸಿದಾಗ ಅದು ಒಳಗೆ ಹೋದ ಬಗ್ಗೆ ಎಲ್ಲವನ್ನೂ ವಿವರಿಸಿ ಹೇಳಿದನು.

ಹ್ಯಾರಿಯ ವೈದ್ಯರು ಕಂಗಾಲಾಗಿ ಹಣೆ ಹಣೆ ಬಡಿದುಕೊಂಡರು.

ಹ್ಯಾರಿಯ ಶಿಶ್ನವನ್ನು ಪರೀಕ್ಷಿಸಿದರು. ಅದು ಊದಿಕೊಂಡಿತ್ತು. ಹ್ಯಾರಿ ಕಥೆ ಹೇಳುತ್ತಿಲ್ಲ ಎಂಬ ನಂಬಿಕೆ ಅವರಿಗೆ ಬಂದಿತು. ಆ ಕೂಡಲೆ ಮೂತ್ರನಾಳ ತಜ್ಞ (ಯೂರಾಲಜಿಸ್ಟ್) ರನ್ನು ಕರೆಸಿದರು.

ತಜ್ಞ ವೈದ್ಯರು ಹ್ಯಾರಿಗೆ ಸಮಗ್ರ ಅರಿವಳಿಕೆ (ಜನರಲ್ ಅನೆಸ್ತೀಸಿಯ) ಯನ್ನು ನೀಡಿದರು. ಮೂತ್ರನಾಳದರ್ಶಕ ಯಂತ್ರ (ಸಿಸ್ಟೋಸ್ಕೋಪ್) ವನ್ನು ಹ್ಯಾರಿಯ ಮೂತ್ರದ್ವಾರದಲ್ಲಿ ತೂರಿಸಿ, ವೀಕ್ಷಿಸಿದರು.

ಅಲ್ಲೊಂದು ಅದ್ಭುತ - ಆಶ್ಚರ್ಯ ಅವರಿಗಾಗಿ ಕಾದಿತ್ತು.

ಬಟಾಣಿ ಮೊಳಕೆಯೊಡೆದಿತ್ತು!

ಯಾವುದೇ ಬೀಜ ಮೊಳಕೆಯೊಡೆಯ ಬೇಕಾದರೆ ತೇವ ಇರಬೇಕು. ಕತ್ತಲಿರಬೇಕು (ಮಣ್ಣಿನೊಳಗೆ ಕತ್ತಲೆ ಅಲ್ಲವೆ!) ಸಾಕಷ್ಟು ಉಷ್ಣವಿರಬೇಕು...... ಇಂತಹ ಪರಿಸರ ವಸಂತ ಋತುವಿನಲ್ಲಿ ದೊರೆಯುವುದರಿಂದ ಬೀಜಗಳು ಮೊಳಕೆಯೊಡೆಯುತ್ತವೆ, ಇಂತಹ ಕೃತಕ ಪರಿಸರ ಹ್ಯಾರಿಯ ಶಿಶ್ನದಲ್ಲಿ ದೊರೆತ ಕಾರಣ, ಬಟಾಣಿ ಮೊಳಕೆ ಒಡೆದು ಕಾಂಡ - ಬೇರುಗಳನ್ನು ಹೊರಡಿಸಿಬಿಟ್ಟಿತ್ತು!

ತಜ್ಞ ವೈದ್ಯರು ಬಹಳ ಎಚ್ಚರಿಕೆಯಿಂದ ಬಟಾಣಿ 'ಗಿಡ'ವನ್ನು ಹೊರತೆಗೆದರು.

ಹ್ಯಾರಿಗೆ ಪ್ರತಿಜೈವಿಕ ಔಷಧಗಳನ್ನು ನೀಡಿದರು. ಹ್ಯಾರಿಯ ಅದೃಷ್ಟ ಚೆನ್ನಾಗಿತ್ತು. ಬಟಾಣಿ ಬೀಜ ಸ್ಥಳೀಯವಾಗಿ ಮೂತ್ರನಾಳದಲ್ಲಿ ಯಾವುದೇ ತೊಂದರೆಯನ್ನು ಉಂಟು ಮಾಡಿರಲಿಲ್ಲ. ಅಲ್ಲೇನಾದರೂ ಬೇರು ಬಿಡಲೆತ್ನಿಸಿದ್ದರೆ ಗಾಯವಾಗುತ್ತಿತ್ತು. ಈ ಗಾಯ ವಾಸಿಯಾಗಿ ಮೂತ್ರದ್ವಾರವನ್ನು ಕಿರಿದುಗೊಳಿಸಿ ಅನೇಕ ಸಮಸ್ಯೆಗಳಿಗೆ ಕಾರಣವಾಗಬಹುದಿತ್ತು. ಆದರೆ ಅಂತಹ ತೊಂದರೆಗಳು ಆಗಿರಲಿಲ್ಲ.

ಹ್ಯಾರಿಯ ಕುಟುಂಬ ವೈದ್ಯರು ಅತಿರಕ್ತ ದೊತ್ತಡ ನಿಯಂತ್ರಣಕ್ಕೆಂದು ನೀಡಿದ್ದ ಡೈಯೂರೆಟಿಕ್ ಔಷಧಗಳನ್ನು ನಿಲ್ಲಿಸಿದರು. ಬೇರೆ ಮಾತ್ರೆ ಬರೆದುಕೊಟ್ಟರು. ಈ ಮಾತ್ರೆ ಅಧಿಕ ಮೂತ್ರವನ್ನು ಪ್ರಚೋದಿಸುತ್ತಿರಲಿಲ್ಲ. ಅವನ ರಕ್ತದೊತ್ತಡವನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುತ್ತಿತ್ತು.

ಹ್ಯಾರಿ ಮುಂದೆಂದೂ ಸ್ವಯಂ ಚಿಕಿತ್ಸೆ ಮಾಡಿಕೊಳ್ಳಲಿಲ್ಲ.

# ಒಬ್ಬರಿಂದ ಮತ್ತೊಬ್ಬರಿಗೆ ಬರುವ ಕಾಯಿಲೆಗಳು

ಟಿ.ಟಿ.ಕಸ್ತೂರಿ

ಆರೋಗ್ಯವೇ ಮಹಾಭಾಗ್ಯ ಎನ್ನುವುದು ಎಲ್ಲರಿಗೆ ತಿಳಿದ ಸಂಗತಿ ! ಅದೇ ಆರೋಗ್ಯವಾಗಿರಬೇಕೆಂದರೆ ರೋಗಗಳಿಂದ ದೂರವಾಗಿರಬೇಕು. ರೋಗರಹಿತ ಜೀವನ ನಮ್ಮದಾಗಬೇಕು. ಅದರಲ್ಲೂ ಅಂಟು ರೋಗಗಳ ವಿಷಯದಲ್ಲಂತು ತುಂಬಾ ಎಚ್ಚರಿಕೆಯಿಂದ ಇರಬೇಕು. ಆದಾಗ್ಯೂ ಅಂಟುರೋಗಗಳನ್ನು ಖಚಿತವಾಗಿ ನಿವಾರಿಸ ಬಹುದೆಂದು ಹೇಳುವುದು ಕಷ್ಟಕರ.

ಅಂಟುರೋಗಗಳು ಹೇಗೆ ವ್ಯಾಪಿಸುತ್ತವೆ? ಅವನ್ನು ಹೇಗೆ ತಡೆಗಟ್ಟುವುದು ಎಂಬುದನ್ನು ಮೊದಲೇ ತಿಳಿದುಕೊಂಡರೆ ಸುರಕ್ಷಿತವಾಗಿರ ಬಹುದು. ಆದರೆ ನಮ್ಮಲ್ಲಿ ಬಹುಜನರಿಗೆ ಯಾವುದು ಅಂಟುರೋಗ? ಯಾವುದು ಅಂಟುರೋಗವಲ್ಲ ಎಂಬ ವಿಷಯ ತಿಳಿಯದೆಂದರೆ ಅತಿಶಯೋಕ್ತಿಯಲ್ಲ. ಮೊನೋ ನ್ಯೂಕ್ಲಿಯಾಸಿಸ್, ಕ್ಷಯ (ಟಿ.ಬಿ.) ದಂತಹವು ಅಂಟುರೋಗಗಳು. ಕ್ಯಾನ್ಸರ್, ಉಬ್ಬಸ, ಮೂರ್ಛೆರೋಗ ಅಂಟು ವ್ಯಾಧಿಗಳಲ್ಲ.

ಅಂಟು ರೋಗಗಳು ಸೂಕ್ಷ್ಮಜೀವಿಗಳಿಂದ, ವೈರಸ್‌ಗಳಿಂದ ಬರುತ್ತವೆ. ಇನ್ನು ವೈದ್ಯರು ಬಳಸುವ ಸೂಜಿ, ಸಿರಂಜ್‌ನ ಮೂಲಕವು ವ್ಯಾಪಿಸುತ್ತವೆ. ಈ ಸೂಕ್ಷ್ಮ ಜೀವಿಗಳು, ವೈರಸ್‌ಗಳು ಅನೇಕ ವಿಧದಲ್ಲಿ ಒಬ್ಬರಿಂದ ಒಬ್ಬರಿಗೆ ತಾಗುತ್ತವೆ. ಉಸಿರಾಡುವ ಗಾಳಿ, ಕಲುಷಿತಗೊಂಡ ಆಹಾರ ಸೇವನೆ, ನೀರು ಕುಡಿಯುವುದರ ಮೂಲಕ ಅಂಟುರೋಗಗಳು ಬರುತ್ತವೆ.

ಅದಲ್ಲದೆ ಅಂಟುರೋಗದಿಂದ ನರಳುತ್ತಿರು ವವನು ಇತರರೊಂದಿಗೆ ಸನ್ನಿಹಿತನಾಗಿದ್ದಾಗ, ಲೈಂಗಿಕ ಸಂಬಂಧವಿಟ್ಟುಕೊಂಡಾಗ ಅಂಟು ರೋಗಗಳು ಬೇರೊಬ್ಬರಿಗೆ ವ್ಯಾಪಿಸುತ್ತವೆ. ಸೂಕ್ಷ್ಮಕ್ರಿಮಿಗಳು, ಪ್ರಾಣಿಗಳು ಕಚ್ಚುವುದರಿಂದ ಕೂಡಾ ಅಂಟುರೋಗ ದಾಳಿಮಾಡುತ್ತದೆ.

ಅಂಟುರೋಗ ಸಣ್ಣವರು, ದೊಡ್ಡವರು ಎಂಬ ಬೇಧವಿಲ್ಲದೆ ಎಲ್ಲರಿಗೂ ಬರುತ್ತದೆ. ಆದರೆ ಶುಭ್ರವಾಗಿ, ಆರೋಗ್ಯಕರವಾಗಿರು ವವರಿಗೆ ಇನ್‌ಫೆಕ್ಷನ್ ದಾಳಿ ಅಷ್ಟೊಂದು ಇರುವುದಿಲ್ಲ. ಶಾರೀರಕ ಆರೋಗ್ಯ ಚೆನ್ನಾಗಿದ್ದು, ವ್ಯಕ್ತಿಗತವಾಗಿ ಅತ್ಯಂತ ಪೌಷ್ಟಿಕ ಆಹಾರದ ಕೊರತೆಯಿಂದ ನರಳುತ್ತಿರುವವರಿಗೆ, ತೀವ್ರ ಅನಾರೋಗ್ಯದಿಂದ ಇರುವವರಿಗೆ ಅಂಟುವ್ಯಾಧಿ ಬಹುಬೇಗ ಬರುತ್ತದೆ.

ಜ್ವರ; ಇದು ವಿಸ್ತೃತವಾಗಿ ವ್ಯಾಪಿಸುವ ಅಂಟುರೋಗ. ಜ್ವರ, ನ್ಯೂಮೋನಿಯಾದಂತಹ ಶ್ವಾಸ ವ್ಯವಸ್ಥೆಗೆ ಸಂಬಂಧಿಸಿದ ತೀವ್ರವಾದ ಇನ್‌ಫೆಕ್ಷನ್ ವೈರಸ್‌ದಿಂದ ಬರುತ್ತದೆ. ರೋಗಿಯಿಂದ ನೇರವಾಗಿಯಾಗಲಿ, ವೈರಸ್ ನಿಂದ ಕಲುಷಿತವಾದ ಬಟ್ಟೆಗಳು, ಕರವಸ್ತ್ರದ



ಮೂಲಕವು ಅಂಟುರೋಗ ತಾಗಬಹುದು.

ಕ್ಷಯರೋಗ ಕೂಡಾ ವಾಸ್ತವಿಕವಾಗಿ ಬ್ಯಾಕ್ಟೀರಿಯಾ ಮೂಲಕ ಬರುವ ಕಾಯಿಲೆ. ದೇಹದ ಎಲ್ಲ ಭಾಗಗಳಲ್ಲಿ ಈ ರೋಗ ಬರಬಹುದು. ರೋಗಿಯ ಉಗುಳಲ್ಲಿ ಇರುವ ಗಾಳಿಯ ಮೂಲಕ ಮತ್ತೊಬ್ಬರನ್ನು ಆಶ್ರಯಿಸಿ ಕಾಯಿಲೆ ತರುತ್ತದೆ.

ಧನುರ್ವಾತ ತುಂಬಾ ಅಪಾಯಕಾರಿ ಇನ್‌ಫೆಕ್ಷನ್. ಇದನ್ನು ಇಂಗ್ಲಿಷ್‌ನಲ್ಲಿ 'ಟೆಟನಸ್' ಎಂದು ಕರೆಯುತ್ತಾರೆ. ಆದರೆ ನಾವು ಇದರ ಕುರಿತು ಅಷ್ಟೊಂದು ಗಮನ ಹರಿಸುವುದಿಲ್ಲ. ಧನುರ್ವಾತ ನಿವಾರಣೆಗೆ ಚಿಕ್ಕಂದಿನಲ್ಲಿ ತೆಗೆದುಕೊಂಡ ಯಾಂಟಿ ಟೆಟಾನಸ್ ಔಷಧ ಜೀವನದುದ್ದಕ್ಕೂ ರಕ್ಷಣೆ ನೀಡುತ್ತದೆಂದು ತಿಳಿದುಕೊಂಡಿರುತ್ತೇವೆ. ಆದರೆ ವಾಸ್ತವಿಕವಾಗಿ ಅದು ನಿಜವಲ್ಲ. ಶರೀರದ ಮೇಲೆ ಗಾಯಗಳಾದಾಗ ಕ್ರಿಮಿ ಕೀಟಗಳ, ಪ್ರಾಣಿಗಳ ಮಲ ತಗುಲಿದರೆ ಅದರ ಮೂಲಕ ಟೆಟಾನಸ್ ಬ್ಯಾಕ್ಟೀರಿಯವ್ ಶರೀರದೊಳಗೆ ಪ್ರವೇಶಿ ಸುತ್ತದೆ. ಇದರಿಂದ ಶರೀರದಲ್ಲಿನ ಭಾಗಗಳು ಬಿಗಿದುಕೊಳ್ಳುತ್ತವೆ. ಆ ಭಾಗದಲ್ಲಿ ವಿಪರೀತ ವಾದ ನೋವು ಉಂಟಾಗುತ್ತದೆ. ಸರಿಯಾದ ಸಮಯಕ್ಕೆ ಚಿಕಿತ್ಸೆ ಮಾಡದೆ ಹೋದರೆ ಈ ಕಾಯಿಲೆ ಅತ್ಯಂತ ಅಪಾಯಕಾರಿ ಪರಿಣಾಮ ಉಂಟುಮಾಡುತ್ತದೆ.

### ವೈರಸ್‌ನಿಂದ ಅಂಟುರೋಗಗಳು

ಒಬ್ಬರಿಂದ ಮತ್ತೊಬ್ಬರಿಗೆ ಸೋಂಕುವ ಇತರ ಕಾಯಿಲೆಗಳ ವಿಷಯದಲ್ಲಿ ಕೂಡಾ ಎಚ್ಚರದಿಂದಿರಬೇಕು. ಮಕ್ಕಳಲ್ಲಿ ಇವು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಸ್ಮಾಲ್‌ಪಾಕ್ಸ್, ಡಿಫ್ತೀರಿಯಾ ಕೆಮ್ಮು ಇಂತಹ ಕಾಯಿಲೆಗಳಲ್ಲಿ ಮುಖ್ಯವಾದವು. ಇವೆಲ್ಲವು ವೈರಸ್‌ಗಳ ಮೂಲಕ ಬರುವ ಕಾಯಿಲೆಗಳೆ. ಗಾಳಿಯ ಮೂಲಕ ರೋಗಿಯ ನೇರ ಸಂಪರ್ಕದಿಂದ ಒಬ್ಬರಿಂದೊಬ್ಬರಿಗೆ ತಾಗುತ್ತದೆ.

ಬೂಷ್ಟು ಹಿಡಿದ ಪದಾರ್ಥಗಳ ಸೇವನೆಯಿಂದ ಇನ್‌ಫೆಕ್ಷನ್‌ಗೆ ಗುರಿಯಾ ಗುತ್ತಾನೆ. ಇದರಿಂದ ಪಾದಗಳಲ್ಲಿ ಬಾವು ಬರುತ್ತದೆ. ಜನನೇಂದ್ರಿಯ ಬಳಿ, ಮಲದ್ವಾರ ದಲ್ಲಿ ಕೂಡಾ ಫಂಗಸ್‌ನಿಂದ ಇನ್‌ಫೆಕ್ಷನ್ ಬರುವುದುಂಟು. ಅಲ್ಲಿ ವಿಪರೀತ ನವೆ ಉಂಟಾಗುತ್ತದೆ. ಇದನ್ನು ಇಂಗ್ಲಿಷಿನಲ್ಲಿ 'ಜಾಕ್‌ಇಚ್' ಎಂದು ಕರೆಯುತ್ತಾರೆ. ಬಿಗಿಯಾದ ಉಡುಪುಗಳು, ಜೀನ್ಸ್‌ನಂತಹ ಬಟ್ಟೆಗಳನ್ನು ಬಳಸುವುದರಿಂದ 2ಈ ಪರಿಸ್ಥಿತಿ ಏರ್ಪಡುತ್ತದೆ.

ಸ್ನಾನ ಮಾಡಿದ ನಂತರ ಶರೀರದ ಮೇಲೆ ತೇವ ಇಲ್ಲದಂತೆ ಚೆನ್ನಾಗಿ ಒರೆಸಿಕೊಳ್ಳಬೇಕು. ಕಂಕುಳಲ್ಲಿ, ತೊಡೆಸಂದುಗಳಲ್ಲಿ ತೇವ ಇಲ್ಲದಂತೆ ನೋಡಿಕೊಳ್ಳಬೇಕು. ಅಲ್ಲಿ ಫಂಗಸ್‌ನ್ನು ನಾಶಗೊಳಿಸುವ ಪೌಡರ್ ಹಾಕಿಕೊಳ್ಳಬೇಕು.

'ಇಂಪೆಟೆಗೊ' ಎನ್ನುವುದು ತೀವ್ರವಾದ ಚರ್ಮವ್ಯಾಧಿ. ಇದು ಒಬ್ಬರಿಂದ ಮತ್ತೊಬ್ಬರಿಗೆ ಬರುತ್ತದೆ. ಈ ಕಾಯಿಲೆ ಬಂದಾಗ ತುಟಿಗಳಲ್ಲಿ, ಮೂಗಿನ ಮೇಲೆ ಸಣ್ಣ ಹುಣ್ಣು ಕಂಡುಬರುತ್ತವೆ. ಚಿಕ್ಕ ಮಕ್ಕಳಲ್ಲಿ ವಯೋವೃದ್ಧರಲ್ಲಿ ಈ

ಇಂಪೆಟೆಗೊ ಕಾಯಿಲೆ ಹೆಚ್ಚಾಗಿ ಕಂಡುಬರುತ್ತದೆ. ಈ ಕಾಯಿಲೆಯಿರುವವರನ್ನು ಮುದ್ದಾಡುವುದರಿಂದ ಕಾಯಿಲೆ ಬರುತ್ತದೆ.

**ಕೆಲ ಎಚ್ಚರಿಕೆಗಳು**

ಮಲ ವಿಸರ್ಜನೆ ಮಾಡಿದ ನಂತರ ಸಾಬೂನು ಹಚ್ಚಿ ಕೈ ತೊಳೆಯಬೇಕು. ಟವಲ್, ಬ್ರಷ್, ಬಾಚಣಿಕೆಯಂತಹ ದೈನಂದಿನ ಬಳಕೆಯ ವಸ್ತುಗಳು ಆಯಾ ವ್ಯಕ್ತಿಗೆ ಸೀಮಿತವಾಗುವಂತೆ ಉಪಯೋಗಿಸಬೇಕು. ಒಬ್ಬರ ವಸ್ತು ಇನ್ನೊಬ್ಬರು ಬಳಸುವುದರಿಂದ ಅವರಲ್ಲಿರುವ ಅಂಟುರೋಗ ವರ್ಗಾವಣೆಯಾಗುತ್ತದೆ.

**ಮೊನೋ ನ್ಯೂಕ್ಲಿಯಾಸಿಸ್**

ಮೊನೊ ನ್ಯೂಕ್ಲಿಯಾಸಿಸ್‌ನ್ನು ಸರ್ವಸಾಧಾರಣ ವಾಗಿ ಮೊನೊ ಎಂದು ಕರೆಯುತ್ತಾರೆ. ಇನ್‌ಫೆಕ್ಷನ್‌ಗೆ ಗುರಿಯಾದ ವ್ಯಕ್ತಿಯ ಕೊರಳಿನಿಂದ, ಮೂಗಿನಿಂದ ವಿಸರ್ಜಿತವಾಗುವುಗಳಿಂದ, ಗಾಳಿ ಮೂಲಕ ವೈರಸ್ ವ್ಯಾಪಿಸುತ್ತದೆ.

ರಕ್ತದ ಮಾರ್ಪಾಡಿನ ಮೂಲಕವು ಸಹ ಇನ್‌ಫೆಕ್ಷನ್ ಸೋಂಕು ತಾಗುವ ಅವಕಾಶವಿದೆ.

ಈ ಇನ್‌ಫೆಕ್ಷನ್ ಉಂಟಾದಾಗ ಚೆನ್ನಾಗಿ ವಿಶ್ರಾಂತಿ ತೆಗೆದುಕೊಳ್ಳಬೇಕು. ಕೆಲವು ವಾರಗಳಲ್ಲಿ ಇದು ಕಡಿಮೆಯಾಗಬಹುದು. ಇನ್‌ಫೆಕ್ಷನ್ ಸೋಕಿದ ವ್ಯಕ್ತಿಯೊಂದಿಗೆ ಹೆಚ್ಚು ಹತ್ತಿರದಿಂದ ದೇಹ ತಾಗುವಂತೆ ಬೆರೆಯಬಾರದು. ಮತ್ತು ತುಟಿ, ಕೆನ್ನೆಗೆ ಚುಂಬಿಸುವುದು



ಸೂಕ್ತವಲ್ಲ. ನ್ಯೂಕ್ಲಿಯಾಸಿಸ್‌ಗೆ ಗುರಿಯಾದ ವ್ಯಕ್ತಿಗೆ ಜ್ವರ, ಬಲಹೀನತೆ ಆಲಸ್ಯ ತಲೆದೋರುತ್ತದೆ. ಕಣ್ಣುರೆಪ್ಪೆಗಳು ಉಬ್ಬುತ್ತವೆ. ಕೊರಳನೋವು ಉಂಟಾಗುತ್ತದೆ. ಆದರೆ ಈ ಕಾಯಿಲೆಗೆ ತುತ್ತಾದ ವ್ಯಕ್ತಿಯನ್ನು ಏಕಾಂಗಿಯಾಗಿಸುವ ಅಗತ್ಯವಿಲ್ಲ. ಆದರೆ ರೋಗಿ ಬಳಸುವ ವಸ್ತುಗಳನ್ನು ಪ್ರತ್ಯೇಕವಾಗಿರಿಸಬೇಕು. ಮತ್ತೊಬ್ಬರು ಬಳಸಕೂಡದು.

ಎಷ್ಟೋ ಅಂಟುರೋಗಗಳಿವೆ. ಆದರೆ ಅವು ನಮಗೆ ಇವೆಯೆಂದಾಗಲಿ, ಬರುತ್ತವೆಯೆಂದಾಗಲಿ ಆತಂಕಪಡಬಾರದು. ಪ್ರಾಥಮಿಕವಾದ ಔಷಧಗಳನ್ನು ಎಚ್ಚರಿಕೆಯಿಂದ ಬಳಸಿದರೆ ಅಂಟುರೋಗದಿಂದ ದೂರ ಉಳಿಯಬಹುದು. ದಿನವೂ ಅಗತ್ಯ ಅಂಗಸಾಧನೆ ಮಾಡುವುದು, ಸಮತೋಲನ ಆಹಾರ ತೆಗೆದುಕೊಳ್ಳುವುದರಿಂದ ಶಾರೀರಿಕ ದಾರ್ಢ್ಯತೆ ಕಾಪಾಡಿಕೊಳ್ಳಬಹುದು. ಇದರಿಂದ ಯಾವುದೇ ರೋಗ, ಅಂಟುರೋಗ ಸುಳಿಯದಂತೆ ದೂರವಿರಿಸಲು ಸಾಧ್ಯ. ಆಗಲೇ ಮಹಾ ಭಾಗ್ಯವಾದ ಆರೋಗ್ಯವನ್ನು ನಾವು ಹೊಂದುತ್ತೇವೆ.



## ಮುಳ್ಳಿನಿಂದ ಮುಳ್ಳು ತೆಗೆಯುವುದು

ಈ ಮಾತನ್ನು ಮೊಟ್ಟಮೊದಲು ಯಾರು ಯಾರಿಗೆ ಹೇಳಿದರೋ ಗೊತ್ತಿಲ್ಲ. ಆದರೆ ಇದು ಕಟುಸತ್ಯ ಹಾಗೂ ಒಳ್ಳೆಯ ಮಾರ್ಗದರ್ಶಕ ವಾಕ್ಯ. ಇಂಥ ಒಂದು ಘಟನೆ ಮತ್ತೆ ಬೆಳಕಿಗೆ ಬಂದಿದೆ.

ಫ್ರಾನ್ಸಿಸ್ ಮಾರ್ಕ್ಲ್ಯಾಂಡ್ ಎಂಬ ವೈದ್ಯ ವಿಜ್ಞಾನಿ ಅಮೇರಿಕೆಯ ದಕ್ಷಿಣ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ವೈದ್ಯ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿರುವರು. ಅವರು ತಮ್ಮ ಸಂಶೋಧನೆಯಿಂದ ಮುಳ್ಳಿನಿಂದ ಮುಳ್ಳು ತೆಗೆ ಎಂಬುದನ್ನು ಸಿದ್ಧ ಮಾಡಿದ್ದಾರೆ.

ಜಗತ್ತಿನಲ್ಲಿ ಕೆಲವೇ ಹಾವುಗಳು ವಿಷಕಾರಿ ಆಗಿವೆ. ಅವುಗಳಲ್ಲಿ ''ಕಾಪರ್ ಹೆಡ್'' ಎಂಬ ಹಾವು ಒಂದು. ಇದರ ವಿಷವು ಪ್ರಾಣಿಗಳನ್ನು ಕೊಂದು ಹಾಕುವುದು. ಜನರನ್ನು ಹಾಗೂ ಪ್ರಾಣಿಗಳನ್ನು ಕೊಂದು ಹಾಕುವ ಇನ್ನೊಂದು ಸಂಗತಿ ಎಂದರೆ 'ಕ್ಯಾನ್ಸರ್'. ಕ್ಯಾನ್ಸರ್ ಹುಣ್ಣಿರಬಹುದು, ಗಡ್ಡೆ ಇರಬಹುದು. ಕ್ಯಾನ್ಸರ್ ಜೀವಕಣಗಳು ತಾವು ಹುಟ್ಟಿದ ಅಂಗಾಂಷವನ್ನು ಗಟ್ಟಿಯಾಗಿ ಹಿಡಿಯುತ್ತವೆ. ಅಲ್ಲಿಂದ ಅವು ರಕ್ತದ ಮಾರ್ಗವಾಗಿ ಇಲ್ಲವೆ ಹಾಲ್ರಸ ವಾಹಿನಿಗಳ ಮಾರ್ಗವಾಗಿ, ಬೇರೆ ದಾರಿಗಳ ಮಾರ್ಗವಾಗಿ ಬೇರೆ ಅಂಗಾಂಷಗಳನ್ನು ತಲುಪುವುವು. ಅಲ್ಲಿ ಮತ್ತೆ ಬೆಳೆದು ಆ ಪೋಷಕ ಅಂಗಾಂಷವನ್ನು ಹಾಳು ಮಾಡುತ್ತವೆ. ಇದರಿಂದ ವ್ಯಕ್ತಿ ಮರಣ ಹೊಂದುವನು. ಮೂಲ ಗಂತಿ ಯಾಗಲೀ, ಮರುನೆಟ್ಟ ಗಂತಿಯಾಗಲೀ ಬಲು ರಭಸದಿಂದ ಬೆಳೆಯುವುವು. ಇವು ಬೆಳೆದಂತೆ ಇವುಗಳಿಗೆ ಆಹಾರ ಪೂರೈಕೆ ಆಗಬೇಕು. ಇದಾಗಬೇಕಾದರೆ ಹೊಸ ಹೊಸ ವಾಹಿನಿಗಳು ಚಿಗಿಯಬೇಕು. ರಕ್ತವಾಹನಿಗಳು ಚಿಗಿಯದೇ ಹೋದರೆ ಗಂತಿಯ ಅಂಗಾಂಷ ಬೆಳೆಯ ಲಾರದು. ಇದು ಎಲ್ಲರಿಗೂ ತಿಳಿದ ಸಂಗತಿ.

ಫ್ರಾನ್ಸಿಸ್ ಉಳಿದವರಂತೆ ತೆಪ್ಪಗೆ ಕುಳಿತುಕೊಳ್ಳಲಿಲ್ಲ. ಅವರು 'ಕಾಪರ್ ಹೆಡ್' ಸರ್ಪದ ವಿಷ ಏನು ಮಾಡುತ್ತದೆ ಎಂಬುದನ್ನು ಪತ್ತೆ ಹಚ್ಚಿದರು. ವಿಷವು ರಕ್ತವಾಹಿನಿಗಳ ಮೇಲೆ ಪ್ರಭಾವ ಬೀರಿ ಅವು ಚಿಗಿಯದಂತೆ ಮಾಡುತ್ತದೆ. ಹಾಗಾದರೆ ಈ ವಿಷವನ್ನು ಅಲ್ಪಪ್ರಮಾಣದಲ್ಲಿ ಪ್ರಯೋಗಿಸಿದರೆ ರಕ್ತವಾಹಿನಿ ಚಿಗುರುವುದು ಇಲ್ಲವಾ ಗುತ್ತದೆ. ಅಂದರೆ ರಭಸದಿಂದ ಬೆಳೆಯುವ ಕ್ಯಾನ್ಸರ್ ಗಂತಿಯ ಬೆಳೆಯು ವಿಕೆಗೆ ನಿಯಂತ್ರಣ ಬರುತ್ತದೆ.

ಇದನ್ನು ಖಚಿತಗೊಳಿಸಲು ಫ್ರಾನ್ಸಿಸ್ ಅವರ ತಂಡ ಸರ್ಪದ ವಿಷವನ್ನು ಕ್ಯಾನ್ಸರ್‌ದಿಂದ ಬಳಲುವ ಪ್ರಾಣಿಗಳ ಮೇಲೆ ಪ್ರಯೋಗಿಸಿತು. ಫಲಿತಾಂಷ ಸಂತೋಷ ತಂದಿದೆ. ವಿಷವನ್ನು ಪ್ರಯೋಗಿಸಿದ ಪ್ರಾಣಿಗಳ ಕ್ಯಾನ್ಸರ್ ಗಂತಿಗಳು ಬಹಳ ಮಟ್ಟಿಗೆ ಉಡುಗಿ ಹೋದವು. ಹೊಸ ಅಂಗಾಂಷಗಳಲ್ಲಿ ಕ್ಯಾನ್ಸರ್ ಗಂತಿ ಮರುನಾಟಿಕೆ ತೋರಲಿಲ್ಲ.

ಕೆಲದಿನಗಳಲ್ಲಿ ಇದೇ ತಂತ್ರವನ್ನು ಮಾನವರ ಮೇಲೆ ನಡೆಸುವ ಸನ್ನಾಹದಲ್ಲಿ ಇದ್ದಾರೆ ಈ ತಂಡದ ಸದಸ್ಯರು.



# ಬಣ್ಣಗೆಟ್ಟ ಹಲ್ಲುಗಳನ್ನು ಅಂದಗೊಳಿಸುವುದು ಹೇಗೆ?

ಡಾ. ಪ್ರೇಮಲತಾ ಬಿ.

**ಮೊಗದ ಸೌಂದರ್ಯ ಹೆಚ್ಚುವುದು ಮುಗುಳ್ನಕ್ಕಾಗ. ಮುಗುಳ್ನಗೆ ಮೋಹಕವೆನಿಸುವುದು ತುಟಿ ಬಿಚ್ಚಿದಾಗ. ಅದು ಸಾಧ್ಯವಾಗುವುದು ಹಲ್ಲುಗಳು ಸುಂದರವಾಗಿರುವಾಗ..........**



**ಬೆ**ಳಗಿನಿಂದ ಸಂಜೆಯವರೆಗೆ, ದೂರದರ್ಶನ ಗಳಲ್ಲಿ ಹಲವಾರು ಜಾಹೀರಾತುಗಳು, ಹಲ್ಲುಪುಡಿ, ಪೇಸ್ಟು, ಬ್ರಷ್‌ಗಳ ಬಗ್ಗೆ ತಮ್ಮದೇ ರೀತಿಯಲ್ಲಿ 'ತಾವೇ ಶ್ರೇಷ್ಠ' ಎಂದು ಕೊಚ್ಚಿಕೊಳ್ಳುವುದನ್ನು ನೋಡುತ್ತೀವಷ್ಟೆ?

ಅವರ ಭರವಸೆ; ಸುಂದರವಾಗಿ, ಆರೋಗ್ಯವಾಗಿ ಫಳಫಳನೆ ಬೆಳ್ಳಗೆ ಹೊಳೆಯುವ ಹಲ್ಲುಗಳದೇ ಆಗಿದೆ. 'ಬೆಳ್ಳಗಿನ', 'ಹೊಳೆವ' ಹಲ್ಲುಗಳ ಬಗ್ಗೆ ಅತಿಹೆಚ್ಚಿನ ಒತ್ತು ಬೀಳುವುದನ್ನು ನಾವೆಲ್ಲ ಗಮನಿಸಬಹುದು. ಹಾಗಾದರೆ, ಹಲ್ಲು 'ಬೆಳ್ಳ'ಗಿರುವುದೇ ಆರೋಗ್ಯದ ಸಂಕೇತವೂ ಹೌದೆ?

'ಅದು ಹಾಗೇ ಎಂದೇನೂ, ಇಲ್ಲ' ಎನ್ನುತ್ತದೆ ದಂತವಿಜ್ಞಾನ.

ನಿಜ ಏನೆಂದರೆ, 'ಹಿಟ್ಟಿನಂತೆ ಬೆಳ್ಳಗಿರುವ' ಹಲ್ಲುಗಳು ಆರೋಗ್ಯಪೂರ್ಣವೇನೂ ಆಗಿರುವುದಿಲ್ಲ. ಹಲ್ಲುಗಳ ಮೇಲ್ಪದರ 'ಎನಾಮೆಲ್' ಎಂಬುದು ೧ ರಿಂದ ೨೧/೨ ಮಿ.ಮೀ. ದಪ್ಪವಿದ್ದು, ಪಾರದರ್ಶಕ ಗುಣವನ್ನು ಉಳ್ಳದ್ದಾಗಿದೆ. ಆದ್ದರಿಂದ ಈ ಮೇಲ್ಪದರದ ಮೂಲಕ ಎರಡನೇ ಪದರವಾದ 'ಡೆಂಟಿನ್' ತನ್ನ ತೆಳುಹಳದಿ ಬಣ್ಣವನ್ನು ತೋರಿಸುತ್ತದೆ. ಆದ್ದರಿಂದ ತೆಳುಹಳದಿ ಬಣ್ಣದ ಹಲ್ಲುಗಳು ಸಹಜ, ಆರೋಗ್ಯಪೂರ್ಣ ಹಲ್ಲುಗಳನ್ನು ಸೂಚಿಸುತ್ತದೆ. ಇದರ ವರ್ಣಗಾಢತೆ ಮಾತ್ರ ಮನುಷ್ಯನಿಂದ ಮನುಷ್ಯನಿಗೆ ಬೇರೆ ಬೇರೆ ಇರಬಹುದು. ಆದರೆ ಹಲ್ಲುಗಳು ಗಾರೆ ಯಂತಹ, ಕಿಟ್ಟದ ಕಾರಣ, ಹಳದಿಯಾಗಿದ್ದಲ್ಲಿ ಅದು 'ಅಸಹಜ'ವೆನಿಸುತ್ತದೆ.

ಆದರೆ, ಒಟ್ಟಾರೆಯಾಗಿ ಹಲವು ಕಾರಣಗಳಿಂದ ಹಲ್ಲುಗಳು ತಮ್ಮ 'ಸಹಜ' ಎನ್ನುವ ಬಣ್ಣಕ್ಕಿಂತ ಪೂರ್ತಿ ಬೇರೆಯಾಗಿ, ಹಳದಿ, ಹಸಿರು, ಕಂದು, ಕಪ್ಪುಕಂದು, ನಸುಕಂದು ಅಥವಾ ಬಿಳಿಯ ರೇಖೆಗಳಂತೆ, ಕಾಣಿಸಿಕೊಂಡರೆ, ಅದು ಖಾಯಿಲೆ, ತೊಂದರೆ ಅಥವಾ ಕಡಿಮೆ ಸ್ವಚ್ಛತೆಯ ಕಾರಣದಿಂದ ಎಂದು ತಿಳಿಯಬೇಕು. ಅಂತಹ ಸಂದರ್ಭದಲ್ಲಿ ದಂತವೈದ್ಯಕೀಯದ ಸಹಾಯ ಪಡೆದುಕೊಳ್ಳುವುದು ಸೂಕ್ತ.

ಬಣ್ಣಗೆಟ್ಟ ಹಲ್ಲಿರುವವರು ಸಾಮಾಜಿಕ ಕೀಳರಿಮೆಯಿಂದ ಕೊರಗುತ್ತಾರೆ. ಬಾಯಿ ತೆರೆಯಲೇ ಹಿಂಜರಿಯುತ್ತಾರೆ. ಇತರರು ಕೂಡ ಅವರನ್ನು 'ಕೀಸುಹಲ್ಲಿನವ', 'ಹಳದಿ ಹಲ್ಲಿನವ', 'ಕೊಳಕು ಹಲ್ಲಿನವ' ಎಂಬ ವಿಶೇಷಣಗಳನ್ನುಪಯೋಗಿಸಿ ಹೆಸರಿಸುತ್ತಾರೆ. ಕಿಟ್ಟದ ಕಾರಣ ಹಲ್ಲಿನ ಬಣ್ಣ ಕೆಡುವಷ್ಟು ಕಡಿಮೆ ಕಾಳಜಿಯಿರುವ ಮಂದಿ ಹಲವು ವಸಡಿನ ಖಾಯಿಲೆಗಳಿಂದಲೂ ನರಳುತ್ತಿರುತ್ತಾರೆ. ಆದ್ದರಿಂದ 'ಹಲ್ಲು ಬಣ್ಣಗೆಡುವುದೇಕೆ?' ಎಂದು ತಿಳಿದುಕೊಂಡು, ಸಾಮಾಜಿಕವಾಗಿ ಪ್ರದರ್ಶಿಸಬಲ್ಲಂತಹ ಬಣ್ಣ, ರೂಪದ ಹಲ್ಲುಗಳನ್ನು ದಂತ ವೈದ್ಯರಿಂದ ಪಡೆದುಕೊಂಡು ಈ ಕೊರತೆಗಳನ್ನು ನಿವಾರಿಸಿಕೊಳ್ಳಬಹುದು.

ನಿಮ್ಮ ಹಲ್ಲೇಕೆ ಕೆಲವು ಬಾರಿ ತನ್ನ ಸಹಜ ಬಣ್ಣವನ್ನು ಕಳೆದುಕೊಳ್ಳುವುದು? ಇದಕ್ಕೆ ಎರಡು ಕಾರಣಗಳಿರುತ್ತವೆ.

★ ಹಲ್ಲಿನ ವಸ್ತುವಿನಲ್ಲೇ ಹಲವು ಮಾರ್ಪಾಡುಗಳು, ಹಲ್ಲಿನ ಬೆಳೆಯುವ ಮತ್ತು ನಂತರದ ಹಂತಗಳಲ್ಲಿ ಕಾಣಿಸಬಹುದು. ಇವು ಒಳಗಿನ ಕಾರಣಗಳು.

★ ಸಹಜ ಹಲ್ಲಿನ ಮೇಲೆ ಶೇಖರವಾಗುವ ಕೆಲವು ವಸ್ತುಗಳಿಂದ ಹಲ್ಲು ತನ್ನ ಸಹಜ ವರ್ಣ ಕಳೆದುಕೊಳ್ಳಬಹುದು. ಇವು ಹೊರಗಿನ ಕಾರಣಗಳು .

ಇವುಗಳ ಬಗ್ಗೆ ತಿಳಿದುಕೊಳ್ಳೋಣ.

◆ ◆ ◆

ಹಲ್ಲಿನ ಪದಾರ್ಥದಲ್ಲೇ ಆಗುವ ಬದಲಾವಣೆಗಳ ಬಗ್ಗೆ ಮೊದಲು ತಿಳಿದುಕೊಳ್ಳೋಣ.

**ಹುಳುಕಲ್ಲು :** ಇದೊಂದು ಸಾಮಾನ್ಯವಾಗಿ ಕಂಡುಬರುವ ಕಾರಣವಾಗಿದೆ. ಹಲ್ಲುಗಳಿಗೆ ಸೋಂಕು ತಗುಲಿ, ಅದು ಮಿಣಜೀವಿಗಳ ಚಟುವಟಿಕೆಯಿಂದಾಗಿ, ನಿಧಾನವಾಗಿ ಕರಗತೊಡಗುತ್ತದೆ. ಈ ಹಂತದಲ್ಲಿ ಹಲ್ಲಿನ ಪದಾರ್ಥ ಕಪ್ಪುಬಣ್ಣಕ್ಕೆ ತಿರುಗಿ, ಹುಡಿ, ಹುಡಿಯಾಗಿ, ನಷ್ಟವಾಗತೊಡಗುತ್ತದೆ. ಹಲ್ಲಿನ ಅಗಿಯುವ ಮೈಗೆ ಅತಿಸಾಮಾನ್ಯವಾಗಿ ಸೋಂಕು ತಗುಲುತ್ತದೆ. ಆದರೆ, ಹಲ್ಲಿನ ಮುಖಭಾಗದಲ್ಲೂ ಹುಳುಕನ್ನು ನಾವು ಕಾಣಬಹುದು. ಹುಳುಕು ಹಲ್ಲಿನ ಭಾಗ ಎಲ್ಲೇ ಇರಲಿ ಅದು ಕಪ್ಪಗೆ, ಅಸಹಜ ಕುಳಿಗಳಂತೆ ಕಾಣಿಸುತ್ತದೆ.

ಈ ರೀತಿಯಲ್ಲೇನಾದರೂ ನಿಮ್ಮ ಹಲ್ಲು ಬಣ್ಣಕಳೆದುಕೊಳ್ಳುತ್ತಿದ್ದಲ್ಲಿ, ಕೂಡಲೆ ವೈದ್ಯರಿಗೆ ತೋರಿಸಿಕೊಳ್ಳುವುದೊಳಿತು.

**ಅಪಘಾತಗಳು :** ಆಕಸ್ಮಿಕವಾಗಿ ಅಪಘಾತಗಳಾಗಿ ನಿಮ್ಮ ಹಲ್ಲುಗಳಿಗೆ ಪೆಟ್ಟುಬೀಳಬಹುದು. ಹೊರನೋಟಕ್ಕೆ ಗಾಯಗಳಾಗಿ ರಕ್ತ ಬರದಿದ್ದರೂ, ಹಲ್ಲಿಗೆ ನೋವಾಗಿ, ಹಲ್ಲಿನ ಮೃದುವಾದ ಅಂಗಾಂಶದಲ್ಲಿ ರಕ್ತಸ್ರಾವವಾಗಿ ಅದು ಹಲ್ಲಿನ ಡೆಂಟಿನ್ ಪದರದ ಸಣ್ಣ ಸಣ್ಣ ನಾಳಗಳನ್ನು ಸೇರಿ ಹೆಪ್ಪುಗಟ್ಟಬಹುದು. ಅರೆಪಾರದರ್ಶಕ ಎನಾಮೆಲ್ ಮೂಲಕ, ಈ ಕಾರಣ, ಹಲ್ಲು ಕಂದು

ವರ್ಣಕ್ಕೆ ತಿರುಗಿದಂತೆ ಕಾಣುತ್ತದೆ.

ಇದು ಹಲ್ಲಿನ ಜೀವಂತಿಕೆ ಹಾಳಾದ ಲಕ್ಷಣವಾಗಿರುತ್ತದೆ. (ಸಾಮಾನ್ಯವಾಗಿ)

**ಒಳಗೊಳಗಿನ ಹುಳುಕು :** ಹಲ್ಲುಗಳ ಮೇಲ್ಮೈಯಲ್ಲಿ ಹುಳುಕು ಕಾಣಿಸಿಕೊಂಡ ನಂತರ, ಒಳಪದರಗಳಿಗೆ ಅದು ಹರಡುವುದು ಸಾಮಾನ್ಯವಾಗಿ ನಡೆಯುವ ರೀತಿ. ಆದರೆ, ಹಲವು ಬಾರಿ ಹಲ್ಲಿನ ಹೊರಮೇಲ್ಮೈ ಪೂರ್ತಿ ಆರೋಗ್ಯಕರವಾಗಿ ಕಂಡು ತನ್ನ ಸಹಜರೂಪಿನಿಂದ ಕಂಡರೂ, ಹೇಗೋ ಒಳಪದರಗಳಲ್ಲೇ ಹುಳುಕು ಆರಂಭವಾಗಿಬಿಟ್ಟಿರುತ್ತದೆ.

ಆದಕಾರಣ ಹಲ್ಲು ಎನಾಮೆಲ್ ಮೂಲಕ ಕಂದುವರ್ಣಕ್ಕೆ ತಿರುಗುತ್ತಿರುವಂತೆ ಕಾಣಬಹುದು. ಹಲ್ಲು ಬಣ್ಣ ಕಳೆದುಕೊಳ್ಳಲು ಇದೂ ಕಾರಣವಾಗುತ್ತದೆ.

ಕೆಲವು ಬಾರಿ, ದೇಹದ ನೈಸರ್ಗಿಕ ರೋಗ ನಿರೋಧಕತೆ, ಒಳಗಿನ ಹುಳುಕಿನ ಸತತ ಕಿರಿಕಿರಿಯನ್ನು ತಾಳಲಾರದೆ, ಮೃದುವಾದ ಅಂಶ ಪಲ್ಪ್, ಹೆಚ್ಚು ಹೆಚ್ಚು ಸ್ಪಂದಿಸುವಂತೆ ಪ್ರಚೋದಿಸುತ್ತದೆ. ಹಾಳಾದ ಭಾಗವನ್ನು ಮತ್ತೆ ಸರಿಮಾಡಲು ದೇಹ ಸಜ್ಜಾಗುತ್ತದೆ. ಹೊಸದಾದ ಮೃದ್ವಂಶ ಪಲ್ಪ್‌ದಿಂದ ಬೆಳೆಯುತ್ತದೆ. ಅದರ ವರ್ಣ, ಎನಾಮೆಲ್ ಮೂಲಕ ತಿಳಿಗುಲಾಬಿ ಬಣ್ಣವನ್ನು ತೋರಬಹುದು. ಈ ಸಂದರ್ಭದಲ್ಲಿ ಕೂಡ ಕಾಳಜಿ ವಹಿಸಿ, ಕೂಡಲೇ ದಂತವೈದ್ಯರಲ್ಲಿ ಚಿಕಿತ್ಸೆಗೆ ಹೋಗುವುದು ಒಳಿತು.

**ಟೆಟ್ರಾಸೈಕ್ಲಿನ್ ಕರೆ :** ಟೆಟ್ರಾಸೈಕ್ಲಿನ್ ಎಂಬುದು ಒಂದು ಔಷಧ. ಮಗು ತನ್ನ ಗರ್ಭದಲ್ಲಿದ್ದು, ಹಲ್ಲಿನ ಮೊಗ್ಗುಗಳು ಮೂಡುವ ಹಂತದಲ್ಲಿದ್ದಾಗ, (ದವಡೆಯ ಮೂಳೆಯಲ್ಲಿ) ತಾಯಿ ಆಕಸ್ಮಿಕವಾಗಿ ಈ ಬಹು ಜೀವನಿರೋಧಕ ಔಷಧಿಯನ್ನು ಸೇವಿಸಿದಲ್ಲಿ, ಮಗುವಿನ ಹಲ್ಲಿನ ಮೊಗ್ಗುಗಳು ಈ ಔಷಧಿಯ ಪ್ರಭಾವಕ್ಕೆ ಒಳಗಾಗಿ ಬಾಯಲ್ಲಿ ಕಾಣಿಸಿಕೊಂಡ ನಂತರ ಬೇರೆಯದೇ ಬಣ್ಣ ತೋರಬಹುದು.

ಇದನ್ನು ಎಷ್ಟೇ ಉಜ್ಜಿದರೂ, ತೊಳೆದರೂ ಹೋಗುವುದಿಲ್ಲ, ಏಕೆಂದರೆ ಅದು ಕೊಳೆಯೇನೂ ಆಗಿರುವುದಿಲ್ಲ.

**ಫ್ಲೋರೋಸಿಸ್ :** ಇದೊಂದು ತೊಂದರೆ. ನೀರಿನ ಮಿಲಿಯ ಕಣಗಳಿಗೆ ೧ ಕಣದಷ್ಟು ಫ್ಲೋರೈಡ್ ಅಂಶ ಇದ್ದರೆ, ಅಷ್ಟು ದೇಹಕ್ಕೆ ಸಾಕಾತ್ತದೆ. ಕೆಲವೊಮ್ಮೆ ಈ ಪ್ರಮಾಣ ಜಾಸ್ತಿಯಾಗಿ, ಫ್ಲೋರೋಸಿಸ್ ತೊಂದರೆ ಕಾಣಿಸಿಕೊಳ್ಳುತ್ತದೆ. ಇದು ಹಲ್ಲಿನ ಪದಾರ್ಥವನ್ನು ಶಿಥಿಲಗೊಳಿಸುವುದರ ಜೊತೆ ಅದರ ಬಣ್ಣವನ್ನೂ ಹಾಳುಗೆಡುವುತ್ತದೆ. ಹಲ್ಲು ಅತಿಬಿಳಿ, ಹಿಟ್ಟಿನಂತಹ ಬಿಳಿ, ನಸುಹಳದಿ, ಹಳದಿ, ನಸುಕಂದು, ಕಂದು ಮತ್ತು ಕಪ್ಪುಕಂದು ಬಣ್ಣಗಳನ್ನು ತೋರಿಸುತ್ತದೆ. ಕೆಲವು ಬಾರಿ ಅದು ಪಟ್ಟಿಗಳ ರೂಪದಲ್ಲೂ ಕಾಣಿಸಿಕೊಳ್ಳಬಹುದು.

ಈ ಹಲ್ಲುಗಳು ನೋಡಲು ಅನಾಕರ್ಷಕವಾಗಿ ಕಾಣುವುದಲ್ಲದೇ, ಅತಿಬೇಗನೆ, ಸವೆತಕ್ಕೂ ಒಳಗಾಗಬಹುದು. ಇದೊಂದು ಗಂಭೀರ ಸಮಸ್ಯೆಯಾಗಬಹುದು.

◆ ◆ ◆

ಹಲ್ಲುಗಳು ಬಣ್ಣ ಕಳೆದುಕೊಳ್ಳಲು ಮೇಲೆ ಹೇಳಿದ ಕಾರಣಗಳ ಜೊತೆ ಕೆಲವು ಸ್ಥೂಲ ಕಾರಣಗಳೂ ಇವೆ. ಇವು ಮುಖ್ಯವಾಗಿ ಮನುಷ್ಯನ ಹವ್ಯಾಸ ಮತ್ತು ಸ್ವಚ್ಛತಾಕ್ರಮಗಳನ್ನು ಅವಲಂಬಿಸಿ ಕಾಣಿಸಿಕೊಳ್ಳುತ್ತವೆ.

ಉದಾಹರಣೆ,

**ಅಡಿಕೆ ಎಲೆಯ ಹವ್ಯಾಸ :** ಬಹುಕಾಲದಿಂದ ದಿನದಲ್ಲಿ ಹಲವು ಬಾರಿ ಅಡಿಕೆ ಎಲೆ ಜಗಿಯುವ ಮಂದಿಯ ಹಲ್ಲುಗಳು ಎಲ್ಲರೂ ನೋಡುವಂತಹ ಅಡಿಕೆಯ ಕರೆಯಿಂದ ಮುಚ್ಚಿಹೋಗಿರುತ್ತವೆ. ಸಾಮಾನ್ಯವಾದ ಹಲ್ಲುಜ್ಜುವಿಕೆಯಿಂದ ಈ ಕರೆಗಳು ಹೋಗುವುದಿಲ್ಲ.

ನಕ್ಕರೆ, ಕಪ್ಪಗೆ ಕಾಣುವ ಈ ಹಲ್ಲುಗಳು ನಿಮಗಿರುವ ಅನಾರೋಗ್ಯಕರ ಅಭ್ಯಾಸಗಳ ಬಗ್ಗೆ ಜಾಹೀರಾತು ನೀಡುತ್ತವೆ !! ಹಲ್ಲುಗಳ ಜೊತೆ ಅಂಗಳ, ನಾಲಿಗೆ, ಒಳಕೆನ್ನೆ ಎಲ್ಲವೂ ತಮ್ಮ ಸಹಜ ವರ್ಣ ಕಳೆದುಕೊಂಡು ಅಸಹ್ಯವಾಗಿ ಕಾಣುತ್ತವೆ.

ವ್ಯಕ್ತಿಯ ವರ್ಚಸ್ಸು ಎಷ್ಟೇ ಇದ್ದರೂ, ಆತನ ಇಂಥ ಹವ್ಯಾಸಗಳು ಆತನನ್ನು ಕಾರ್ಟೂನು ಚಿತ್ರವನ್ನಾಗಿಸಿಬಿಡುತ್ತದೆ.

ಬುಸ್ಸೆಂದು ಹೊಗೆಬಿಡುತ್ತಲೇ ಇರುವ, ಸದಾ ಎಲೆ ಅಡಿಕೆ ಜಗಿಯುವ, ಮದ್ಯಪಾನ ಮಾಡುವ ವ್ಯಕ್ತಿಗಳು ಸಾಮಾಜಿಕವಾಗಿ ಕೀಳುಜನರೆಂದೇ ಗುರ್ತಿಸಲ್ಪಡುತ್ತಾರೆ. ಇದರಿಂದ ಹೆಸರುಗೆಟ್ಟರೆ, ಇದೇ ಅಭ್ಯಾಸಗಳ ಕಾರಣ ಹಲ್ಲಿನ ಅಂದ ಮತ್ತು ಬಣ್ಣಗಳೂ ಕೆಡುತ್ತವೆ.

ಅಡಿಕೆಯಲ್ಲಿನ ರಾಸಾಯನಿಕದಿಂದಾಗಿ ಹಲ್ಲು ಕರೆಗಟ್ಟುತ್ತವೆ. ಕೊನೆಗೆ ಅವುಗಳ ಬಣ್ಣ ಮಾಯವಾಗಿಬಿಡುತ್ತದೆ. ಹೇಳಲೇ ಆಗದಂತಾಗುತ್ತದೆ. ಹಲ್ಲುಗಳು ನಸುಗಂದು, ಕಂದು, ಕಪ್ಪು ಬಣ್ಣ ಪಡೆಯುತ್ತವೆ.

ಧೂಮವ್ಯಸನಿಗಳಲ್ಲಿ ಕೂಡ ಹಲ್ಲುಗಳು ಕರೆಗಟ್ಟುತ್ತವೆ. ಇವು ಸಾಧಾರಣ ಶುಚಿಗೊಳಿಸುವ ವಿಧಾನಗಳಿಂದ ಎಂದಿಗೂ ಹೋಗಲಾರವು. ವಸಡು, ಅಂಗಗಳು ಕೂಡ ಬೆಂದಂತಾಗಿ, ಬಣ್ಣಗೆಡುತ್ತವೆ. ಬಾಯಿಂದ ಸದಾ ವಾಸನೆ ಬರುತ್ತದೆ. ದೀರ್ಘಕಾಲದಲ್ಲಿ ಗಂಭೀರ ಪರಿಣಾಮಗಳಿಗೆ ಎಡೆಮಾಡಿಕೊಡುತ್ತದೆ.

ಸರಿಯಾಗಿ ಹಲ್ಲುಜ್ಜದೆ, ಒಂದಷ್ಟು ಕೀವು ಹಲ್ಲಿನ ಮೇಲೆ ಉಳಿಯುವಂತಾದರೆ, ಅದು ಕ್ರಮೇಣ ಲವಣೀಕೃತಗೊಂಡು ಕಲ್ಲಿನಂತಾಗುತ್ತದೆ. ಅದು ಕೂಡ ಸಾಧಾರಣ ಹಲ್ಲುಜ್ಜುವಿಕೆಯಿಂದ ಹೋಗಲಾರದು. ಅದನ್ನು ಗಾರೆ, ಕಿಟ್ಟ, ಎಂದು ಕರೆಯುತ್ತೇವೆ. ಇದು ಹಳದಿ, ಹಸಿರು, ಕಂದು ಯಾವುದೇ ಬಣ್ಣವನ್ನು ಹೊಂದಿರಬಹುದು. ಇಂತಹ ವ್ಯಕ್ತಿಗಳ ಬಾಯಿ ದುರ್ವಾಸನೆಯಿಂದ ಕೂಡಿರುತ್ತದೆ. ವಸಡುಗಳು ರೋಗದಿಂದ ನರಳುತ್ತಿರುತ್ತವೆ.

ಹಲ್ಲು ಮತ್ತು ವಸಡು ಎರಡೂ ತಮ್ಮ ಸ್ವಂತ ಬಣ್ಣ ಕಳೆದುಕೊಂಡಿರುತ್ತವೆ. ಇದಕ್ಕೂ ತನ್ನದೇ ಆದ, ಮುಂದುವರಿದ, ಗಂಭೀರ ಪರಿಣಾಮಗಳಿವೆ.

ವೈದ್ಯರು ಕೂಡ, ಕೆಲವೊಮ್ಮೆ ಮಾಡುವ ತಾಂತ್ರಿಕ ದೋಷಗಳಿಂದಲೂ ಸಹ, ವಿರಳವಾಗಿ, ಹಲ್ಲುಗಳು, ಚಿಕಿತ್ಸೆಯ ಸಂದರ್ಭದಲ್ಲಿ ತಮ್ಮ ಸಹಜ ವರ್ಣವನ್ನು ಕಳೆದುಕೊಳ್ಳಬಹುದು.

ಕೊನೆಯ ಕಾರಣಕ್ಕೆ ಮಾತ್ರ ವೈದ್ಯರೇ ಜವಾಬ್ದಾರಿ ಹೊತ್ತು ಅದನ್ನು ಸರಿಪಡಿಸಬೇಕಾದೀತು. ಆದರೆ, ನಾನಾ ಕಾರಣಗಳಿಂದ ಹಲ್ಲುಗಳು ತಮ್ಮ ಬಣ್ಣ ಕಳೆದುಕೊಳ್ಳಬಹುದಾದ, ಇತರ ಸಾಧ್ಯತೆಗಳೇ ಹೆಚ್ಚು.

ಮೇಲೆ ತಿಳಿಸಿದಂತಹ ಎಲ್ಲ ಸಮಸ್ಯೆಗಳಿಗೆ, ದಂತವೈದ್ಯರ ಬಳಿ ಪೂರ್ತಿ ಅಥವಾ ತಕ್ಕಮಟ್ಟಿಗಿನ ಪರಿಹಾರ ಇದೆ. ಜೊತೆಗೆ, 'ಹೊರಗಿನ' ಕಾರಣಗಳಿಗೆ, ಜವಾಬ್ದಾರಿ ನಮ್ಮದೇ. ಅಂತಹ ಸಮಸ್ಯೆಗಳಿಗೆ ಪರಿಹಾರ ಕೂಡ ನಮ್ಮ ಬಳಿಯೇ ಇದೆಯಲ್ಲವೇ ?

ಸ್ವಚ್ಛತೆಗೆ ಆದ್ಯತೆ ನೀಡಿ, ಆರೋಗ್ಯಕರವಾದ ಹವ್ಯಾಸಗಳನ್ನು ಮಾತ್ರ ಬೆಳೆಸಿಕೊಳ್ಳುವುದರಿಂದ ಲಾಭವೂ ನಮಗೇ ತಾನೇ ?

ಸಮಸ್ಯೆ ಏನೇ ಇರಲಿ, ನಿಮ್ಮ ಹಲ್ಲುಗಳು ಬಣ್ಣಗೆಟ್ಟಲ್ಲಿ, ನಿಮ್ಮಲ್ಲಿ ಸಾಮಾಜಿಕ ಕೀಳರಿಮೆ ಮನೆ ಮಾಡಲು ಬಿಡದೆ, ಉತ್ತಮ ದಂತವೈದ್ಯರ ಬಳಿ ಹೋಗಿ ಸಮಸ್ಯೆಗೆ ಕಾರಣ, ಪರಿಹಾರ, ಸಲಹೆ, ಸಮಾಧಾನಗಳನ್ನು ಪಡೆಯಿರಿ.

ಅವರು ಫಿಲ್ಲಿಂಗ್, ಕ್ಯಾಪಿಂಗ್, ವೆನೀರಿಂಗ್, ಬ್ಲೀಚಿಂಗ್, ಸ್ಕೇಲಿಂಗ್ ಮತ್ತಿತರ ವಿಧಿ, ವಿಧಾನಗಳಿಂದ ನಿಮ್ಮ ಹಲ್ಲಿಗೆ ಅದರ ಸಹಜ ಬಣ್ಣವನ್ನು ಕೃತಕವಾಗಿ ಅಥವಾ ಸಹಜವಾಗಿ ಬರುವಂತೆ ಮಾಡಬಲ್ಲರು.

ಆ ನಂತರ, ನಿಮ್ಮ ನಗೆಗೆ ಕಡಿವಾಣ ಎಂದೂ ಬೀಳದು.



ಡಾ । ನಾ ಸೋಮೇಶ್ವರ

# ಉಭಯ ಕುಶಲೋಪರಿ



ಮುನ್ನೆಚ್ಚರಿಕೆ ಪ್ರತಿಯೊಬ್ಬರಿಗೂ ಬೇಕು. ಆತ ವೈದ್ಯನಿರಲಿ, ಸಾಮಾನ್ಯನಿರಲಿ, ಬಡವನಿರಲಿ, ಬಲ್ಲದನಿರಲಿ ರೋಗವೆನ್ನುವುದು, ಸೋಂಕೆನ್ನುವುದು ಎಲ್ಲರಿಗೂ ಅಪಾಯಕಾರಿಯಾದದ್ದು. ಅದು ಯಾರಿಗೂ ತಾರತಮ್ಯ ತೋರುವುದಿಲ್ಲ.

# ಏಡ್ಸ್ ತಡೆಗಟ್ಟಲು 'ಪೆಪ್ಸ್' ಚಿಕಿತ್ಸೆ

**ಪ್ರಕರಣ ೧ :**

ಆಧುನಿಕ ಉಡುಪನ್ನು ಧರಿಸಿದ ಸುಂದರ ಯುವತಿ. ನೇರವಾಗಿ ಆಸ್ಪತ್ರೆಗೆ ಬಂದಳು. ಎರಡು ಗಂಟೆಗಳ ಹಿಂದೆ ತಾನು ಹಠಸಂಭೋಗಕ್ಕೆ (ರೇಪ್) ಒಳಗಾಗಿರುವುದಾಗಿ ಹೇಳಿದಳು. ಆಕೆಯ ಮೇಲೆ ಹಲ್ಲೆ ನಡೆಸಿದವರು ಅಪರಿಚಿತರು. ನೋಡುವುದಕ್ಕೆ ರೌಡಿಗಳ ಹಾಗಿದ್ದರು. ಕುಡಿದಿದ್ದರು. ಅವರು ಹೆಚ್.ಐ.ವಿ. ಹೊಂದಿರಬೇಕೆಂದು ಆಕೆಯ ಗುಮಾನಿ. ಅವರಿಂದ ತನಗೂ ಆ ಮಾರಕ ಸೋಂಕು ಅಂಟಿರಬಹುದು ಎಂದು ಆಕೆಯ ಅನಿಸಿಕೆ. ಹೇಗಾದರೂ ಮಾಡಿ ಆ ಸೋಂಕು ತನಗೆ ಅಂಟದಂತೆ ಕಾಪಾಡಿ ಎಂದು ಆಕೆ ವೈದ್ಯರಲ್ಲಿ ಮೊರೆಯಿಟ್ಟಳು.

**ಪ್ರಕರಣ ೨ :**

ಗಂಡ ಮುಂಬಯಿಯಲ್ಲಿ ಕೆಲಸ ಮಾಡುತ್ತಿದ್ದನು. ಸಂಸಾರ ಬೆಂಗಳೂರಿನಲ್ಲಿತ್ತು. ಹಾಗಾಗಿ ಮುಂಬಯಿಯ ಕೆಂಪು ಪ್ರದೇಶಗಳ ಭೇಟಿಯ ಫಲವಾಗಿ ಅವನಿಗೆ ಹೆಚ್‌ಐವಿ ಸೋಂಕು ಅಂಟಿಕೊಂಡಿತು. ವಿಷಯ ಅವನಿಗೆ ತಿಳಿದ ಮೇಲೆ ಬೆಂಗಳೂರಿಗೆ ಬಂದುಬಿಟ್ಟನು. ಹೆಂಡತಿಗೂ ವಿಷಯ ತಿಳಿಯಿತು. ಅವರು ವೈದ್ಯರನ್ನು ಭೇಟಿಯಾದರು. ಗಂಡನಿಂದ ಹೆಂಡತಿಗೆ ಸಂಭೋಗದ ಮೂಲಕ ಸೋಂಕು ಹರಡಬಾರದೆಂದರೆ ಪ್ರತಿಸಲ ಅವನು ಕಾಂಡಂ ಧರಿಸಲೇಬೇಕೆಂದು ಹೇಳಿದರು. ಹಾಗೆಯೇ ಅವರು ಪಾಲಿಸುತ್ತಿದ್ದರು. ಆದರೆ ಮೊನ್ನೆ ಒಂದು ಸಲ ಸಂಭೋಗದ ಭರದಲ್ಲಿ ಕಾಂಡಂ ಹರಿದುಹೋಗಿ, ವೀರ್ಯ ಯೋನಿಯೊಳಗೆ ಚೆಲ್ಲಿಬಿಟ್ಟಿತು! ಮರುದಿವಸವೇ ಆಕೆ ವೈದ್ಯರಲ್ಲಿಗೆ ಓಡಿಬಂದಳು. ಗಂಡನಿಂದ ತನಗೆ ಸೋಂಕು ಬರಬಹುದಾದ ಸಾಧ್ಯತೆಯಿರುವುದರಿಂದ ಹೇಗಾದರೂ ಮಾಡಿ ನನ್ನನ್ನು ಕಾಪಾಡಿ ಎಂದು ವೈದ್ಯರ ಕಾಲುಗಳನ್ನು ಹಿಡಿದುಕೊಂಡುಬಿಟ್ಟಳು.

**ಪ್ರಕರಣ ೩ :**

ಅವನು ಸಾಮಾನ್ಯವಾಗಿ ಹೆಚ್ಚಿಗೆ ಕುಡಿಯುವುದಿಲ್ಲ. ಆದರೆ ಅಂದು ಬೋನಸ್ ಬಂದಿತ್ತು. ಗೆಳೆಯರೆಲ್ಲ ಸೇರಿದ್ದರು. ರಾತ್ರಿ ಹನ್ನೆರಡರವರೆಗೆ ಗುಂಡಿನ ಪಾರ್ಟಿ ನಡೆಯಿತು. ಕೊನೆಯಲ್ಲಿ ಯಾರೋ ಮದಿರೆಯೊಡನೆ ಮಾನಿನಿಯೂ ಇದ್ದರೆ ಹೇಗೆ ಎಂದು ಆಸೆ ಹುಟ್ಟಿಸಿದರು. ಇನ್ಯಾರೋ ಫೋನ್ ಮಾಡಿದ ಅರ್ಧಗಂಟೆಯೊಳಗೆ ಬೆಲೆವೆಣ್ಣುಗಳು ಮಾರುತಿವ್ಯಾನಿನಲ್ಲಿ ಇವರಿದ್ದೆಡೆಯೇ ಬಂದರು. ಮುಂದಿನ ಬೆಳವಣಿಗೆ ತಿಳಿದಿರುವಂತಹದ್ದೆ !... ಮರುದಿನ ಬೆಳಗಾಗುತ್ತಿರುವಂತೆಯೇ ಅವನು ವೈದ್ಯರ ಬಳಿಗೆ ಓಡೋಡಿ ಬಂದನು ''ಡಾಕ್ಟ್ರೆ... ಅಪರಿಚಿತರೊಡನೆ ಸಂಭೋಗಿಸಬೇಕಾದಂತಹ ಪ್ರಸಂಗ ಬಂದಾಗ ಕಾಂಡಂ ಧರಿಸಲೇಬೇಕು ಅಂತ ನೀವು ಹೇಳಿದ್ರಿ. ಆದ್ರೆ ನಿನ್ನೆ ರಾತ್ರಿಕುಡಿದ ನಿಶೆಯಲ್ಲಿ ಕಾಂಡಂ ಧರಿಸಲಿಲ್ಲ. ಅವರೆಲ್ಲ ಬೆಲೆವೆಣ್ಣುಗಳಾದ್ದರಿಂದ, ಅವರಿಗೆ ಹೆಚ್‌ಐವಿ ಇರಲು ಸಾಧ್ಯವಿದೆ. ಅದೇನಾದರೂ ನನಗೆ ಅಂಟಿಕೊಂಡು ಬಿಟ್ಟಿದ್ದರೆ ಹೇಗೆ ಡಾಕ್ಟ್ರೆ.... ನೀವೇ ದಾರಿ ತೋರಿಸಬೇಕು'' ಎಂದು ಮುಸಮುಸನೆ ಅಳಲಾರಂಭಿಸಿದನು.

**ಪ್ರಕರಣ ೪ :**

ಅವನೊಬ್ಬ ಹೆಚ್‌ಐವಿ ಪಾಸಿಟಿವ್ ವ್ಯಕ್ತಿ. ಅಂದು ನರ್ಸಿಂಗ್ ಹೋಂಗೆ ಬಂದನು. ಅವನ ರಕ್ತವನ್ನು ಪರೀಕ್ಷಿಸಬೇಕೆಂದು ವೈದ್ಯರು ಸೂಚಿಸಿದರು. ನರ್ಸ್ ಎಲ್ಲ ಎಚ್ಚರಿಕೆಯೊಡನೆ ರೋಗಿಯ ಮುಂದ್ಚೋಳಿನಿಂದ ರಕ್ತವನ್ನು ಸಿರಿಂಜಿನೊಳಗೆ ಎಳೆದುಕೊಂಡಳು. ಈ ರಕ್ತವನ್ನು ಔಷಧಯುಕ್ತ ಒಂದು ಪುಟ್ಟಬಾಲಿಯೊಳಗೆ ಚುಚ್ಚಬೇಕಿತ್ತು. ಸೂಜಿಯೊಳಗೆ ಏನಿತ್ತೋ ಗೊತ್ತಿಲ್ಲ. ರಕ್ತ ಒಳಗಿಳಿಯಲೇ ಇಲ್ಲ. ನರ್ಸ್

ಪಿಸ್ಟನ್ನಿನ ಮೇಲೆ ಸ್ವಲ್ಪ ಒತ್ತಡ ಹಾಕಿದಳು. ಕೂಡಲೆ ಸಿರಿಂಜಿನಿಂದ ಸೂಜಿ ಬೇರ್ಪಟ್ಟಿತು. ರಕ್ತ ಪಟ್ಟನೆ ಚಿಮ್ಮಿತು. ಚಿಮ್ಮಿದ ರಕ್ತ ನರ್ಸಿನ ಕಣ್ಣುಗಳಿಗೆ ಹಾರಿತು. ಕೂಡಲೆ ಆಕೆ ಸಿರಿಂಜು ಬಾಟಲಿಗಳನ್ನು ಎಸೆದು ನಲ್ಲಿಯೆಡೆಗೆ ಓಡಿದಳು. ನೀರನ್ನು ಎರಚಿ ಎರಚಿ ಮುಖ ತೊಳೆದಳು. ಅಲ್ಲಿಂದ ಗಡಗಡ ನಡುಗುತ್ತಾ ವೈದ್ಯರಲ್ಲಿ ಬಂದಳು. ನಡೆದ ಕಥೆ ಹೇಳಿದಳು. ಹೆಚ್‌ಐವಿ ತನಗೆ ಅಂಟಿಕೊಳ್ಳುವುದು ಖಚಿತ ! ನೀವು ಕಾಪಾಡಲೇಬೇಕು ಎಂದು ''ಡಿಮಾಂಡ್'' ಮಾಡಲಾರಂಭಿಸಿದಳು.

**PEP :**

ಮೇಲೆ ವಿವರಿಸಿದಂತಹ ಪ್ರಕರಣಗಳಲ್ಲಿ ವೈದ್ಯರು ಏನು ಮಾಡಬೇಕು ? ಹೆಚ್‌ಐವಿಗೆ ಔಷಧವಿಲ್ಲ; ಲಸಿಕೆಯೂ ಇಲ್ಲ.

ಮೊದಲ ಪ್ರಕರಣದಲ್ಲಿ ಅಪರಿಚರಿಗೆ ಹೆಚ್‌ಐವಿ ಇದ್ದಿರಬಹುದು ಅಥವಾ ಇರದಿರಬಹುದು. ಹಾಗಾಗಿ ಆ ಯುವತಿಗೆ ಸೋಂಕು ತಗಲಬಹುದೇ ಅಥವಾ ಇಲ್ಲವೇ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಎರಡನೆಯ ಪ್ರಕರಣದಲ್ಲಿ ಗಂಡನು ಹೆಚ್‌ಐವಿ ಪಾಸಿಟಿವ್ ಆಗಿದ್ದಾನೆ. ವೀರ್ಯ ಯೋನಿಯಲ್ಲಿ ಚೆಲ್ಲಿರುವುದರಿಂದ ಸೋಂಕು ಹೆಂಡತಿಗೆ ತಗಲುವುದರಲ್ಲಿ ಸಂಶಯವಿಲ್ಲ. ಮೂರನೆಯ ಪ್ರಕರಣ, ಮೊದಲನೆಯ ಪ್ರಕರಣದ ಹಾಗೆಯೇ ಇದೆ. ಆ ಚೆಲೆವೆಣ್ಣಿಗೆ ಸೋಂಕು ಇರುವ/ಇಲ್ಲದಿರುವ ಬಗೆಗೆ ಮಾಹಿತಿಯಿಲ್ಲ. ನಾಲ್ಕನೆಯ ಪ್ರಕರಣದಲ್ಲಿ ನರ್ಸ್ ಹೆಚ್‌ಐವಿ ರೋಗಿಯ ರಕ್ತ ಸಂಪರ್ಕವನ್ನು ಪಡೆದುದರಿಂದ ಆಕೆಗೂ ಸೋಂಕು ಹತ್ತಿಕೊಳ್ಳುವುದರಲ್ಲಿ ಅನುಮಾನವಿಲ್ಲ.

ಮೊದಲನೆಯ ಹಾಗೂ ಮೂರನೆಯ ಪ್ರಕರಣದಲ್ಲಿ ಸೋಂಕು ತಗುಲಿರುವ ಸಾಧ್ಯತೆಯ ಬಗ್ಗೆ ಅನುಮಾನವಿರುವುದರಿಂದ, ಅವರನ್ನು ಏಕೆ ರಕ್ತ ಪರೀಕ್ಷೆಗೆ ಒಳಪಡಿಸಬಾರದು ? ಸೋಂಕು ಹತ್ತಿರುವುದನ್ನು ಹತ್ತದಿರುವುದನ್ನು ತಿಳಿಯಬಾರದು ? ಎಂದು ಕೆಲವರ ಮನಸ್ಸಿನಲ್ಲಿ ಸಂಶಯ ಬರಬಹುದು. ಇದು ಸಾಧ್ಯವಿಲ್ಲ. ಏಕೆಂದರೆ ಸಾಮಾನ್ಯವಾಗಿ ಎಲ್ಲೆಡೆ ದೊರೆಯುವ ಹೆಚ್‌ಐವಿ ಎಲೀಸ ಅಥವಾ ವೆಸ್ಟರ್ನ್ ಬ್ಲಾಟ್ ಪರೀಕ್ಷೆಗಳು, ಸೋಂಕು ತಗುಲಿದ ೪-೬ ವಾರಗಳ ನಂತರವೇ ಫಲಿತಾಂಶವನ್ನು ಖಚಿತವಾಗಿ ನೀಡಬಲ್ಲವು. ಸೋಂಕು ಒಡ್ಡಕೆಯಾದ ದಿನ ಅಥವಾ ಮರುದಿನ, ಸೋಂಕು ಹತ್ತಿರುವ ಬಗ್ಗೆ ತಿಳಿಯಲು ಸಾಧ್ಯವಿಲ್ಲ.

ಇಂತಹ ಪ್ರಕರಣಗಳಲ್ಲಿ HIV ರೋಧಕ PEP ಕೊಡಬಹುದು ಎಂದು ತಜ್ಞರ ಅಭಿಪ್ರಾಯ. PEP ಎಂದರೆ POST EXPOSURE PROPHYLAXIS. ಇದನ್ನು ಕನ್ನಡದಲ್ಲಿ ''ಸೋಂಕು ಒಡ್ಡಿಕೆಯ ನಂತರದ ಮುನ್‌ರಕ್ಷಣಾ'' ಚಿಕಿತ್ಸೆ ಎಂದು ಕರೆಯಬಹುದು.

**ಔಷಧ :**

PEPನಲ್ಲಿ ಹೆಚ್‌ಐವಿ ರೋಧಕ ಔಷಧಗಳನ್ನು ಕೊಡುತ್ತಾರೆ. ಸೋಂಕು ಒಡ್ಡಿಕೆಯಾದ ತಕ್ಷಣ HIV ವೈರಸ್ ಪ್ರವೇಶಿಸಿದೆ ಅಥವಾ ಇಲ್ಲ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಹಾಗಾಗಿ ಸೋಂಕು ಒಡ್ಡಿಕೆಗೆ ತುತ್ತಾದ ಎಲ್ಲರಿಗೂ PEP ಕೊಡಬೇಕಾಗುತ್ತದೆ. PEP ಕೊಡುವುದರ ಸಿದ್ಧಾಂತವಿಷ್ಟೆ. HIV ಕ್ರಿಮಿ ಆಗಷ್ಟೆ ದೇಹವನ್ನು ಪ್ರವೇಶಿಸಿರುತ್ತದೆ. ಇನ್ನೂ ತಳ ಊರಿರುವುದಿಲ್ಲ. ಸಂತಾನ ವರ್ಧನೆಗೆ ಆರಂಭಿಸಿರುವುದಿಲ್ಲ. ಹಾಗಾಗಿ HIV ರೋಧಕ ಔಷಧಗಳನ್ನು ನೀಡಿದರೆ, ಆ ಔಷಧಗಳು ಕ್ರಿಮಿಗಳನ್ನು ಪೂರ್ಣವಾಗಿ ನಾಶಗೊಳಿಸಬಹುದು. ಇದು ವೈದ್ಯರ ನಿರೀಕ್ಷೆ. ಆದರೆ PEPಯನ್ನು ಪರಿಪೂರ್ಣವಾಗಿ ತೆಗೆದುಕೊಂಡ ಮೇಲೂ, ಅವನಿಗೆ ಸೋಂಕು ಹತ್ತಲಾರದು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಸಹ ವೈದ್ಯರು PEP ಉಪಯುಕ್ತ ಎಂದು ಹೇಳುತ್ತಾರೆ. ಏಕೆಂದರೆ HIV ನಿಗ್ರಹಿಸಲು ಬೇರೆ ದಾರಿಯೇ ನಮಗಿಲ್ಲ!

**ಅಧ್ಯಯನ :**

PEP ಉಪಯುಕ್ತ ಎಂಬುದನ್ನು ತೋರಿಸಲು ವಿಜ್ಞಾನಿಗಳು ಹಲವು ಅಧ್ಯಯನಗಳನ್ನು ನಡೆಸಿದ್ದಾರೆ.

★ ಮಂಗಗಳ ಎರಡು ಗುಂಪುಗಳನ್ನು ತೆಗೆದುಕೊಂಡರು. ಒಂದು ಗುಂಪಿಗೆ ವೈರಸ್‌ಗಳನ್ನು ಚುಚ್ಚಿದರು. ಚುಚ್ಚಿದ ೨೪ ಗಂಟೆಗಳ ಒಳಗೆ ಔಷಧಗಳನ್ನು ನೀಡಿದರು. ಎರಡನೆಯ ಗುಂಪಿನ ಮಂಗಗಳಿಗೆ ಪೂರ್ವಭಾವಿಯಾಗಿಯೇ ಔಷಧಗಳನ್ನು ನೀಡಿದರು. ಆ ನಂತರ ಅವುಗಳ ಒಡಲಿನೊಳಗೆ ವೈರಸ್‌ಗಳನ್ನು ಚುಚ್ಚಿದರು. ಈ ಮಂಗಗಳನ್ನು ದೀರ್ಘಕಾಲ ಗಮನಿಸಿದರು. ಅವುಗಳಿಗೆ ಸೋಂಕು ಅಂಟುವುದೇ ಎಂದು ಪರೀಕ್ಷಿಸಿದರು. ಕೊನೆಗೆ ಅಂಟುವ ಸಾಧ್ಯತೆ ಕಡಿಮೆ ಎಂದು ಮನಗಂಡರು. ರಕ್ಷಣೆಯು PEPನಲ್ಲಿ ಬಳಸಿದ ಔಷಧ ಹಾಗೂ ಸೇವನಾವಧಿಯನ್ನು ಆಧರಿಸಿರುತ್ತದೆ ಎಂದು ಸಾರಿದರು.

★ ಎರಡನೆಯ ಅಧ್ಯಯನವನ್ನು ಮನುಷ್ಯರ ಮೇಲೆ ನಡೆಸಿದ್ದಾರೆ. ಅನೇಕ HIV ಮಹಿಳೆಯರು ಗರ್ಭಿಣಿಯಾಗಿರುತ್ತಾರೆ. ಅವರಿಗೆ ವೈದ್ಯರು AZT ಎಂಬ HIV ರೋಧಕ ಔಷಧವನ್ನು ಗರ್ಭಿಣಿಯಾಗಿರುವಾಗ ಹಾಗೂ ಪ್ರಸವಾವಧಿಯಲ್ಲಿ ನೀಡಿದರು. ಮಗು ಹುಟ್ಟಿದ ಕೂಡಲೆ ಅದಕ್ಕೂ HIV ಕೊಟ್ಟರು. AXT ಪಡೆಯದ ತಾಯಂದಿರಿಗೆ ಹುಟ್ಟಿದ ಮಕ್ಕಳಲ್ಲಿ ಶೇ. ೨೬ ಮಕ್ಕಳಿಗೆ ಸೋಂಕು ತಗುಲಿತ್ತು. AZT ಚಿಕಿತ್ಸೆಯನ್ನು ಪಡೆದ ತಾಯಂದಿರಿಗೆ ಹುಟ್ಟಿದ ಮಕ್ಕಳಲ್ಲಿ ಕೇವಲ ಶೇ. ೮ ಮಕ್ಕಳು ಮಾತ್ರ ಸೋಂಕಿಗೆ ತುತ್ತಾಗಿದ್ದವು. ಈ ಅಧ್ಯಯನದಿಂದ PEP ಸ್ವಲ್ಪ ಮಟ್ಟಿಗಾದರೂ ಉಪಯುಕ್ತವಾಗಬಲ್ಲುದು ಎಂಬ ತೀರ್ಮಾನಕ್ಕೆ ವಿಜ್ಞಾನಿಗಳು ಬಂದರು.

★ ಪ್ರಕರಣಗಳ ರಂತಹ ಘಟನೆಗಳು ಹಲವು ಸಂಭವಿಸಿವೆ. ಇವರಲ್ಲಿ ಕೆಲವರು PEP ಚಿಕಿತ್ಸೆಯನ್ನು ತತ್‌ಕ್ಷಣ ಆರಂಭಿಸಿದರು. ಕೆಲವರು ಉದಾಸೀನ ಮಾಡಿದರು. PEP ಚಿಕಿತ್ಸೆ ಪಡೆದವರಲ್ಲಿ ಏಡ್ಸ್ ಲಕ್ಷಣಗಳು ಇನ್ನೂ ಕಂಡುಬಂದಿಲ್ಲ. ಪಡೆಯದವರಲ್ಲಿ ಲಕ್ಷಣಗಳು ಈಗಾಗಲೇ ಕಾಣಿಸಿಕೊಂಡಿವೆ. ಈ ಗಮನಾರ್ಹ ವೀಕ್ಷಣೆಯಿಂದ PEP ಉಪಯುಕ್ತ ಎಂಬುದು ಖಚಿತವಾಗಿದೆ.

**ಚಿಕಿತ್ಸೆ :**

ರೋಧಕ ಉಪಯುಕ್ತ. ಆದರೆ ಇದು ನೂರಕ್ಕೆ ನೂರರಷ್ಟು ಸೋಂಕನ್ನು ತಡೆಗಟ್ಟುವುದಿಲ್ಲ. ಆದರೂ ಸಹ ಈ ಚಿಕಿತ್ಸೆಯನ್ನು ಪಡೆಯುವುದು ಒಳಿತೆಂದು ಅಮೆರಿಕದ 'ಸೆಂಟರ್ ಫಾರ್ ಡಿಸೀಸ್ ಕಂಟ್ರೋಲ್ ಅಂಡ್ ಪ್ರವೆನ್‌ಶನ್' ಶಿಫಾರಸು ಮಾಡಿದೆ.

ಎಲ್ಲೆಡೆ ಸಾಮಾನ್ಯವಾಗಿ ಬಳಸುವ HIV ರೋಧಕ PEPಯನ್ನು ಪಟ್ಟಿ ೧ ರಲ್ಲಿ

| ಔಷಧ | ವಿಧ | ಡೋಸು | ಮುಖ್ಯ ಪಾರ್ಶ್ವಪರಿಣಾಮ |
|---|---|---|---|
| I. ಎರಡು ಔಷಧಗಳು : | | | |
| ೧. ಜೈಡೋವುಡಿನ್ (ರೆಟ್ರೋವಿರ್, AZT) | ರಿವರ್ಸ್ ಟ್ರಾನ್ಸ್ ಕ್ರಿಪ್ಟೇಸ್ ಇನ್‌ಹಿಬಿಟಾರ್ | ೧ ಗುಳಿಗೆ ದಿನಕ್ಕೆ ೨ ಬಾರಿ | ವಾಕರಿಕೆ, ತಲೆನೋವು, ರಕ್ತಹೀನತೆ ಸುಸ್ತು, ನಿದ್ರಾಹೀನತೆ, ನ್ಯೂಟ್ರೋಪೀನಿಯ ಹೆಚ್ಚಾಗಿ ಕಂಡುಬರುವುದಿಲ್ಲ. |
| ೨. ಲಾಮಿವುಡಿನ್ (ಎಪಿವಿರ್ 3Tc) | ರಿವರ್ಸ್ ಟ್ರಾನ್ಸ್- ಕ್ರಿಪ್ಟೇಸ್ ಇನ್‌ಹಿಬಿಟರ್ | ೧ ಗುಳಿಗೆ ದಿನಕ್ಕೆ ೨ ಬಾರಿ | |
| II. ಪರ್ಯಾಯ ಎರಡು ಔಷಧಗಳು : | | | |
| ೧. ಸ್ಟಾವುಡೈನ್ (ಜೆರಿಟ್, d4T) | ರಿವರ್ಸ್ ಟ್ರಾನ್ಸ್ ಕ್ರಿಪ್ಟೇಸ್ ಇನ್‌ಹಿಬಿಟರ್ | 1 ಗುಳಿಗೆ ದಿನಕ್ಕೆ ೨ ಬಾರಿ | ಪರಿಧಿ ನರಬೇನೆ |
| ೨. ಡೈಡಾನೋಸಿನ್ ( ವೈಡೆಕ್ಸ್, ddi) | ರಿವರ್ಸ್ ಟ್ರಾನ್ಸ್ ಕ್ರಿಪ್ಟೇಸ್ ಇನ್‌ಹಿಬಿಟರ್ | ೨ ಗುಳಿಗೆ ದಿನಕ್ಕೆ ೨ ಬಾರಿ ಬರಿ ಹೊಟ್ಟೆಯಲ್ಲಿ | ವಾಕರಿಕೆ, ಭೇದಿ, ಮಾಂಸಲಿ ಉರಿಯೂತ ಪರಿಧಿ ನರಬೇನೆ |
| III. ತೀವ್ರ ಸೋಂಕು : | | | |
| ೧. ನೆಲ್ಫಿನಾವಿರ್ (ವೈರಾಸೆಪ್ಟ್) | ಪ್ರೋಟಿಯೇಸ್ ಇನ್‌ಹಿಬಿಟರ್ | ೩ ಗುಳಿಗೆ ದಿನಕ್ಕೆ ೩ ಬಾರಿ. ಊಟದೊಡನೆ | ಭೇದಿ, ಕೊಬ್ಬಿನ ಏರುಪೇರು ಸಂಚಯನ, ಕೊಲೆಸ್ಟರಾಲ್ ಮತ್ತು ಟ್ರೈಗ್ಲಿಸರೈಡ್ ಹೆಚ್ಚಳ, ಗ್ಲೂಕೋಸ್ ಇನ್‌ಟಾಲರೆನ್ಸ್ |
| ೨. ಇಂಡಿನಾವಿರ್ (ಕ್ರಿಕ್ಸಿವಾನ್) | ಪ್ರೋಟಿಯೆಸ್ ಇನ್‌ಹಿಬಿಟರ್ | ೨ ಗುಳಿಗೆ ದಿನಕ್ಕೆ ೩ ಬಾರಿ. ಬರಿಹೊಟ್ಟೆ ಅಥವಾ ಕೊಬ್ಬುರಹಿತ ಆಹಾರದೊಡನೆ ಡೈಡಾಸಿನ್ ನುಂಗಿದ ೨ ಗಂಟೆಗಳ ನಂತರವೇ ಸೇವಿಸಬೇಕು. | ಮೂತ್ರಪಿಂಡ ಕಲ್ಲು, ವಾಕರಿಕೆ, ತಲೆನೋವು, ದೃಷ್ಟಿ ಮಂಜು, ತಲೆಸುತ್ತು, ದದ್ದು, ಲೋಹ ರುಚಿ, ಕೊಬ್ಬು, ಏರುಪೇರು ಸಂಚಯನ, ಕೊಲೆಸ್ಟರಾಲ್ ಮತ್ತು ಟ್ರೈಗಿಲ್ಸರೈಡ್ ಹೆಚ್ಚಳ, ಗ್ಲೂಕೋಸ್ ಇನ್ ಟಾಲರೆನ್ಸ್ |

ಪಟ್ಟಿ ೧ - HIV ರೋಧಕ PEP ಚಿಕಿತ್ಸೆಯ ವಿವರಗಳು

ವಿವರಿಸಲಾಗಿದೆ.

★ ರೋಧಕ ಚಿಕಿತ್ಸೆಯನ್ನು, ಸೋಂಕು ಒಡ್ಡಿಕೆಯಾದ ೨೪ ಗಂಟೆಯೊಳಗೆ ಆರಂಭಿಸಬೇಕು.

★ ಸಾಮಾನ್ಯವಾಗಿ AZT ಮತ್ತು ೩TC ಯನ್ನು ಮಾತ್ರ PEP ಯಲ್ಲಿ ಉಪಯೋಗಿಸಬೇಕು. ಇವು HIV ಯನ್ನು ಸಮರ್ಥವಾಗಿ ನಿಗ್ರಹಿಸಬಲ್ಲವು. ಇವು ಸಾಮಾನ್ಯವಾಗಿ ಎಲ್ಲೆಡೆ ದೊರೆಯುತ್ತವೆ. ಪಾರ್ಶ್ವ ಪರಿಣಾಮಗಳು ಕಡಿಮೆ.

★ HIV ಸೋಂಕನ್ನು ಹೊಂದಿರುವ ವ್ಯಕ್ತಿ AZT ಮತ್ತು ೩TC ಗಳನ್ನು ತೆಗೆದುಕೊಂಡಿದ್ದು, HIV ಆ ಔಷಧಗಳಿಗೆ ನಿರೋಧಕತೆಯನ್ನು ಬೆಳೆಸಿಕೊಂಡಿದ್ದಲ್ಲಿ ಪರ್ಯಾಯ ಎರಡು ಔಷಧಗಳನ್ನು (d4t, ddi) ತೆಗೆದುಕೊಳ್ಳಬೇಕು.

★ ಸೋಂಕು ಹೊಂದಿರುವ ವ್ಯಕ್ತಿಯಲ್ಲಿ ಆಗಲೇ ಏಡ್ಸ್ ಲಕ್ಷಣಗಳು ಕಂಡು ಬಂದಿದ್ದಲ್ಲಿ ಅಥವಾ ಅವನಲ್ಲಿ ವೈರಸ್ ಲೋಡ್ ಅಧಿಕವಾಗಿದ್ದಲ್ಲಿ ಅಥವಾ ಅವನ ದೇಹದ ವೈರಸ್‌ಗಳು ಮೇಲ್ಕಂಡ ೨ ಗುಂಪಿನ ಔಷಧಗಳಿಗೆ ನಿರೋಧಕತೆ ಬೆಳೆಸಿಕೊಂಡಿದ್ದಲ್ಲಿ ನೆಲ್ಫಿನಾವಿರ್ ಮತ್ತು ಇಂಡಿನಾವಿರ್‌ಗಳನ್ನು ಉಪಯೋಗಿಸಬೇಕು. ಸಂದರ್ಭಾನುಸಾರ ಮೊದಲಿನೆರಡು ಗುಂಪುಗಳಲ್ಲಿ ಯಾವುದಾದರೊಂದು ಗುಂಪಿನ ಔಷಧಿಗಳನ್ನೂ ಸೇವಿಸಬೇಕು.

★ ರೋಧಕ ಔಷಧಗಳನ್ನು ಕನಿಷ್ಟ ದಿನಕ್ಕೆ ೨ ಬಾರಿ ನಾಲ್ಕು ವಾರಗಳ ಅವಧಿಯವರೆಗೆ ಸೇವಿಸಬೇಕು. ಈ ಅವಧಿಯ ಬಗ್ಗೆ ತಜ್ಞರಲ್ಲಿ ಖಚಿತ ಒಮ್ಮತವಿಲ್ಲ. ಆದರೂ ಸಹ ಈ ಅವಧಿ ೪ ವಾರಗಳಿಗಿಂತ ಕಡಿಮೆಯಿರಬಾರದು ಎಂಬ ಅಂಶವನ್ನು ಎಲ್ಲರೂ ಒಪ್ಪುತ್ತಾರೆ. ಔಷಧ ಪ್ರಮಾಣ ಹಾಗೂ ಸೇವನಾವಧಿಯನ್ನು ವೈದ್ಯರು ಸಂದರ್ಭಾನುಸಾರ ನಿರ್ಧರಿಸಬಹುದು.

★ ಈ ಎಲ್ಲ ಔಷಧಗಳು ಒಂದಲ್ಲ ಒಂದು ಪಾರ್ಶ್ವ ಪರಿಣಾಮವನ್ನು ಹೊಂದಿರುತ್ತವೆ. ಇವೆಲ್ಲ ಔಷಧ ಸೇವನಾವಧಿಯಲ್ಲಿ ಕಂಡುಬರುತ್ತವೆ. ಔಷಧ ಸೇವನೆ ನಂತರದ ದೀರ್ಘಕಾಲಾವಧಿ ಪಾರ್ಶ್ವ ಪರಿಣಾಮಗಳ ಬಗ್ಗೆ ಈಗ ಯಾವುದೇ ಮಾಹಿತಿಯಿಲ್ಲ.

★ HIV ರೋಧಕ PEP ಯನ್ನು ೪ ವಾರಗಳವರೆಗೆ ಮಾತ್ರ ನೀಡುವುದು ಈಗ ವಾಡಿಕೆ. ಈ ಅವಧಿಯಲ್ಲಿ ವೈರಸ್‌ಗಳೇನಾದರೂ ರೋಧಕತೆ ಬೆಳೆಸಿಕೊಂಡುಬಿಟ್ಟರೆ, ಅವನಲ್ಲಿ ಮುಂದೆ ಏಡ್ಸ್ ಲಕ್ಷಣ ಕಾಣಿಸಿಕೊಂಡರೆ ಅದನ್ನು ನಿಗ್ರಹಿಸಲು ಯಾವುದೇ ಔಷಧಗಳಿರುವುದಿಲ್ಲ!

**ಔದ್ಯೋಗಿಕ :**

ವೈದ್ಯರು ಹಾಗೂ ಸಹಾಯಕ ವೈದ್ಯಕೀಯ ಸಿಬ್ಬಂದಿ ವರ್ಗದವರು ಹೆಚ್‌ಐವಿ ಪಾಸಿಟಿವ್ ಅಥವಾ AIDS ರೋಗಿಗಳಿಗೆ ಚಿಕಿತ್ಸೆ

ನೀಡುವಾಗ, ಅವರಿಗೆ ಸೋಂಕು ಹತ್ತುವ ಸಾಧ್ಯತೆ ಹೆಚ್ಚಿರುತ್ತದೆ. ಹಾಗಾಗಿ HIV ಒಂದು ಔದ್ಯೋಗಿಕ ರೋಗ. HIV ರೋಧಕ PEPನ್ನು ಕೇವಲ ವೈದ್ಯರಿಗೆ ಮತ್ತು ಸಹಾಯಕ ವೈದ್ಯಕೀಯ ಸಿಬ್ಬಂದಿ ವರ್ಗದವರಿಗೆ ಮಾತ್ರ ನೀಡಬೇಕು. ಇತರ ಜನಸಾಮಾನ್ಯರಿಗೆ ನೀಡಬಾರದು ಎಂಬ ಅಭಿಪ್ರಾಯ ಚಾಲ್ತಿಯಲ್ಲಿದೆ. ಅಂದರೆ ಲೇಖನದ ಆರಂಭದಲ್ಲಿ ವಿವರಿಸಿದ ೪ ಪ್ರಕರಣಗಳಲ್ಲಿ PEP ಚಿಕಿತ್ಸೆಯನ್ನು ಕೇವಲ ೪ನೆಯ ಪ್ರಕರಣದಂತಹವರಿಗೆ ನೀಡಬೇಕು. ಮೊದಲಿನ ೩ ಪ್ರಕರಣದಂತಹವರಿಗೆ ಕೊಡಬಾರದು ಎಂದು ಸಾರಾಂಶ. ಇದಕ್ಕೆ ವೈದ್ಯರು ಕಾರಣಗಳನ್ನು ಕೊಡುತ್ತಾರೆ.

*A. ಔದ್ಯೋಗಿಕ ಪ್ರಕರಣಗಳು*

- ★ ಸೋಂಕು ಸಂಭವ ಸಾಧ್ಯತೆಯ ಬಗ್ಗೆ ಖಚಿತ ಮಾಹಿತಿಯಿರುತ್ತದೆ.
- ★ ರೋಗಿಯ ವೈದ್ಯಕೀಯ ವಿವರಗಳು ವೈದ್ಯರಿಗೆ ತಿಳಿದಿರುತ್ತದೆ. ರೋಗಿಯಲ್ಲಿ HIV ಪ್ರಮಾಣ ಎಷ್ಟಿದೆ? ರೋಗಿ ಯಾವ ಯಾವ ಔಷಧವನ್ನು ಸೇವಿಸುತ್ತಿದ್ದಾನೆ? ಎಷ್ಟು ದಿನಗಳಿಂದ ಸೇವಿಸುತ್ತಿದ್ದಾನೆ? ಅವನಲ್ಲಿ ಔಷಧ ರೋಧಕತೆ ಇದೆಯೇ ಇತ್ಯಾದಿ ಮಾಹಿತಿಗಳೆಲ್ಲ ತಿಳಿದಿರುತ್ತದೆ.
- ★ PEPಯಲ್ಲಿ ಉಪಯೋಗಿಸುವ ಔಷಧಗಳನ್ನು ಖಚಿತವಾಗಿ ಆಯ್ಕೆ ಮಾಡಬಹುದು.
- ★ ಸೋಂಕಿಗೆ ಒಡ್ಡಿಕೊಂಡ ತಕ್ಷಣ ಚಿಕಿತ್ಸೆಗೆ ಒಳಗಾಗಬಹುದು.
- ★ ಸೋಂಕಿಗೆ ಒಡ್ಡಿಕೊಂಡ ವ್ಯಕ್ತಿಗೆ PEP ಔಷಧಗಳನ್ನು ಸರ್ಕಾರ ಅಥವಾ ಆಸ್ಪತ್ರೆಯವರು ಒದಗಿಸುತ್ತಾರೆ. ಅವನು ಖರ್ಚು ಮಾಡಬೇಕಾಗಿಲ್ಲ. ಹಾಗಾಗಿ ಅವನು ಔಷಧವನ್ನು ನಿಯಮಿತ ಅವಧಿಯವರೆಗೆ ತೆಗೆದುಕೊಳ್ಳಬಲ್ಲ. ಪಾರ್ಶ್ವ ಪರಿಣಾಮಗಳು ಕಂಡುಬಂದರೆ ಅವುಗಳಿಗೆ ಉಚಿತ ಚಿಕಿತ್ಸೆ ಪಡೆಯಬಲ್ಲ.
- ★ HIV ಸೋಂಕು ತಗುಲಿರುವ ಬಗ್ಗೆ ಕಾಲ ಕಾಲ ತಪಾಸಣೆಗಳನ್ನು ಉಚಿತವಾಗಿ ಪಡೆಯಬಲ್ಲ.
- ★ ಎಲ್ಲಕ್ಕಿಂತ ಮಿಗಿಲಾಗಿ ಸಂದರ್ಭದ ಗಾಂಭೀರ್ಯವನ್ನರಿತು ವೈದ್ಯರೊಡನೆ ಸಹಕರಿಸಬಲ್ಲ.

*B ಅನೌದ್ಯೋಗಿಕ ಪ್ರಕರಣಗಳು :*

- ★ ಸೋಂಕು ಸಂಭವಸಾಧ್ಯತೆಯ ಬಗ್ಗೆ ಖಚಿತ ಮಾಹಿತಿಯಿರುವುದಿಲ್ಲ. ಉದಾ: ಪ್ರಕರಣ ಒಂದು.
- ★ PEP ಔಷಧಗಳ ಆಯ್ಕೆ ನಿಖರವಾಗಿರಲು ಸಾಧ್ಯವಿಲ್ಲ. ಅಂದಾಜಿನ ಮೇಲೆ ಚಿಕಿತ್ಸೆ ನೀಡಬೇಕಾಗುತ್ತದೆ. ಆಯ್ಕೆ ಮಾಡಿದ ಔಷಧಗಳಿಗೆ ರೋಧಕತೆಯನ್ನು ಹೊಂದಿದ್ದರೆ, PEP ವಿಫಲವಾಗುತ್ತದೆ. ಉಳಿದ ಸಮರ್ಥ ಔಷಧಗಳನ್ನು ಪ್ರಯೋಗಿಸಲು ಅವಕಾಶವಿರುವುದಿಲ್ಲ.
- ★ ಇವರು ಸೋಂಕಿಗೆ ಒಡ್ಡಿಕೊಂಡು ನಂತರ ೨೪ ಗಂಟೆಗಳ ಒಳಗೆ ವೈದ್ಯರ ಬಳಿ ಬರುವ ಸಾಧ್ಯತೆ ಕಡಿಮೆಯಿರುತ್ತದೆ.
- ★ ಔಷಧಗಳು ದುಬಾರಿ. ವ್ಯಕ್ತಿಗೆ ಈ ಔಷಧಗಳನ್ನು ಕೊಳ್ಳುವ ಆರ್ಥಿಕ ಚೈತನ್ಯ ಇರದಿರಬಹುದು. ಔಷಧವನ್ನು ಅವಧಿಯವರೆಗೆ ಸೇವಿಸದಿರಬಹುದು. ಪಾರ್ಶ್ವ ಪರಿಣಾಮಗಳನ್ನು ತಡೆಯಲಾಗದೆ ಬಿಟ್ಟುಬಿಡಬಹುದು. ನಿಯಮಿತ ತಪಾಸಣೆಗೆ ಒಳಗಾಗದಿರಬಹುದು.
- ★ ವೈದ್ಯರೊಡನೆ ದೀರ್ಘಕಾಲ ಸಹಕರಿಸಲು ವಿಫಲವಾಗಬಹುದು.

ಅನೌದ್ಯೋಗಿಕ ಪ್ರಕರಣಗಳಲ್ಲಿ PEP ಚಿಕಿತ್ಸೆಯನ್ನು ಕೊಡಬಾರದು ಎಂಬ ವಾದವನ್ನು ಸಮರ್ಥಿಸಲು ಇನ್ನೂ ಕೆಲವು ಕಾರಣಗಳನ್ನು ಕೊಡುತ್ತಾರೆ.

- ★ PEP ಚಿಕಿತ್ಸೆಯನ್ನು ವೈದ್ಯರು/ ಸಿಬ್ಬಂದಿ ವರ್ಗದವರು ಅರ್ಥ ಮಾಡಿಕೊಳ್ಳಬಲ್ಲರು. ಮುಖ್ಯವಾಗಿ ಅದರ ಸೀಮಿತ ವ್ಯಾಪ್ತಿಯನ್ನು ತಿಳಿಯಬಲ್ಲರು: ಜನಸಾಮಾನ್ಯರಿಗೆ ಈ ಅರಿವು ಇರುವ ಸಾಧ್ಯತೆ ಕಡಿಮೆ. ಹಾಗಾಗಿ ಒಂದು ವೇಳೆ ಸೋಂಕು ಕಾಣಿಸಿಕೊಂಡಿತೆಂದರೆ ಅನವಶ್ಯಕ ಗೊಂದಲವನ್ನು ಏಳಿಸುವರು.
- ★ PEP ಜನಸಾಮಾನ್ಯರಲ್ಲಿ ತಪ್ಪು ಕಲ್ಪನೆಗೆ ಅವಕಾಶ ಮಾಡಿಕೊಡಬಹುದು. ಗುಳಿಗೆಗಳನ್ನು ನುಂಗಿ ಸ್ವಚ್ಛಂದ ಪ್ರವೃತ್ತಿಯಲ್ಲಿ ತೊಡಗಬಹುದು. ಈಗ AIDS ಬಗ್ಗೆ ಇರುವ ಅಲ್ಪಸ್ವಲ್ಪ ಭೀತಿಯೂ ಮರೆಯಾಗಿಬಿಡಬಹುದು.
- ★ PEP ಒಳಗಾದವರು ಮತ್ತೆ ಸೋಂಕಿಗೆ ಒಡ್ಡಿಕೊಳ್ಳಬಾರದು. ಸುರಕ್ಷಿತ ಲೈಂಗಿಕ ಚಟುವಟಿಕೆ (ಕಾಂಡಂ ಬಳಕೆ) ಅಳವಡಿಸಿಕೊಳ್ಳಬೇಕು. ಮಾದಕ ವಸ್ತುಗಳ ದುರ್ವ್ಯಸನದಿಂದ ಅಥವಾ ಸ್ವಚ್ಛಂದ ಲೈಂಗಿಕ ಪ್ರವೃತ್ತಿಯಿಂದ ದೂರವಿರಬೇಕು.

ಹಾಗಾಗಿ ಅನೌದ್ಯೋಗಿಕ ಪ್ರಕರಣಗಳಲ್ಲಿ HIV ರೋಧಕPEP ಚಿಕಿತ್ಸೆಯನ್ನು ಆರಂಬಿಸುವ ಮೊದಲು ಯೋಚಿಸಬೇಕು. ವ್ಯಕ್ತಿಯು ವೈದ್ಯರ ನಿರ್ದೇಶನವನ್ನು ಕರಾರುವಾಕ್ಕಾಗಿ ಪಾಲಿಸುತ್ತಾನೆ ಎಂಬ ಭರವಸೆ ಇದ್ದಾಗ ಮಾತ್ರ ಔಷಧಗಳನ್ನು ಆರಂಭಿಸಬೇಕು. ಆ ಭರವಸೆ ಇರದಿದ್ದಲ್ಲಿ PEP ನಿಂದ ಲಾಭಕ್ಕಿಂತ ನಷ್ಟವೇ ಹೆಚ್ಚು. ❐

**ನಾಯಿಯ ಹೆಂಡತಿ!**

ಗಂಡ ಹೆಂಡತಿಯ ಮಧ್ಯೆ ಭಯಂಕರ ಜಗಳ ನಡೆದಿತ್ತು. ಗಂಡ ಜೋರಾಗಿ ಅರಚಿದ ''ನನ್ನನ್ನೇನು ನಾಯಿ ಅಂತ ತಿಳ್ಕೊಂಡಿದೀಯಾ ನೀನೂ?'' ''ನಾನ್ಯಾಕೆ ತಿಳ್ಕೊಳ್ಲೀ..! ಆದರೆ ಅಕ್ಕಪಕ್ಕದವರ ಬಾಯಿ ಮುಚ್ಚಿಸಲು ನನ್ನಿಂದ ಸಾಧ್ಯವೇ?'' ಎಂದಳು. ಅದಕ್ಕೆ ಸಿಟ್ಟಿಗೆದ್ದ ಗಂಡ ಹೇಳಿದ, ''ಅಕ್ಕಪಕ್ಕದವರೆಲ್ಲಾ ತಾವೇ ಸ್ವತಃ ನಾಯಿಗಳು'' ''ಈ ವಿಷಯಾನ್ನ ನನಗಿಂತ ಚೆನ್ನಾಗಿ ಒಂದು ನಾಯಿಯೇ ಬಲ್ಲುದು. ಅಲ್ವಾ?'' ಎಂದಳು ಹೆಂಡತಿ.



+ ರೂತಿ

# ಋತುಮಾನ ಕಾಯಿಲೆಗಳಿಂದ ಬಳಲುವ ಮಕ್ಕಳು

- ಕಸ್ತೂರಿ

ಕಲುಷಿತ ಆಹಾರ, ನೀರು ಮತ್ತು ವಾತಾವರಣ ವೈಪರೀತ್ಯದಿಂದ ಮಕ್ಕಳು ಬೇಗ ರೋಗಕ್ಕೆ ತುತ್ತಾಗುತ್ತಾರೆ. ದೊಡ್ಡವರು ಕಾಯಿಲೆಗೊಳಗಾದರೆ ತಡೆದುಕೊಳ್ಳುವ ಶಕ್ತಿ ಇರುತ್ತದೆ. ಆದೇ ಮಕ್ಕಳು ಹಾಗಲ್ಲ. ರೋಗನಿರೋಧಕ ಶಕ್ತಿ ಮಕ್ಕಳಲ್ಲಿ ಕಡಿಮೆ ಇರುವುದೆ ಇದಕ್ಕೆ ಪ್ರಮುಖ ಕಾರಣ.

ಜ್ವರ, ನೆಗಡಿ, ಕೆಮ್ಮು ಮಕ್ಕಳಲ್ಲಿ ಬರುವ ಕಾಯಿಲೆಗಳೆ. ಮಕ್ಕಳ ವಯಸ್ಸನ್ನು ಆಧರಿಸಿ ಈ ರೋಗಗಳು ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತವೆ. ಅದರಲ್ಲೂ ಎರಡು ಮೂರು ತಿಂಗಳ ಶಿಶುಗಳಾದರೆ ತುಂಬಾ ಜಾಗ್ರತೆಯಿಂದಿರಬೇಕಾಗುತ್ತದೆ. ಸಾಮಾನ್ಯವಾಗಿ ಶಿಶುಗಳೆಂದರೆ ಮಾಂಸದ ಮುದ್ದೆಯಂತೆ. ಮಂದಸ್ಮಿತ ನಗು ಮತ್ತು ಅಳು ಬಿಟ್ಟರೆ ಮಗುವಿನಿಂದ ನಾವೇನು ನಿರೀಕ್ಷಿಸುವ ಹಾಗಿಲ್ಲ. ಈ ಎರಡು ಕ್ರಿಯೆಗಳೆ ಮಕ್ಕಳ ಭಾಷೆ, ಅದರ ಮೂಲಕವೇ ಆರೋಗ್ಯ ಅನಾರೋಗ್ಯ ತಿಳಿಯುವುದು. ಶಿಶುಗಳ ಶಾರೀರಿಕ ಮಟ್ಟ ಬಹು ಸೂಕ್ಷ್ಮವಾಗಿರುವುದರಿಂದ ಅಷ್ಟೆ ಸೂಕ್ಷ್ಮವಾಗಿ ಆರೈಕೆ ಮಾಡಬೇಕಾಗಿರುತ್ತದೆ.



ಮಕ್ಕಳ ಮನಸು ಎಷ್ಟು ಮುಗ್ಧವೋ, ದೇಹ ಅಷ್ಟೇ ಮೆದು ಮತ್ತು ಸೂಕ್ಷ್ಮ. ಅವರನ್ನು ಅತ್ಯಂತ ಕಾಳಜಿಯಿಂದ ನೋಡಿಕೊಳ್ಳಬೇಕು.

ಜ್ವರ ವೈರಸ್ ಇನ್‌ಫೆಕ್ಷನ್‌ನಿಂದ ಬರುತ್ತದೆ. ಇಂತಹ ಸಂದರ್ಭಗಳಲ್ಲಿ ಯಾಂಟಿ ಬಯೊಟಿಕ್ ಔಷಧ ಬಳಸಬಾರದು. ಸಾಮಾನ್ಯವಾಗಿ ಜ್ವರ ಎರಡು ಮೂರು ದಿನಗಳಲ್ಲಿ ಕಡಿಮೆಯಾಗುತ್ತದೆ. ಕಡಿಮೆಯಾಗದಿದ್ದರೆ ವೈದ್ಯರನ್ನು ಸಂಪರ್ಕಿಸಬೇಕು. ಜ್ವರ ಬಂದ ಮಕ್ಕಳನ್ನು ಗಾಳಿ, ಬೆಳಕು ಧಾರಾಳವಾಗಿ ದೊರೆಯುವ ಸ್ಥಳದಲ್ಲಿ ಮಲಗಿಸಬೇಕು. ಶರೀರಕ್ಕೆ ಹತ್ತಿ ಬಟ್ಟೆಗಳೆ ಗಾಳಿ. ತುಂಬಾ ಚಳಿಯಾಗುತ್ತಿದ್ದರೆ ಶುಭ್ರವಾದ ಶಾಲು ಅಥವಾ ಹೊದಿಕೆಯನ್ನು ಹೊದಿಸಬೇಕು. ಎಷ್ಟೇ ಮಾಡಿದರೂ ಜ್ವರ ಬಂದ ಮಕ್ಕಳು ಸ್ವಲ್ಪ ಅಸೌಕರ್ಯದಂತೆ ತೋರ್ಪಡಿಸುತ್ತಾರೆ. ಆ ಸಮಯದಲ್ಲಿ ಮಕ್ಕಳಿಗೆ ಮುಖ್ಯವಾಗಿ ಬೇಕಾದುದು ಹೆತ್ತವರ ಸಾಮಿಪ್ಯತೆ. ಅವರ ಆರೈಕೆ. ಆದ್ದರಿಂದ ಮಕ್ಕಳಿಗೆ ಜ್ವರಬಂದಾಗ ಸ್ವತಃ ತಂದೆ- ತಾಯಂದಿರೆ ಮಕ್ಕಳ ಬಳಿ ಇದ್ದು ಅವರ ಕ್ಷೀಣಿಸಿದ ದನಿಗೆ ಧ್ವನಿಗೂಡಿಸಬೇಕು. ಜ್ವರಬಂದು ಬಳಲಿದ ಮಗು ಅಭದ್ರತೆ ಭಾವನೆಯಿಂದ ತೊಳಲಾಡುತ್ತಿರುತ್ತದೆ. ಕಾಯಿಲೆಗಿಂತ ಮನಸ್ಸಿನ ದೌರ್ಬಲ್ಯವೆ ಅವರನ್ನು ನಿಸ್ತೇಜಗೊಳಿಸುತ್ತದೆ. ತಾಯಿ ಮಮತೆಯಿಂದ ಧೈರ್ಯದ ನುಡಿಗಳನ್ನಾಡಿದರೆ ಸ್ವಾಸ್ಥತೆ ಮೂಡಿಬರುತ್ತದೆ.

ಜ್ವರದ ಪ್ರಮಾಣ ಅಧಿಕವಾಗಿದ್ದರೆ ಒದ್ದೆ ಬಟ್ಟೆಯಿಂದ ಶರೀರವನ್ನು ಒರೆಸಬೇಕು. ತಣ್ಣಗಿನ ನೀರಲ್ಲದೆ ಸ್ವಲ್ಪ ಉಗುರು ಬೆಚ್ಚಗಿನ ನೀರಿನಲ್ಲಿ ಎದ್ದಿದ ಒದ್ದೆ ಬಟ್ಟೆಯಿಂದ ಒರೆಸುವುದು ಒಳ್ಳೆಯದು. ಇದರಿಂದ ಜ್ವರವೂ ಕಡಿಮೆಯಾಗುತ್ತದೆ.

ಮಕ್ಕಳಿಗೆ ಜ್ವರ ಬಂದಾಗ ಥರ್ಮಾಮೀಟರ್‌ನಿಂದ ಅಳೆದು ಜ್ವರ ಎಷ್ಟಿದೆಯೆಂದು ತಿಳಿದುಕೊಳ್ಳಬಹುದು. ಕಡಿಮೆ ವೆಚ್ಚದ ಈ ಥರ್ಮಾಮೀಟರ್ ಪ್ರತಿಯೊಬ್ಬರ ಮನೆಯಲ್ಲಿ ಇರುವುದು ಅತಿ ಅಗತ್ಯ. ಅತ್ಯಂತ ಸರಳ ವಿಧಾನದ ಮೂಲಕ ನಮ್ಮ, ನಮ್ಮ ಮಕ್ಕಳ ಶಾರೀರಿಕ ಉಷ್ಣತೆ ತಿಳಿಯಲು ಇದು ಬಹು ಉಪಯೋಗಕಾರಿ. ಥರ್ಮಾಮೀಟರನ್ನು ಮಕ್ಕಳ ಬಾಯಲ್ಲಿ ಅಥವಾ ಕೊಂಕುಳಲ್ಲಿರಿಸಿ ಜ್ವರ ಎಷ್ಟಿದೆಯೆಂದು ತಿಳಿದುಕೊಳ್ಳಬಹುದು. ಜ್ವರ ೧೦೪ ಡಿಗ್ರಿ, ದಾಟಿದರೆ ತಕ್ಷಣ ಮಕ್ಕಳ ತಜ್ಞರತ್ತ ಕರೆದೊಯ್ಯಬೇಕು.

ಡಾಕ್ಟರ ಬಳಿಗೆ ಹೋಗದೆ, ಅಥವಾ ಸಕಾಲಕ್ಕೆ ಅವರ ಸೇವೆ ಸಿಗದಿದ್ದಾಗ ಔಷಧಗಳ ಮೂಲಕ ದೇಹದ ಉಷ್ಣತೆ ನಿಯಂತ್ರಿಸಬಹುದು. ಇದಕ್ಕೆ ಪಾರಾಸಿಟ್‌ಮಾಲ್ ಔಷಧ ಜ್ವರದ ತೀವ್ರತೆ ಕಡಿಮೆ ಮಾಡುತ್ತದೆ. ಕೆಲವರು ಆಸ್ಪಿನ್ ಔಷಧ ಬಳಸುತ್ತಾರೆ. ಆದರೆ ಆಸ್ಪಿನ್‌ಗಿಂತ ಪಾರಾಸಿಟ್‌ಮಾಲ್ ಒಳ್ಳೆಯದೆಂದು ವೈದ್ಯರ ಸೂಚನೆ.

ಜ್ವರ ಬಂದಾಗ ಯಾರಿಗೆ ಆಗಲಿ ಹಸಿವು ಮಂದವಾಗಿರುತ್ತದೆ. ಈ ವಿಷಯ ಮಕ್ಕಳಿಗೂ ಕೂಡಾ ಅನ್ವಯಿಸುತ್ತದೆ. ಕೆಲ ಮಕ್ಕಳು ಕನಿಷ್ಠ ನೀರು ಕುಡಿಯಲು ಇಷ್ಟಪಡರು. ಆದಾಗ್ಯೂ ತಾಯಿ - ತಂದೆ ಏನೇ ಪ್ರಯತ್ನ ಮಾಡಿಯಾದರೂ ಕನಿಷ್ಠ ದ್ರವಪದಾರ್ಥಗಳನ್ನು ಕುಡಿಯುವಂತೆ ಮಾಡಬೇಕು. ಇಲ್ಲವಾದರೆ ಡೀ ಹೈಡ್ರೆಷನ್‌ಗೆ ತುತ್ತಾಗುವ ಸಂಭವ ಇರುತ್ತದೆ. ಅಷ್ಟೆ ಅಲ್ಲದೆ ನೀರಸತೆ ಉಂಟಾದಲ್ಲಿ ಕುಳಿತಲ್ಲೇ ಕುಸಿದುಬೀಳುವ ಸಾಧ್ಯತೆ ಇರುತ್ತದೆ.

ಹಣ್ಣುರಸ, ತೆಳುವಾದ ಗಂಜಿ, ಎಳನೀರು ಮುಂತಾದ ದ್ರವ ಪದಾರ್ಥಗಳನ್ನು ಆಗಾಗ ಕೊಡುತ್ತಿರಬೇಕು. ಶುದ್ಧವಾದ ನೀರು ಹೆಚ್ಚು ಕುಡಿಸಬೇಕು. ದೊಡ್ಡ ಮಕ್ಕಳಾದರೆ, ತಿನ್ನುವದಾದರೆ ಅನ್ನ ಕೂಡಾ ತಿನ್ನಿಸಬಹುದು. ಏನೇ ಆದರೂ ಡೀ ಹೈಡ್ರೆಷನ್ ಬರದಂತೆ, ನಿಶಕ್ತಿ ತಲೆದೋರದಂತೆ ಎಚ್ಚರವಹಿಸಬೇಕು.

ಸಾಮಾನ್ಯ ಜ್ವರ, ಕೆಮ್ಮು, ನೆಗಡಿ ಕಾಯಿಲೆಗಳನ್ನು ಮನೆಯಲ್ಲಿಯೇ ನಿವಾರಿಸಬಹುದು. ಮಕ್ಕಳ ಶರೀರದಲ್ಲಿರುವ ರೋಗ ನಿರೋಧಕ ಶಕ್ತಿಯಿಂದ ಜ್ವರ ತನ್ನಷ್ಟಕ್ಕೆ ತಾನೇ ತಗ್ಗುತ್ತದೆ. ಕಡಿಮೆಯಾಗದಿದ್ದರೆ, ಮಕ್ಕಳ ಮುಖ ಹರ್ಷಚಿತ್ತದಿಂದ ಕೂಡಿರದಿದ್ದರೆ, ಸದಾ ಅಳುತ್ತಿದ್ದರೆ ಆರೋಗ್ಯದಲ್ಲಿ ವ್ಯತ್ಯಾಸವಾಗಿದೆಯೆಂದು ಭಾವಿಸಬೇಕಾಗುತ್ತದೆ. ಸದಾ ಅಳು, ನಿಶಕ್ತಿ, ನೀರಸತೆ, ಸಪ್ಪೆಯಾಗಿರುವ ಲಕ್ಷಣಗಳು ಇತ್ಯಾದಿ ಕಾಯಿಲೆಯ ಸೂಚಕಗಳು, ಮಗುವಿನ ಸ್ಥಿತಿ, ಕ್ರಿಯೆ ಗಮನದಲ್ಲಿರಿಸಿಕೊಂಡು ವೈದ್ಯರನ್ನು ಸಂಪರ್ಕಿಸಬೇಕು. ❑

# ಅಪಸ್ಮಾರ ನಿಯಂತ್ರಕ ಬಾರ್ಬಿಚುರೇಟ್ಸ್

ಡಾ|| ಸಿ.ಆರ್. ಚಂದ್ರಶೇಖರ್

**ಪ್ರಪಂಚದಾದ್ಯಂತ ಲಕ್ಷಾಂತರ ಮೂರ್ಛೆರೋಗಿಗಳಿಗೆ ಪ್ರಾಣ ದಾನಿಯಾಗಿರುವ ಫೀನೋಬಾರ್ಬಿ ಟೋನ್ ಔಷಧದ ಬಗ್ಗೆ ತಿಳಿಯೋಣ.**

ಗಾರ್ಡಿನಾಲ್, ಎಂಗಾರ್ಡ್, ಫೀನೋಗಾರ್ಡ್ ಎಂಬ ವ್ಯಾಪಾರೀ ಹೆಸರಿನಿಂದ ಮಾರುಕಟ್ಟೆಯಲ್ಲಿ ಲಭ್ಯವಿರುವ ಈ ಮದ್ದು ಬಾರ್ಬಿಚುರೇಟ್ಸ್ ಗುಂಪಿಗೆ ಸೇರುತ್ತದೆ. ೧೯೦೩ನೇ ಇಸವಿಯಿಂದಲೂ ಬಳಕೆಯಲ್ಲಿರುವ, ಫೀನೋಬಾರ್ಬಿಟೋನ್ ಇಂದಿಗೂ, ಫಿಟ್ಸ್ ಅಥವಾ ಮೂರ್ಛೆರೋಗ ಚಿಕಿತ್ಸೆಗೆ ವೈದ್ಯರ ಪ್ರಥಮ ಆಯ್ಕೆ. ಶೇಕಡಾ ೭೦ರಷ್ಟು ಮೂರ್ಛೆರೋಗಿಗಳಲ್ಲಿ ಈ ಔಷಧ ಒಂದರಿಂದಲೇ, ಫಿಟ್ಸ್ ಸಂಪೂರ್ಣವಾಗಿ ಹತೋಟಿಗೆ ಬರುತ್ತದೆ. ಮೂರು ವರ್ಷದ ಕೆಳಗಿನ ಮಕ್ಕಳಿಗೆ ೧೫ ಮಿಲಿಗ್ರಾಂ, ೩ರಿಂದ ೧೦ ವರ್ಷದವರಿಗೆ ೩೦ ಮಿ.ಗ್ರಾಂ, ಹತ್ತು ವರ್ಷಕ್ಕಿಂತ ಮೇಲ್ಪಟ್ಟವರಿಗೆ ೬೦ ಮಿ.ಗ್ರಾಂ ಮಾತ್ರೆಯನ್ನು ಪ್ರಾರಂಭಿಸಲಾಗುತ್ತದೆ. ಯಾವುದೇ ಮೂರ್ಛೆರೋಗಿಯಲ್ಲಿ, ಫಿಟ್ಸ್ ಕಂಟ್ರೋಲ್‌ಗೆ ಬರಲು ಎಷ್ಟು ಮಿಲಿಗ್ರಾಂ ಫೀನೋಬಾರ್ಬಿ'ಟೋನ್ ಬೇಕು ಎಂಬುದು ಮೊದಲೇ ಗೊತ್ತಾಗುವುದಿಲ್ಲ. ಚಿಕಿತ್ಸೆ ಪ್ರಾರಂಭಿಸಿದ ನಾಲ್ಕಾರು ತಿಂಗಳಲ್ಲಿ ಔಷಧ ಪ್ರಮಾಣವನ್ನು ವೈದ್ಯರು ನಿರ್ಧರಿಸುತ್ತಾರೆ. ಫಿಟ್ಸ್ ಕಂಟ್ರೋಲಿಗೆ ಬರಲು, ರೋಗಿ ಫೀನೋಬಾರ್ಬಿಟೋನ್ ಮಾತ್ರೆಯನ್ನು, ವೈದ್ಯರು ಹೇಳಿದ ಪ್ರಮಾಣದಲ್ಲಿ, ಒಂದು ದಿನವೂ ತಪ್ಪದೇ, ಕ್ರಮವಾಗಿ ಸೇವಿಸಬೇಕು. ರಾತ್ರಿ ಮಲಗುವ ವೇಳೆಯಲ್ಲಿ ಸೇವಿಸುವುದು ಉತ್ತಮ. ಈ ಮಾತ್ರೆ ಸೇವನೆಯಿಂದ, ಪ್ರಾರಂಭದ ದಿನಗಳಲ್ಲಿ, ರೋಗಿಗೆ ಸ್ವಲ್ಪ ಹೆಚ್ಚು ನಿದ್ರೆ ಬರುತ್ತದೆ. ಆನಂತರ, ಈ ಸಮಸ್ಯೆ ಇರುವುದಿಲ್ಲ. ಸಾಮಾನ್ಯವಾಗಿ, ಈ ಮಾತ್ರೆಯನ್ನು ಐದು ವರ್ಷಗಳ ಕಾಲ ನಿರಂತರವಾಗಿ ತೆಗೆದುಕೊಳ್ಳಲು ಸೂಚಿಸಲಾಗುತ್ತದೆ. ಈ ಔಷಧ ಅತ್ಯಂತ ಸುರಕ್ಷಿತ ಎಂದು ಸಾಬೀತಾಗಿದೆ. ಮಕ್ಕಳಲ್ಲಿ, ದೊಡ್ಡವರಲ್ಲಿ, ಗರ್ಭಿಣಿಯರಲ್ಲಿ, ಎದೆ ಹಾಲು ಕೊಡುವ ತಾಯಂದಿರಲ್ಲಿ ಇದು ಯಾವ ತೊಂದರೆಯನ್ನೂ ಉಂಟು ಮಾಡದು. ಈ ಔಷಧದಿಂದ ಮಗು ಮಂಕಾಗುತ್ತದೆ. ಓದಿನಲ್ಲಿ ಹಿಂದೆ ಬೀಳುತ್ತದೆ ಎಂದು ಜನ ತಪ್ಪಾಗಿ ತಿಳಿಯುತ್ತಾರೆ. ಈ ಭಯಕ್ಕೆ ಆಧಾರವಿಲ್ಲ. ಆದರೆ ಮಿದುಳಿಗೆ ಹಾನಿಯಾಗಿರುವ ಲಕ್ಷಣಗಳಿದ್ದರೆ, ಉದಾಹರಣೆಗೆ ಹೆರಿಗೆ ಕಷ್ಟವಾಗಿ ಜನಿಸಿದ ಮಗು, ಬುದ್ಧಿಮಾಂದ್ಯ ಮಗುವಿನಲ್ಲಿ, ಫೀನೋಬಾರ್ಬಿಟೋನ್ ಸೇವನೆಯಿಂದ, ಅತಿ ತೀಟೆ, ಅತಿ ಚಟುವಟಿಕೆ ಕಂಡು ಬರುತ್ತದೆ. ಹಾಗಾದಲ್ಲಿ ವೈದ್ಯರು ಫೀನೋಬಾರ್ಬಿಟೋನ್ ಮಾತ್ರೆಯನ್ನು ನಿಲ್ಲಿಸಿ, ಕಾರ್ಬಮಜೆಪಿನ್‌ನಂತಹ ಮಾತ್ರೆಯನ್ನು ಬರೆದು ಕೊಡುತ್ತಾರೆ. ಫೀನೋಬಾರ್ಬಿಟೋನ್ ಮಾತ್ರೆಯನ್ನು ಸೇವಿಸುತ್ತಿರುವ ಮಗು ಅಥವಾ ರೋಗಿಗೆ, ಜ್ವರ, ಕೆಮ್ಮು, ವಾಂತಿ, ಬೇಧಿ ಇತ್ಯಾದಿ ಇತರರೋಗ ಲಕ್ಷಣಗಳು ಬಂದರೆ, ಫೀನೋಬಾರ್ಬಿಟೋನ್ ಮಾತ್ರೆಯನ್ನು ನಿಲ್ಲಿಸುವ ಅಗತ್ಯವಿಲ್ಲ. ಇದರ ಜೊತೆಗೆ ಬೇರೆ ಔಷಧಗಳನ್ನು ಕೊಡಬಹುದು. ಕಳೆದ ೭೫ ವರ್ಷಗಳಿಂದ ಬಳಕೆಯಲ್ಲಿರುವ ಈ ಬಾರ್ಬಿಚುರೇಟ್ ನಂಬಿಕೆ - ವಿಶ್ವಾಸಕ್ಕೆ ಅರ್ಹ ಎಂದು ಸಾಬೀತಾಗಿದೆ. ಈ ಔಷಧವನ್ನು ಸೇವಿಸುವ ರೋಗಿಗೆ ಫಿಟ್ಸ್ ಬಂದರೆ, ಔಷಧ ನಿಷ್ಪ್ರಯೋಜಕ ಎಂಬ ತೀರ್ಮಾನಕ್ಕೆ ಬರಬೇಡಿ. ಔಷಧ ಬದಲಾಯಿಸಿ ಎಂದು ವೈದ್ಯರನ್ನು ಕೇಳಬೇಡಿ. ರೋಗಿ, ನಿಗದಿತ ಪ್ರಮಾಣದಲ್ಲಿ ಔಷಧವನ್ನು ಸೇವಿಸಲು ಮರೆತಿರಬಹುದು. ವೇಳೆ ವೇಳೆಗೆ ಆಹಾರ ಸೇವಿಸದೆ, ಉಪವಾಸ ವಿದ್ದಿರಬಹುದು, ನಿದ್ರೆಗೆಟ್ಟಿರಬಹುದು, ಆ ದಿನ ಆತನಿಗೆ ಜ್ವರ ಬಂದಿದ್ದಿರಬಹುದು. ಇದನ್ನು ಗಮನಿಸಿ, ವೈದ್ಯರಿಗೆ ವರದಿ ಮಾಡಿ.

ಫೀನೋಬಾರ್ಬಿಟೋನ್, ಮಿದುಳಿನ ನರಕೋಶಗಳನ್ನು ತಲುಪಿ, ಅಲ್ಲಿ, ಫಿಟ್ಸ್‌ಗೆ ಕಾರಣವಾಗುವ, ಅಸಹಜ ವಿದ್ಯುತ್ ಕಂಪನಗಳು ಹುಟ್ಟದಂತೆ, ಹುಟ್ಟಿದರೂ ಇತರ ಭಾಗಗಳಿಗೆ ಹರಡದಂತೆ ತಡೆಯುತ್ತದೆ.

ಬಾರ್ಬಿಚುರೇಟ್ಸ್‌ನಲ್ಲಿ ಎರಡು ವಿಧಗಳಿವೆ. ಒಂದು ಅಲ್ಪಕಾಲ ಪರಿಣಾಮವನ್ನುಂಟು ಮಾಡುವಂಥವು. ಇವನ್ನು SHORTACTING BARBITURATES ಎನ್ನುತ್ತಾರೆ. ಉದಾಹರಣೆ ಸೆಕೋ ಬಾರ್ಬಿವಾಲ್, ಪೆಂಟೋಬಾರ್ಬಿವಾಲ್. ಇನ್ನೊಂದು ದೀರ್ಘಕಾಲ ಪರಿಣಾಮವನ್ನುಂಟು ಮಾಡುವಂಥವು. ೭೨ ಗಂಟೆಗಳಿಗೂ ಹೆಚ್ಚು ಕಾಲ ಇವು ಕೆಲಸ ಮಾಡುತ್ತವೆ. ಫೀನೋಬಾರ್ಬಿಮೋನ್ ಈ ಗುಂಪಿಗೆ ಸೇರುತ್ತದೆ. ಅಮೈಲೋಬಾರ್ಬಿಟೋನ್ ಇನ್ನೊಂದು ಉದಾಹರಣೆ.

ಮೂರ್ಛೆರೋಗ ನಿರೋಧ ಗುಣವಲ್ಲದೆ, ಬಾರ್ಬಿಚುರೇಟ್ಸ್‌ಗಳಿಗೆ ಇರುವ ಇತರ ಗುಣಗಳೆಂದರೆ, ನಿದ್ರೆಯನ್ನು ಬರಿಸುವುದು, ಮತ್ತು ಅರಿವಳಿಕೆ - ಅನಿಸ್ತೀಸಿಯಾ ಗುಣ. ೧೯೬೦ ನೇ ಇಸವಿಯವರೆಗೆ ಬಾರ್ಬಿಚುರೇಟ್ಸ್ ನಿದ್ರಾ

ಮಾತ್ರೆಗಳೆಂದೇ ಜನಪ್ರಿಯವಾಗಿದ್ದುವು. ಮಿದುಳು - ಕೇಂದ್ರನರಮಂಡಲವನ್ನು ಮಬ್ಬಾಗಿಸುವುದರಿಂದ ಈ ಪರಿಣಾಮ ಕಂಡು ಬರುತ್ತದೆ. ಆದರೆ, ಬಾರ್ಬಿಚುರೇಟ್ಸ್ ಸುರಕ್ಷಿತ ನಿದ್ರಾಮಾತ್ರೆಗಳಲ್ಲ ಎಂಬುದನ್ನು ಗಮನಿಸಿ, ವೈದ್ಯರು ನಿದ್ರೆಗಾಗಿ ಈ ಮಾತ್ರೆಗಳನ್ನು ರೋಗಿಗಳಿಗೆ ಬರೆದು ಕೊಡುವುದನ್ನು ನಿಲ್ಲಿಸಿದ್ದಾರೆ.

ಬಾರ್ಬಿಚುರೇಟ್ಸ್‌ನ ಅಪಾಯಕಾರಿ ಗುಣವೆಂದರೆ, ನಿದ್ರೆಗಾಗಿ ಅವನ್ನು ಬಳಸಿದರೆ, ವ್ಯಕ್ತಿಗೆ ಅದು ಚಟವಾಗಿ ಬಿಡುತ್ತದೆ. ಪ್ರಾರಂಭದಲ್ಲಿ ಒಂದು ಮಾತ್ರೆ ತಿಂದರೆ ಕಣ್ಣು ತುಂಬಾ ನಿದ್ರೆ. ಸ್ವಲ್ಪ ದಿನಗಳ ನಂತರ, ಒಂದು ಮಾತ್ರೆಯಿಂದ, ನಿದ್ರೆ ಬರುವುದಿಲ್ಲ. ಎರಡು ಮಾತ್ರೆ ಬೇಕು. ಆಮೇಲೆ ನಾಲ್ಕು, ಎಂಟು ಹೀಗೆ ಸೇವನೆಯ ಪ್ರಮಾಣವನ್ನು ಹೆಚ್ಚಿಸುತ್ತಾ ಹೋಗಬೇಕಾಗುತ್ತದೆ. ಇದನ್ನು ಟಾಲರೇನ್ಸ್ ಅಥವಾ ತಾಳಿಕೆ ಎಂದು ಕರೆಯುತ್ತಾರೆ. ಜೊತೆಗೆ ಮಾನಸಿಕ ಅವಲಂಬನೆಯೂ ಶುರುವಾಗುತ್ತದೆ. ನಿದ್ರೆಗಾಗಿ, ವ್ಯಕ್ತಿ ಈ ಮಾತ್ರೆಗಾಗಿ ಹಾತೊರೆಯುತ್ತಾನೆ. ಆಮೇಲೆ ದೈಹಿಕ ಅವಲಂಬನೆಯೂ ಪ್ರಾರಂಭವಾಗುತ್ತದೆ. ಒಂದು ದಿನ, ಮಾತ್ರೆ ತಿನ್ನದಿದ್ದರೆ, ವ್ಯಕ್ತಿಗೆ ನಿದ್ರೆ ಬರುವುದೇ ಇಲ್ಲ. ಚಡಪಡಿಕೆ, ಭಯ, ಕೈಕಾಲು ನಡುಕ, ವಾಕರಿಕೆ, ವಾಂತಿ, ಏನೋ ಕಳೆದುಕೊಂಡ ಅನುಭವ, ಮಾತ್ರೆಯನ್ನು ತಿನ್ನಲೇಬೇಕೆಂಬ ಅದಮ್ಯ ಬಯಕೆ ಕಾಣಿಸಿಕೊಳ್ಳುತ್ತವೆ. ಆಲ್ಕೋಹಾಲ್ ಚಟಕ್ಕೂ, ಬಾರ್ಬಿಚುರೇಟ್ ಚಟಕ್ಕೂ ಯಾವ ವ್ಯತ್ಯಾಸವಿರದು. ವ್ಯಕ್ತಿ ಈ ಔಷಧಕ್ಕೆ ದಾಸನಾಗಿಬಿಡುತ್ತಾನೆ. ಇನ್ನೊಂದು ಅಪಾಯಕಾರಿ ಬೆಳವಣಿಗೆ ಎಂದರೆ, ವ್ಯಕ್ತಿ, ಯಾಂತ್ರಿಕವಾಗಿ ಒಂದಾದ ಮೇಲೆ ಮತ್ತೊಂದರಂತೆ ಬಾರ್ಬಿಚುರೇಟ್ ಮಾತ್ರೆಯನ್ನು ತಿನ್ನತೊಡಗುತ್ತಾನೆ. ತಿಂದ ಮಾತ್ರೆಯ ಲೆಕ್ಕ ಮರೆತೇ ಹೋಗುತ್ತದೆ. ಇದನ್ನು 'ಡ್ರಗ್ ಆಟೋಮೇಟಿಸಂ' ಎನ್ನುತ್ತಾರೆ. ವ್ಯಕ್ತಿ ಅನಿಯಮಿತ ಮಾತ್ರೆ ತಿಂದು ಕೋಮ ಸ್ಥಿತಿಯನ್ನು ತಲುಪಬಹುದು. ಸಾಯಲೂಬಹುದು. ಆದ್ದರಿಂದ ಯಾರೂ ಫೀನೋಬಾರ್ಬಿಟೋನ್ ಮಾತ್ರೆಯನ್ನು ನಿದ್ರೆಗಾಗಿ ಬಳಸಬಾರದು. ಈಗ ಲೊರೆಜಪಾಮ್, ಜೋಪಿಕ್ಲೋನ್ ನಂತರ



ಸುರಕ್ಷಿತ ನಿದ್ರಾಮಾತ್ರೆಗಳು ಬಂದಿವೆ. ವೈದ್ಯರ ಮಾರ್ಗದರ್ಶನದಲ್ಲಿ ಸ್ವಲ್ಪ ಅವಧಿಗಾಗಿ ಅವನ್ನು ಬಳಸಬಹುದು.

ಅಲ್ಪಕಾಲದ ಪರಿಣಾಮವನ್ನುಂಟು ಮಾಡುವ ಸೆಕೋ ಅಥವಾ ಪೆಂಟೋಬಾರ್ಬಿಟೋನನ್ನು ಅಲ್ಪಕಾಲದ ಅರಿವಳಿಕೆಗಾಗಿ Short time Anesthetic agent ಆಗಿ ಬಳಸಲ್ಪಡುತ್ತವೆ. ಸಣ್ಣಪುಟ್ಟ ಶಸ್ತ್ರಕ್ರಿಯೆ ಮಾಡಲು, ಮನೋರೋಗಗಳಿಗೆ ಕೊಡುವ ವಿದ್ಯುತ್ ಕಂಪನ ಚಿಕಿತ್ಸೆ ನೀಡಲು, ಈ ಔಷಧವನ್ನು ರಕ್ತನಾಳದೊಳಕ್ಕೆ ನೀಡಲಾಗುತ್ತದೆ. ಔಷಧವನ್ನು ಕೊಡುವುದನ್ನು ನಿಲ್ಲಿಸಿದ ಕೆಲವೇ ಕ್ಷಣಗಳಲ್ಲಿ ರೋಗಿಗೆ ಪ್ರಜ್ಞೆ ಮರಳಿ ಬರುತ್ತದೆ. ಯಾವುದೇ ತೀಕ್ಷ್ಣವಾದ ಅಡ್ಡ ಪರಿಣಾಮವಿರುವುದಿಲ್ಲ.

ಅಲ್ಪಕಾಲಾವಧಿಯ ಬಾರ್ಬಚುರೇಟ್‌ನ ಮತ್ತೊಂದು ಉಪಯೋಗವೆಂದರೆ, ಮನೋವೈದ್ಯರು ಅದನ್ನು ವ್ಯಕ್ತಿಯ ಸುಪ್ತ ಮನಸ್ಸಿನೊಳಗೆ ಹುದುಗಿರುವ ವಿಷಯಗಳನ್ನು ಹೊರ ತೆಗೆಯಲು, ಹಾಗೂ ಸುಪ್ತಮನಸ್ಸಿಗೆ ಸಲಹೆ ಸೂಚನೆಗಳನ್ನು ನೀಡಲು ಬಳಸುತ್ತಾರೆ. ಇದನ್ನು ನಾರ್ಕೋ ಅನಾಲಿಸಿಸ್ ಅಥವಾ ಅಬ್‌ರಿಯಾಕ್ಷನ್ ಎನ್ನುತ್ತಾರೆ. ವ್ಯಕ್ತಿಯನ್ನು ಪ್ರಶಾಂತ ಪರಿಸರವಿರುವ ಕೋಣೆಯಲ್ಲಿ ಮಲಗಿಸಿ, ಆತನ ರಕ್ತನಾಳದೊಳಕ್ಕೆ, ಸ್ವಲ್ಪ ಸ್ವಲ್ಪವಾಗಿ, ಪೆಂಟೋಥಾಲ್‌ಸೋಡಿಯಂ ದ್ರವವನ್ನು ನೀಡಲಾಗುತ್ತದೆ. ಔಷಧದ ಪ್ರಮಾಣ ಒಂದು ಮಟ್ಟದಲ್ಲಿ ಒಳಹೋದಾಗ, ವ್ಯಕ್ತಿ ಒಂದು ಬಗೆಯ ಅರೆಪ್ರಜ್ಞಾವಸ್ಥೆಯನ್ನು ತಲುಪುತ್ತಾನೆ. ಆತ ಪೂರ್ಣ ಜಾಗೃತನಾಗಿಯೂ ಇರುವುದಿಲ್ಲ, ಪ್ರಜ್ಞೆ ಕಳೆದುಕೊಂಡೂ ಇರುವುದಿಲ್ಲ. ಆಗ ಜಾಗೃತ ಮನಸ್ಸು - ಸುಪ್ತಮನಸ್ಸಿನ ನಡುವೆ ಇರುವ ನಿಯಂತ್ರಕ ತೆರೆ ಸರಿಯುತ್ತದೆ. ವೈದ್ಯ ಪ್ರಶ್ನೆ ಕೇಳುತ್ತಾ, ವ್ಯಕ್ತಿಯನ್ನು ಮಾತಾಡಲು, ಪ್ರತಿಕ್ರಿಯೆ ತೋರಿಸಲು ಪ್ರಚೋದಿಸುತ್ತಾನೆ. ನಿರ್ದಿಷ್ಟ ಪ್ರಶ್ನೆಗಳನ್ನು ಹಾಕಿ, ಅದುಮಿಟ್ಟ ಅನುಭವ, ಆಸೆ, ಬಯಕೆಗಳನ್ನು, ವಿಷಯಗಳನ್ನು ಹೇಳಲು ಪ್ರೋತ್ಸಾಹಿಸುತ್ತಾನೆ. ವ್ಯಕ್ತಿ ತನ್ನ ಹಿಂಜರಿಕೆಯನ್ನು ಬಿಟ್ಟು, ಮಾತಾಡುತ್ತಾ, ಭಾವೋದ್ರೇಕಕ್ಕೆ ಒಳಗಾಗಬಹುದು. ಸುಪ್ತಮನಸ್ಸಿನ ವಿಚಾರಗಳು ಭಾವಸಹಿತ ಹೊರ ಬಂದಾಗ, ಆತನನ್ನು ಕಾಡುತ್ತಿರುವ ಮಾನಸಿಕ ಅಸ್ವಸ್ಥತೆಯ ಲಕ್ಷಣಗಳು ಗುಣವಾಗುತ್ತವೆ. ವ್ಯಕ್ತಿಯು ತನ್ನ ಧೋರಣೆ ಮತ್ತು ವರ್ತನೆಯನ್ನು ಬದಲಿಸಿಕೊಳ್ಳಲು ವೈದ್ಯಸಲಹೆ ನೀಡಬಹುದು.

ಯಾವುದೇ ವ್ಯಕ್ತಿ ಆಕಸ್ಮಿಕವಾಗಿ ಅಥವಾ ಆತ್ಮಹತ್ಯೆ ಮಾಡಿಕೊಳ್ಳುವ ಸಲುವಾಗಿ, ಫೀನೋಬಾರ್ಬಿಟೋನ್ ಮಾತ್ರೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನುಂಗಬಹುದು. ಆಗ ಆತ ಕೋಮಾ ಸ್ಥಿತಿಗೆ ಹೋಗುತ್ತಾನೆ. ಉಸಿರಾಟ ನಿಂತು ಸಾವು ಸಂಭವಿಸುತ್ತದೆ. ವ್ಯಕ್ತಿ ಈ ರೀತಿ ಹೆಚ್ಚು ಮಾತ್ರೆ ತಿಂದಿದ್ದಾನೆ ಎಂದು ಗೊತ್ತಾಗುತ್ತಿದ್ದಂತೆ ಉಪ್ಪು ನೀರು ಕುಡಿಸಿ ವಾಂತಿ ಮಾಡಿಸಬೇಕು. ವೈದ್ಯಕೀಯ ಚಿಕಿತ್ಸೆಗೆ ತತ್‌ಕ್ಷಣ ಆಸ್ಪತ್ರೆಗೆ ಸಾಗಿಸಬೇಕು. ನಿಮ್ಮ ಮನೆಯಲ್ಲಿ ಫಿಟ್ಸ್‌ರೋಗಿ ಇದ್ದು, ಫೀನೋಬಾರ್ಬಿಟೋನ್ ಮಾತ್ರೆಗಳು ನಿಮ್ಮಲ್ಲಿದ್ದರೆ, ಅವನ್ನು ಸುರಕ್ಷಿತ ಸ್ಥಳದಲ್ಲಿಡಿ. ಮಕ್ಕಳ ಕೈಗೆ ಸಿಗದಂತೆ ಅಥವಾ ಬೇಸರ, ದುಃಖ, ಭಾವೋದ್ವೇಗಕ್ಕೆ ಒಳಗಾದ ವ್ಯಕ್ತಿಗೆ ಸಿಗದಂತೆ ಎಚ್ಚರವಹಿಸಿ. ❑



# ತಿದ್ದುಪಡಿಯಾಗಬೇಕಾದ ನ್ಯಾಯ ವೈದ್ಯ ಕಾನೂನುಗಳು - ೬

## ಅಪಸ್ಮಾರ ರೋಗಿಗಳ ದುರ್ಭರ ಬದುಕು -II

ಡಾ|| ನಾ. ಸೋಮೇಶ್ವರ

**ಇಂದು ಭಾರತದಲ್ಲಿ ಅಪಸ್ಮಾರ ರೋಗಿಯೊಬ್ಬನ ಬದುಕು ಬಹಳ ದುರ್ಭರವಾಗಿದೆ. ಇವನು ಇತರ ರೋಗಿಗಳಿಗಿಂತ ಪರಿಪೂರ್ಣ ಭಿನ್ನ. ನಮ್ಮ ಕಾನೂನು ಅಪಸ್ಮಾರ ರೋಗಿಯನ್ನು ದ್ವಿತೀಯ ದರ್ಜೆ ಪ್ರಜೆಗಿಂತಲೂ ಕೀಳಾಗಿ ಕಾಣುತ್ತಿದೆ. ಶಾಸನದ ಬಗ್ಗೆ ಹಕ್ಕುಗಳು ಅವನಿಗೆ ದೊರೆಯುತ್ತಿಲ್ಲ. ಅವುಗಳ ಬಗ್ಗೆ ಒಂದು ಪಕ್ಷಿ ನೋಟವನ್ನು ಹರಿಸುವುದು ಈ ಲೇಖನದ ಉದ್ದೇಶ.**

### ಅಪಸ್ಮಾರ ಮತ್ತು ಡ್ರೈವಿಂಗ್ ಲೈಸೆನ್ಸ್:

ಮೋಟಾರು ವಾಹನಗಳು ವಿಜ್ಞಾನದ ಕೊಡುಗೆ. ಇದರಿಂದ ಆಗಿರುವ ಲಾಭಗಳ ಬಗೆಗೆ ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ. ಈ ಮೋಟಾರು ವಾಹನಗಳನ್ನು ನಡೆಸಲು ವಿಶೇಷವಾಗಿ ನಾವು ಕಲಿಯಬೇಕು. ಕಲಿತರೆ ಮಾತ್ರ ಸಾಲದು. ಅದರಲ್ಲಿ ಪ್ರಾವೀಣ್ಯತೆಯನ್ನೂ ಪಡೆಯಬೇಕು. ಆಗ ಮಾತ್ರ ನಮಗೂ ಹಾಗೂ ದಾರಿಹೋಕರಿಗೂ ಅಪಾಯವಾಗದಂತೆ ವಾಹನಗಳನ್ನು ನಡೆಸಬಹುದು. ಈ ಪ್ರಾವೀಣ್ಯತೆಯನ್ನು ಪಡೆದಿದ್ದೇವೆಯೋ ಅಥವ ಇಲ್ಲವೋ ಎಂಬುದನ್ನು ತಿಳಿದು ಪರವಾನಗಿ ನೀಡಲು ಪ್ರತ್ಯೇಕ ಇಲಾಖೆಯೇ ಇದೆ. ಈ ಇಲಾಖೆಯ ಚಟುವಟಿಕೆಗಳಿಗೆ ಮಾರ್ಗದರ್ಶಿ ಯಾಗಿ 'ಮೋಟಾರು ವಾಹನಗಳ ಕಾಯಿದೆ - ೧೯೩೯' ಎಂಬುದು ಜಾರಿಯಲ್ಲಿದೆ.

ಮೋಟಾರು ವಾಹನಗಳ ಕಾಯಿದೆ - ೧೯೩೯ ರ ಸೆಕ್ಷನ್ ೭ (೫)ರಲ್ಲಿ ಯಾವ ಸಂದರ್ಭಗಳಲ್ಲಿ ಒಬ್ಬರಿಗೆ ಮೋಟಾರು ವಾಹನಗಳನ್ನು ನಡೆಸಲು ಪರವಾನಗಿಯನ್ನು ಕೊಡಲಾಗದು ಎಂಬುದನ್ನು ವಿವರಿಸಿದೆ. ಅವುಗಳಲ್ಲಿ ಕೆಲವು ರೋಗಗಳನ್ನು ಹೊಂದಿರುವವರು ವಾಹನಗಳನ್ನು ನಡೆಸುವಂತಿಲ್ಲ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ರೋಗಗಳ ಪಟ್ಟಿಯಲ್ಲಿ ಮೊದಲ ಸ್ಥಾನ ಅಪಸ್ಮಾರದ್ದಾಗಿದೆ. ಆನಂತರ ಹುಚ್ಚು, ಇರುಳುಗುರುಡುತನ ಹೀಗೆ ಪಟ್ಟಿ ಸಾಗುತ್ತದೆ.

ಮೋಟಾರು ವಾಹನಗಳ ಕಾಯಿದೆ - ೧೯೩೯ರ ಸೆಕ್ಷನ್ ೧೧(೮) ರೋಗ ಇರುವುದರ ಬಗ್ಗೆ ಮರೆ ಮಾಚುವ ಚಾಲಕರಿಗೆ ನೀಡುವ ದಂಡ ಮತ್ತು ಶಿಕ್ಷೆಯ ಬಗ್ಗೆ ವಿವರಿಸುತ್ತದೆ. ಮೊದಲ ಅಪರಾಧಕ್ಕೆ ರೂ. ೨೦೦ ದಂಡ ಹಾಗೂ ಎರಡನೆಯ ಅಪರಾಧಕ್ಕೆ ರೂ. ೫೦೦ ದಂಡ ಹಾಕಲಾಗುತ್ತದೆ. ಹಾಗೂ ಪರವಾನಗಿಯನ್ನು ಹಿಂತೆಗೆದುಕೊಳ್ಳಲಾಗುತ್ತದೆ. ಬಂಧನ ಅಥವ ಜೈಲು ಶಿಕ್ಷೆಯ ಬಗ್ಗೆ ಪ್ರಸ್ತಾಪವಿಲ್ಲ. ಆದರೆ ಅಪರಾಧಿಯ ಗೆಣ್ಣು ಮೇಲೆ ನಾಲ್ಕು ಬಾರಿಸಬಹುದು ಅಷ್ಟೆ!

ಅಪಸ್ಮಾರ ಇರುವ ವ್ಯಕ್ತಿ ತನಗಿರುವ ರೋಗದ ಬಗ್ಗೆ ಚಕಾರವೆತ್ತುವುದಿಲ್ಲ. ವಾಹನ ನಡೆಸಲು ಪರವಾನಗಿ ಪಡೆದು ವಾಹನ ಓಡಿಸುತ್ತಾನೆ. ತನ್ನ ಹಿಂದೆ ಮತ್ತೊಬ್ಬರನ್ನು ಕೂರಿಸಿಕೊಂಡೂ ಹೋಗುತ್ತಾನೆ. ಅಷ್ಟು ಮಾತ್ರವಲ್ಲ. ಸಾರ್ವಜನಿಕ ಸಂಚಾರಿ ವಾಹನಗಳ (ಆಟೋ, ಟ್ಯಾಕ್ಸಿ, ಬಸ್ಸು, ರೈಲು ಇತ್ಯಾದಿ) ಚಾಲಕನಾಗಿ ಕೆಲಸಕ್ಕೂ ಸೇರಿಕೊಳ್ಳುತ್ತಾನೆ. ಈ ಹಿಂದೆ ಎಂದು ಸೆಳವು ಬಂದಿತ್ತು ಎಂದು ಯೋಚಿಸಲು ಹೋಗುವುದಿಲ್ಲ. ಔಷಧ ಸೇವನೆಯ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ದುರದೃಷ್ಟವಶಾತ್ ಇಂತಹ ಅಪಸ್ಮಾರೀ ಚಾಲಕರಿಂದ ಸಂಭವಿಸುವ ಅಪಘಾತಗಳ ಬಗ್ಗೆ ನಮ್ಮ ದೇಶದಲ್ಲಿ ಎಲ್ಲೂ ಅಧಿಕೃತ ದಾಖಲೆಗಳೇ ಇಲ್ಲ. ಆದರೂ ಒಂದು ಅಂದಾಜಿನಂತೆ ಅಪಸ್ಮಾರಿ ಕಾರಣ ಅಪಘಾತ ಸಂಭವಿಸುವ ಸಾಧ್ಯತೆ ೦.೨೫% ಗಿಂತಲೂ ಕಡಿಮೆಯಿರುತ್ತದೆ. ಆದರೆ ಪಾನಮತ್ತ ವ್ಯಕ್ತಿಗಳಿಂದ ಸಂಭವಿಸುವ ಅಪಘಾತಗಳ ಪ್ರಮಾಣ ೨೦% ಗಿಂತಲೂ ಅಧಿಕ!

### ಮೋ.ವಾ.ಕಾಯಿದೆ - ೧೯೮೮

ಈಗ ಮೋಟಾರು ವಾಹನಗಳನ್ನು ನಡೆಸಲು ಪರವಾನಗಿ ಪಡೆಯಬಯಸುವವರು ಮೋಟಾರು ವಾಹನ ಕಾಯಿದೆ - ೧೯೮೮ರ ಸೆಕ್ಷನ್ ೮ ಮತ್ತು ೯ಗಳ ಅನ್ವಯ ವಿಶೇಷ ಫಾರಂ ತುಂಬಬೇಕಾಗುತ್ತದೆ. ದೈಹಿಕ ಆರೋಗ್ಯ ಹಾಗೂ ಸದೃಢತೆಗೆ ಸಂಬಂಧಪಟ್ಟ ಹಾಗೆ ವೈದ್ಯ ಪ್ರಮಾಣ ಪತ್ರವನ್ನು ಕೊಡಬೇಕಾಗುತ್ತದೆ. ಇದರಲ್ಲಿ ಎರಡು ಭಾಗಗಳಿವೆ.

ಭಾಗ - I ನ್ನು, ಅಭ್ಯರ್ಥಿಯು ತುಂಬಬೇಕಾಗುತ್ತದೆ. ಇದರಲ್ಲಿ ಅಪಸ್ಮಾರಕ್ಕೆ ಸಂಬಂಧಿಸಿದಂತೆ ಒಂದು ಪ್ರಶ್ನೆಯಿರುತ್ತವೆ.. ''ನಿಮಗೆ ಅಪಸ್ಮಾರ, ಎಚ್ಚರ ತಪ್ಪುವಿಕೆ ಅಥವ ತಲೆಸುತ್ತು ಇತ್ಯಾದಿ ಇವೆಯೆ? ಇದ್ದರೆ ಪೂರ್ಣ ವಿವರಗಳನ್ನು ಕೊಡಿ'' - ಈ ಪ್ರಶ್ನೆಗೆ ಅಭ್ಯರ್ಥಿ ಉತ್ತರಿಸಬೇಕು.

ಭಾಗ - II ನ್ನು, ರಾಜ್ಯ ಸರ್ಕಾರದಿಂದ ನಿಗದಿಪಡಿಸಲಾದ ನೋಂದಾಯಿತ ವೈದ್ಯರು ತುಂಬುತ್ತಾರೆ. ಇಲ್ಲಿ ಒಂದು ಪ್ರಶ್ನೆಯಿರುತ್ತದೆ. ಮೋಟಾರು ಚಾಲನೆಗೆ ಅಡ್ಡಿಯನ್ನುಂಟು ಮಾಡಬಹುದಾದಂತಹ ಅಪಸ್ಮಾರ, ತಲೆಸುತ್ತು ಅಥವಾ ಮನೋರೋಗಗಳಿವೆಯೆ ? ಎಂದು ಪ್ರಶ್ನೆಯಿರುತ್ತದೆ.

ನೋಂದಾಯಿತ ವೈದ್ಯರು ಅಭ್ಯರ್ಥಿಗೆ ಅಪಸ್ಮಾರ ಇದೆಯೇ ಅಥವಾ ಇಲ್ಲವೇ ಎಂಬುದನ್ನು ತೀರ್ಮಾನಿಸಿ ವೈದ್ಯಕೀಯ ಸದೃಢತೆಯ ಪ್ರಮಾಣಪತ್ರ ನೀಡುತ್ತಾರೆ.

**ತಿದ್ದುಪಡಿ :**

ಭಾರತೀಯ ಅಪಸ್ಮಾರಿಗರ ಸಂಸ್ಥೆ (ಇಂಡಿಯನ್ ಎಪಿಲೆಪ್ಟಿಕ್ ಅಸೋಸಿಯೇಶನ್) ಯು ಅಪಸ್ಮಾರ ರೋಗಿಗಳಿಗೆ ವಾಹನಚಾಲನಾ ಪರವಾನಗಿಯನ್ನು ನೀಡುವುದರ ಬಗ್ಗೆ RTOಗೆ ಮಾರ್ಗದರ್ಶನವನ್ನು ನೀಡಿದೆ. ಜೊತೆಗೆ ನೋಂದಾಯಿತ ವೈದ್ಯರ ಉಪಯೋಗಕ್ಕೆ ಮಾರ್ಗದರ್ಶನವನ್ನು ನೀಡಲೆಂದು ರಾಜ್ಯ ಸರ್ಕಾರಗಳಿಗೂ ಮನವಿ ಮಾಡಿದೆ. ಇದನ್ನು ೧೯೯೨ರ ಸೆಪ್ಟೆಂಬರ್‌ನಲ್ಲಿ ಸಲ್ಲಿಸಿದೆ.




ಮಾರ್ಗದರ್ಶನದ ಸಾರಾಂಶ ಹೀಗಿದೆ.

★ ಅಭ್ಯರ್ಥಿಗೆ ಅಪಸ್ಮಾರ ನಿಂತು ಕನಿಷ್ಠ ೧ ರಿಂದ ೨ ವರ್ಷಗಳಾಗಿರಬೇಕು. ಆತ ಔಷಧವನ್ನು ಸೇವಿಸಿರಬಹುದು ಅಥವಾ ಸೇವಿಸದಿರಬಹುದು. ಆತ ೧ - ೨ ವರ್ಷಗಳ ಕಾಲ ಅಪಸ್ಮಾರ ಮುಕ್ತನಾಗಿದ್ದರೆ ಅವನು ವಾಹನ ಚಾಲನಾ ಪರವಾನಗಿ ಪಡೆಯಲು ಅರ್ಹನೆಂದೇ ಭಾವಿಸಬೇಕು.

★ ಅಪಸ್ಮಾರ ಮರುಕಳಿಸಿದುದರ ಬಗ್ಗೆ ವೈಯಕ್ತಿಕವಾಗಿ ನಿರ್ಧರಿಸಬೇಕು. ಸೆಳವು ಬಂದಿದ್ದಲ್ಲಿ ಅವನ ಪರವಾನಗಿಯನ್ನು ತಾತ್ಕಾಲಿಕವಾಗಿ ೩ - ೬ ತಿಂಗಳವರೆಗೆ ಹಿಂದೆಗೆದುಕೊಳ್ಳಬೇಕು.

★ ಅಪಸ್ಮಾರದ ಕಾರಣ ಅವನಲ್ಲಿ ಯಾವುದೇ ನರಕೊರತೆಗಳು ಇರಬಾರದು.

★ ತೆಗೆದುಕೊಳ್ಳುವ ತೀರ್ಮಾನಗಳಿಗೆ ಸಂಬಂಧಿಸಿದಂತೆ ಮೇಲ್ಮನವಿ ಸಲ್ಲಿಸಲು ಅವಕಾಶಗಳಿರಬೇಕು.

ಇದು ಮಾರ್ಗದರ್ಶನ ಮಾತ್ರ. ಕಾನೂನಲ್ಲ. ಅಪಸ್ಮಾರಿಗರನ್ನು ವೈಯಕ್ತಿಕವಾಗಿ ತುಲನೆ ಮಾಡಬೇಕು. ಎಲ್ಲರಿಗೂ ಒಂದೇ ಮಂತ್ರ ಎಂಬ ನೀತಿ ಸರಿಯಾದುದಲ್ಲ.

**ಅಪಸ್ಮಾರ ಮತ್ತು ಆರೋಗ್ಯ ವಿಮೆ :**

ಭಾರತದಲ್ಲಿ ಆರೋಗ್ಯ ವಿಮೆ (ಹೆಲ್ತ್ ಇನ್‌ಶ್ಯೂರನ್ಸ್) ಯು ೧೯೮೬ ರಿಂದ ದೊರೆಯುತ್ತಿದೆ. ಈ ಸೌಲಭ್ಯವು ೧೨-೭೦ ವರ್ಷಗಳ ವಯಸ್ಸಿನವರಿಗೆ ದೊರೆಯುತ್ತಿದೆ.

ಆರೋಗ್ಯ ವಿಮೆ ಕೆಲವು ರೋಗಗಳಿಗೆ ದೊರೆಯುತ್ತಿಲ್ಲ. ಅವುಗಳಲ್ಲಿ ಮುಖ್ಯವಾದವೆಂದರೆ ಅಸ್ತಮ, ಎಪಿಲೆಪ್ಸಿ, ಸಿಹಿ ಮೂತ್ರ ರೋಗ, ಅತಿರಕ್ತದೊತ್ತಡ ಇತ್ಯಾದಿಗಳು.

**ತಿದ್ದುಪಡಿ :**

ಅಪಸ್ಮಾರವು ಮಿದುಳಿನ ಒಂದು ರೋಗ. ಇದನ್ನು ಹೊಂದಿರುವವರಿಗೆ ಆರೋಗ್ಯ ವಿಮಾ ಸೌಲಭ್ಯ ದೊರೆಯಬೇಕು.

(ಮುಂದುವರಿಯುವುದು)

## ಹೃದಯ ರೋಗಕ್ಕೆ ಏನು ಕಾರಣ?

ವಿಶ್ವಾದ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಜನರು ಹೃದಯನಾಳ, ಹೃದಯ ಕವಾಟ ಇತ್ಯಾದಿ ನಾನಾ ಹೃದಯ ಸಂಬಂಧಿತ ರೋಗಗಳಿಗೆ ತುತ್ತಾಗಿ ಸಾವಿಗೀಡಾಗುತ್ತಾರೆ. ಹೃದಯಾಘಾತಕ್ಕೆ ಮಾನಸಿಕ ಒತ್ತಡ, ಅನುವಂಶೀಯ ಗುಣಗಳೂ ಸ್ವಲ್ಪಮಟ್ಟಿಗೆ ಕಾರಣವಾಗಿರಬಹುದು. ಎಣ್ಣೆಯ ಪದಾರ್ಥಗಳ ಸೇವನೆ, ಧೂಮ್ರಪಾನಗಳನ್ನೂ ಹೃದಯ ರೋಗಕ್ಕಾಗಿ ದೂಷಿಸಲಾಗುತ್ತದೆ. ಆದರೆ ಹೃದಯ ಬೇನೆಗೆ ಒಳಗಾಗಿರುವವರೆಲ್ಲ ಇಂಥ ಚಟಗಳನ್ನು ಹೊಂದಿರುವುದು ಕಂಡುಬಂದಿದೆ.

ಇತ್ತೀಚೆಗೆ ವೈದ್ಯಕೀಯ ಸಂಶೋಧಕರು ಹೃದಯದ ವ್ಯಾಧಿಗಳಿಗೆ ಒಂದು ಸಾಂಕ್ರಾಮಿಕ ರೋಗಾಣುವೂ ಕಾರಣವಾಗಬಹುದೆಂಬ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ.

ಹೃದಯ ವ್ಯಾಧಿಗೆ ಸಿ.ನ್ಯುಮೋನಿಯಾ ಎಂಬ ಬ್ಯಾಕ್ಟೀರಿಯಾ ಕಾರಣವೆಂದು ಗಾಳಿಯಲ್ಲಿ ಓಡಾಡುವ ಈ ಬ್ಯಾಕ್ಟೀರಿಯಾಗಳು ಒಮ್ಮೆ ಶ್ವಾಸಕೋಶಗಳನ್ನು ತಲುಪಿದರೆ ಅವು 'ಮ್ಯಾಕ್ರೋಫೇಗ್ಸ್' ಎಂಬ ರೋಗ ನಿರೋಧಕ ಜೀವಕೋಶಗಳನ್ನು ಪ್ರವೇಶಿಸುತ್ತವೆ. ಸಿ. ನ್ಯುಮೋನಿಯಾ ಬ್ಯಾಕ್ಟೀರಿಯಾಗಳು ಸ್ನಿಗ್ಧಮಯವಾದ ಮತ್ತು ಕ್ಯಾಲ್ಷಿಯಂ ಸಂಗ್ರಹಗಳಲ್ಲಿ ಶೇಖರಣೆಯಾಗಿ ಹೃದಯಕ್ಕೆ ಪೂರೈಕೆಯಾಗುವ ರಕ್ತದ ನಾಳಗಳನ್ನು ಕುಗ್ಗಿಸಿ ರಕ್ತಚಲನೆಗೆ ತೊಡಕನ್ನುಂಟು ಮಾಡುತ್ತವೆ.

ಹಾಗಾದರೆ ಸಿ. ನ್ಯುಮೋನಿಯಾ ಬ್ಯಾಕ್ಟೀರಿಯಾಗಳನ್ನು ಜೀವ ನಿರೋಧಕ (Anti-Biotic) ಔಷಧಿಗಳಿಂದ ಸಾಯಿಸಿ ಹೃದಯ ಬೇನೆಯನ್ನು ತಡೆಯಬಹುದಲ್ಲವೆ? ಅಮೆರಿಕದ ಅನೇಕ ಆಸ್ಪತ್ರೆಗಳಲ್ಲಿ ಇಂಥ ಜೀವ ನಿರೋಧಕ ಔಷಧಿಗಳು ಅನೇಕ ಹೃದಯಾಘಾತಗಳನ್ನು ತಪ್ಪಿಸಿದ್ದು ಕಂಡುಬಂದಿದೆ.

ರಕ್ತನಾಳಗಳಲ್ಲಿ ರಕ್ತಚಲನೆಗೆ ತಡೆ ಉಂಟಾದ ಬಹಳಷ್ಟು ಪ್ರಕರಣಗಳಲ್ಲಿ ಸಿ. ನ್ಯುಮೋನಿಯಾ ಕಾರಣವಾಗಿರುವುದು ಕಂಡುಬಂದಿದೆ.

ಈ ಸಿ.ನ್ಯುಮೋನಿಯಾ ಬ್ಯಾಕ್ಟೀರಿಯಾಗಳು ಹೇಗೆ ಕೆಲಸ ಮಾಡುತ್ತವೆ? ಜ್ಯಾಕ್ಸನ್ ಎಂಬ ಸಂಶೋಧಕರು ಹೀಗೆ ವಿವರಿಸುತ್ತಾರೆ - ಶ್ವಾಸಕೋಶಗಳಲ್ಲಿರುವ ರೋಗ ನಿರೋಧಕ ಮ್ಯಾಕ್ರೊಫೇಗ್ಸ್ ಜೀವಕೋಶಗಳನ್ನು ಅವು ರೋಗಗ್ರಸ್ತಗೊಳಿಸುತ್ತವೆ. ಸಾಮಾನ್ಯವಾಗಿ ಮ್ಯಾಕ್ರೊಫೇಗ್ಸ್ ಜೀವಕೋಶಗಳು ಈ ಬ್ಯಾಕ್ಟೀರಿಯಾಗಳನ್ನು ಸಾಯಿಸಿ ಬಿಡುತ್ತವೆ. ಆದರೆ ಈ ಬ್ಯಾಕ್ಟೀರಿಯಾಗಳು ಮ್ಯಾಕ್ರೊಫೇಗ್ಸ್‌ಗಳ ರೋಗನಿರೋಧಕ ಶಕ್ತಿಯನ್ನು ನಾಶಗೊಳಿಸುತ್ತವೆ. ಇವು ರಕ್ತದ ಮೂಲಕ ಶರೀರದಲ್ಲೆಲ್ಲ ಸಂಚರಿಸಿ ಹೃದಯ ರಕ್ತನಾಳದ ಕೆಳಗೆ ಶೇಖರಣೆಯಾಗಿ ಬಿಡುತ್ತವೆ. ಅಲ್ಲಿ ಸ್ನಿಗ್ಧ ಪದಾರ್ಥವನ್ನು ಹೀರಿಕೊಂಡು ಗಟ್ಟಿಯಾಗಿ, ರಕ್ತಚಲನೆಗೆ ಅವು ತೊಡಕನ್ನುಂಟುಮಾಡುತ್ತವೆ.

ಹೃದಯ ಶಸ್ತ್ರಚಿಕಿತ್ಸೆಯ ಬದಲು ಜೀವ ನಿರೋಧಕ ಔಷಧಿಗಳನ್ನು ಬಳಸಬಹುದು.

# ಆರೋಗ್ಯಕ್ಕಾಗಿ ಆಡುಸೋಗೆ



● ಡಾ। ಶಶಿಕಾಂತ ಅ. ಕಾಂಬಳೆ

**ಪ್ರಕೃತಿಯ ಮಡಿಲಲ್ಲಿ ಎಲ್ಲವೂ ಅಡಗಿದೆ. ನಮ್ಮ ಪ್ರತಿಯೊಂದು ರೋಗ, ಸಮಸ್ಯೆಗಳನ್ನು ನಿವಾರಿಸುವ, ಅವಶ್ಯಕತೆಗಳನ್ನು ಪೂರೈಸುವ ಸಾಮರ್ಥ್ಯ ಆದಕ್ಕಿದೆ. ಕಾಳುಗಳು, ಕಾಯಿಪಲ್ಯ, ಹಸಿರು ಸೊಪ್ಪುಗಳಲ್ಲಿರುವ ಪೌಷ್ಠಿಕತೆ, ಔಷಧೀಯ ಗುಣಗಳಲ್ಲಿ ಒಂದಿಷ್ಟನ್ನು ನಾವು ತಿಳಿದುಕೊಂಡರೆ, ಅವುಗಳ ಸದುಪಯೋಗ ನಮಗಾಗದಿರದು.**

ಆಡುಸೋಗೆಯನ್ನು, ಅಡ್ಡಸರ, ಅಡಸಾಲ ಹಾಗೂ ಆಡು ಮುಟ್ಟದ ಬಳ್ಳಿ ಎಂದು ಕರೆಯುವರು. ಇದನ್ನು ಹೆಚ್ಚಾಗಿ ಹಳ್ಳಿಗಳಲ್ಲಿ ಬೇಲಿಯ ರಕ್ಷಣೆಗೆಂದು ನೆಡುತ್ತಾರೆ. ಇದು ಸಸ್ಯವರ್ಗದಲ್ಲಿ ವಾಸಕ ವರ್ಗವಾಗಿದ್ದು, ಇದು ಮೂಲತಃ ಚೀನಾ ದೇಶದ್ದೆಂದು ತಿಳಿದು ಬರುತ್ತದೆ.

ಈ ಗಿಡವು ಭಾರತದ ಪರ್ವತದ ನಿಮ್ನ ಪ್ರದೇಶಗಳಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡರೂ ವಿವಿಧ ಕಡೆಗಳಲ್ಲಿಯೂ ಇದನ್ನು ಕಾಣಬಹುದಾಗಿದೆ.

ಆಡುಸೋಗೆಯ ಎಲೆ, ಹೂ, ಚಕ್ಕೆ ಹಾಗೂ ಬೇರುಗಳನ್ನು ಉಪಯೋಗಿಸಲಾಗುತ್ತಿದೆ. ಇವುಗಳಲ್ಲಿ ಆಡುಸೋಗೆಯ ಎಲೆಗಳು ಹೆಚ್ಚು ಪ್ರಯೋಜನಕಾರಿ ಇದ್ದು, ಅನೇಕ ರೋಗಗಳಿಗೆ ಇದರ ಎಲೆಯ ರಸವನ್ನು ಬಳಸುವುದುಂಟು. ಅದರಂತೆ ಇದರ ಬೇರುಗಳನ್ನು ಸಹಿತ ಉಪಯೋಗಿಸುತ್ತಾರೆ. ಇದರ ಎಲೆಯಲ್ಲಿರುವ ರಸವೇ ಮೂಲ ದ್ರವ್ಯಗುಣ ಎಂದು ತಿಳಿಯಬಹುದು. ಎಲೆಯ ರಸದಲ್ಲಿ ವ್ಯಾಸಿಸಿನ್, ವ್ಯಾಸಿನೋನ, ಅಲ್ಕಾಲಾಯಿಡ್, ವಾಲಟಾಯಲ್, ಅಡಬೋಡ ಹಾಗೂ ಇನ್ನಿತರವು ಇರುವುದುಂಟು. ಆಲೋಲಾಯಿಡ್ ದ್ರವ್ಯ ಈ ಎಲೆಯಲ್ಲಿ ಇರುವುದರಿಂದ ಇದನ್ನು ಆಡುಗಳು ಮುಟ್ಟದೇ ಇರುವುದರಿಂದ (ಕಹಿ ಪದಾರ್ಥವಿದ್ದ ಅಂಶ) ಆಡು ಮುಟ್ಟದ ಬಳ್ಳಿ ಅಥವಾ ಗಿಡ ಎಂದು ಹೆಸರಿಸಬಹುದು.

ವ್ಯಾಸಿಸಿನ್ ಮತ್ತು ವ್ಯಾಸಿನೋನ ಎಂಬ ಕಹಿ ಪದಾರ್ಥಗಳು ಶ್ರೇಷ್ಠ ಔಷಧೀಯ ಗುಣಗಳನ್ನು ಹೊಂದಿವೆ ಎಂದು ಇಂಗ್ಲೆಂಡಿನ ವಿಜ್ಞಾನಿ ಡೇವಿಡ್ ಹಾವರ ಎಂಬುವರು ಕಂಡು ಹಿಡಿದರು. ಇದರಿಂದಾಗಿ ಈ ಗಿಡದ ಮೂಲದ್ರವ್ಯ ಗುಣವನ್ನು ಬಳಸಿಕೊಂಡು ಅನೇಕ ಔಷಧಿ ತಯಾರಿಕಾ ಕಂಪನಿಯವರು ಹೆಸರುವಾಸಿಯಾಗಿದ್ದಾರೆ. ಉದಾಹರಣೆಗೆ ಗ್ಲೈಕೋಡಿನ್ ಸಿರಪ್, ಕಾಪ್ರಾನ್, ವಾಸಕ ಹಾಗೂ ಇನ್ನೂ ಅನೇಕ ತರಹದ ಔಷಧಿಗಳನ್ನು ತಯಾರಿಸಲಾಗುತ್ತಿದೆ.

ಕೆಲವು ವರ್ಷಗಳ ಹಿಂದೆ ಸರ್ಜನ್ ಜಿ.ಎಫ್ ಡಬ್ಲ್ಯೂ, ಮಿಡೋಜ ಎಂಬ ಪಾಶ್ಚಾತ್ಯ ಚಿಕಿತ್ಸಕರು ಆಡುಸೋಗೆಯ ಹಸಿ ಎಲೆಗಳಿಂದ ಕಷಾಯವನ್ನು ಮಾಡಿ ಕುಡಿಸುವುದರಿಂದ ಕಫವು ವಿಶೇಷ ವಾಗಿ ಬೀಳುತ್ತಿರುವ ಕೆಮ್ಮುಗಳಿಗೆ ವಿಶೇಷ ಪರಿಹಾರ ಕಂಡುಕೊಳ್ಳುತ್ತಿರಬಹುದೆಂದು ಸೂಚಿಸಿದ್ದಾರೆ. ಅದರಂತೆ ಮದ್ರಾಸಿನ ಸರ್ಜನರಾಗಿದ್ದ ಫಿ.ರೆಸಲೀ ಮೆಕಾಕೋಲ್ ಎಂಬುವರು ಕೂಡ ಆಡುಸೋಗೆಯ ಎಲೆಗಳನ್ನು ನೀರಿನಲ್ಲಿ ಕುದಿಸಿ ಅದರ ನೇಕವನ್ನು ಕೊಡುವುದರಿಂದ ಕೀಲುನೋವಿನಿಂದ ಬಳಲುತ್ತಿರುವ ರೋಗಿಗಳು ಗುಣಹೊಂದಿದ ಬಗ್ಗೆ ಉಲ್ಲೇಖಿಸಿದ್ದಾರೆ.

ಪೂರ್ವಕಾಲದಿಂದಲೂ ಈ ಗಿಡದ ಔಷಧಿಯ ಕುರಿತಾಗಿ ಅನೇಕ ಆಯುರ್ವೇದ ಗ್ರಂಥಗಳಲ್ಲಿಯೂ ಕೂಡ ಇದರ ಔಷಧೀ ಗುಣಗಳನ್ನು ತಿಳಿಸಿದ್ದಾರೆ. ಅಂದರೆ ಕೆಮ್ಮು, ದಮ್ಮು, ಅಸ್ತಮಾ, ಜ್ವರ, ಅತಿಸಾರ, ವಾಂತಿ, ಕಫಗಳಲ್ಲಿ ಹಾಗೂ ಬ್ರಾಂಕೈಟಸ್ ಎದೆಯ ಕಫವನ್ನು ನೀರಾಗಿಸುವ ಗುಣ ಹೊಂದಿದೆ. ಅದರಂತೆ ಚರ್ಮವ್ಯಾಧಿಗಳಾದ ತುರಿಕಜ್ಜಿ, ಇಸಬು, ಕುಷ್ಠ ಹಾಗೂ ಶ್ವೇತ ಕುಷ್ಠ ಇವಲ್ಲದೇ ಇನ್ನೂ ಹಲವಾರು ರೋಗಗಳಲ್ಲಿ ಬಳಸಬಹುದಾಗಿದೆ.

***ಕೆಮ್ಮು, ದಮ್ಮು, ಕಫ, ಪಾಂಡುರೋಗ ಹಾಗೂ ಉಸಿರಾಟದ ತೊಂದರೆ ನಿವಾರಣೆಗೆ:***

ಆಡುಸೋಗೆಯ ಹಣ್ಣೆಲೆಯ ರಸ ೫ ಚಹಾ ಚಮಚೆ ಪ್ರಮಾಣದಲ್ಲಿ ೧ ಚಮಚ ಜೇನುತುಪ್ಪ ಹಾಗೂ ಹಸಿ ಶುಂಠಿ ರಸ, ೧ ಚಮಚ ಇವೆಲ್ಲವನ್ನು ಮಿಶ್ರಣಗೊಳಿಸಿ ದಿನಾಲು ೨ ವೇಳೆ ಸೇವಿಸಬೇಕು. ಅದರಂತೆ ಮಕ್ಕಳಿಗೆ ವಯಸ್ಸಿಗೆ ಅನುಸಾರವಾಗಿ ಪ್ರಮಾಣವನ್ನು ಕಡಿಮೆಮಾಡಿ ಕೊಡಬಹುದು.

***ಕ್ಷಯದ ಕೆಮ್ಮು ಹಾಗೂ ರಕ್ತಪಿತ್ತದ ನಿವಾರಣೆಗೆ:***

ಆಡುಸೋಗೆಯ ಎಲೆಯ ರಸ ೬೦ ಗ್ರಾಂ ಹಾಗೂ ೩೦ ಗ್ರಾಂ ಕಲ್ಲುಸಕ್ಕರೆ ಸೇರಿಸಿ ಒಲೆಯ ಮೇಲಿಟ್ಟು ಮಂದಾಗ್ನಿಯಿಂದ ಬೇಯಿಸಿ ತೈಲ ಪಾಕದಂತಿದ್ದಾಗ ಇಳಿಸಿ ಇದಕ್ಕೆ ೧೫ ಗ್ರಾಂ ಜೇನುತುಪ್ಪ ಸೇರಿಸಿ ಮಿಶ್ರಣಗೊಳಿಸಿ ಈ ಲೇಹ್ಯವನ್ನು ನಿತ್ಯ ಬೆಳಿಗ್ಗೆ ಹಾಗೂ ರಾತ್ರಿ ಅರ್ಧದಿಂದ ೧ ಚಹಾ ಚಮಚೆ ಪ್ರಮಾಣದವರೆಗೆ ಸೇವಿಸಬಹುದಾಗಿದೆ.

***ಮಧುಮೇಹಕ್ಕೆ :***

ಆಡುಸೋಗೆಯ ಬೇರಿನ ೪ ಚಹಾ ಚಮಚೆ ಕಷಾಯಕ್ಕೆ ೨ ಚಮಚ ಬಿಲ್ವ ಪತ್ರಿಯ ರಸವನ್ನು ಮಿಶ್ರಣಗೊಳಿಸಿ ದಿನಾಲು ೨ ವೇಳೆ ಸೇವಿಸಬೇಕು. ಕಜ್ಜಿ, ತುರಿಕೆ, ತದ್ದು ಹಾಗೂ ಇನ್ನಿತರ ವ್ಯಾಧಿಗಳು ಗುಣಹೊಂದಬಹುದು.

***ಚರ್ಮವ್ಯಾಧಿಗೆ : (ಲೇಪನಕ್ಕಾಗಿ)***

ಆಡುಸೋಗೆಯ ಚಿಗುರೆಲೆಗಳನ್ನು ಸ್ವಲ್ಪ ಅರಿಸಿನ ಹಾಗೂ ಗೋ ಮೂತ್ರದಲ್ಲಿ ಅರೆದು ನಂತರ ಲಿಂಬೆ ರಸವನ್ನು ಮಿಶ್ರಣ ಮಾಡಿ ಈ ಲೇಪನ ವನ್ನು ಚರ್ಮವ್ಯಾಧಿಗೆ ಬಳಸಬಹು ದಾಗಿದೆ.

***ಅತೀ ಉಷ್ಣದಿಂದ ಮೂಗಿನಲ್ಲಿ ರಕ್ತಸ್ರಾವ ಕಂಡಾಗ:***

ಆಡುಸೋಗೆಯ ರಸ ೪ ಚಹಾ ಚಮಚೆ ಹಾಗೂ ೮ ಚಹಾ ಚಮಚೆ ಆಕಳ ಹಸಿಯ ಹಾಲು ಸೇರಿಸಿ ೨ ವೇಳೆ ಪ್ರತಿ ದಿನ ಸೇವಿಸಬೇಕು.

***ಒಸಡು ಬಾವು ಹಾಗೂ ನೋವು ಕಾಣಿಸಿದಲ್ಲಿ:***

ಆಡುಸೋಗೆಯ ಎಲೆಯನ್ನು ಅರೆದು ಅದರಲ್ಲಿ ಉಪ್ಪು ಹಾಗೂ ಪಟಕವನ್ನು ಮಿಶ್ರಣ ಗೊಳಿಸಿ ಈ ಮಿಶ್ರಣಕ್ಕೆ ಸ್ವಲ್ಪ ಬಿಸಿ ನೀರನ್ನು ಹಾಕಿ ಈ ನೀರಿನಿಂದ ಬಾಯಿ ಮುಕ್ಕಳಿಸಬೇಕು.

**ಕಾಮಾಲೆಗೆ:**

ಆಡುಸೋಗೆಯ ಎಲೆಯನ್ನು ಬೆಂಕಿಯಲ್ಲಿ ಬಾಡಿಸಿ, ರಸ ತೆಗೆದು ೧೫-೨೦ ಹನಿಗಳ ರಸಕ್ಕೆ $^1/_3$ ಭಾಗ ಜೇನುತುಪ್ಪ ಸೇರಿಸಿ ದಿನಾಲು ಎರಡು ವೇಳೆ ಸೇವಿಸಬೇಕು. ವಯಸ್ಸಿಗೆ ತಕ್ಕಂತೆ ಪ್ರಮಾಣ ವನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಬೇಕು.

***ಮಕ್ಕಳಲ್ಲಿ ಕಂಡು ಬರುವ ಬೆವರುಸಾಲೆ, ಬಿಸಿಲು ಗುಳ್ಳೆಗಳು, ದಡಾರ, ಅಮ್ಮ ಇತ್ಯಾದಿ:***

ಆಡುಸೋಗೆ ಎಲೆಯ ರಸ ಒಂದು ಚಮಚೆ, ಇದಕ್ಕೆ ಅರ್ಧ ಚಮಚೆ ಜೇನುತುಪ್ಪವನ್ನು ಮಿಶ್ರಣ ಗೊಳಿಸಿ ದಿನಾಲು ಮೂರು ವೇಳೆ ವಯಸ್ಸಿನ ಅನುಗುಣವಾಗಿ ಹೊಟ್ಟೆಗೆ ಕೊಡಬೇಕು. ಅದರಂತೆ ಬಾಹ್ಯಲೇಪನಕ್ಕಾಗಿ ಎಲೆಯನ್ನು ಕೊಬ್ಬರಿ ಎಣ್ಣೆಯೊಂದಿಗೆ ಅರೆದು ಮೈಗೆ ಲೇಪಿಸಬೇಕು.

***ಸಂಧಿವಾತ:***

ಆಡುಸೋಗೆ ಎಲೆ, ಕಾಮಕಸ್ತೂರಿ ಎಲೆ ಹಾಗೂ ಲಕ್ಕೆ ಎಲೆ ಇವುಗಳನ್ನು ಚೆನ್ನಾಗಿ ಅರೆದು ಪೇಸ್ಟ್ ತರಹ ತಯಾರಿಸಿ, ನೋವು ಇದ್ದ ಸ್ಥಳಕ್ಕೆ ದಪ್ಪನಾಗಿ ಲೇಪಿಸಿ, ಬೆಂಕಿಯ ಕಾವು ಕೊಡಬೇಕು.

***ಶೀತದಿಂದ ಬಂದಂತಹ ಕೆಮ್ಮು, ನೆಗಡಿ ಇನ್ನಿತರ ಶ್ವಾಸದ ತೊಂದರೆಗಳಿಗೆ:***

ಆಡುಸೋಗೆಯ ಎಲೆಯ ರಸ, ಅರಿಶಿನ, ಹವಿಜ, ಅಮೃತಬಳ್ಳಿ ಸತ್ವ, ಶುಂಠಿ, ಹಿಪ್ಪಲಿ ಇವೆಲ್ಲವುಗಳನ್ನು ಸಮ ಪ್ರಮಾಣದಲ್ಲಿ ಮಿಶ್ರಣ ಗೊಳಿಸಿ ಕಷಾಯವನ್ನು ಸಿದ್ಧಪಡಿಸಿಕೊಂಡು ಅದರಲ್ಲಿ ಜೇನುತುಪ್ಪವನ್ನು ಮಿಶ್ರಣಗೊಳಿಸಿ ದಿನಾಲು ಮೂರು ವೇಳೆ ಎರಡು ಚಹಾ ಚಮಚೆ ಪ್ರಮಾಣದಷ್ಟು ಹೊಟ್ಟೆಗೆ ತೆಗೆದುಕೊಳ್ಳಬಹುದು. ಹಾಗೂ ಕ್ಷಯ ರೋಗಿಗಳು ಸಹಿತ ಎಲೆಯ ರಸಕ್ಕಿಂತ ಬೇರಿನ ರಸವನ್ನು ಕಷಾಯ ರೂಪದಲ್ಲಿ ಸೇವಿಸುವುದು ಒಳಿತು.

***ಮಕ್ಕಳಾಗದವರು :(ಸ್ತ್ರೀಯರಿಗೆ)***

ಆಡುಸೋಗೆಯ ಬೇರು, ಅಮೃತ ಸತ್ವ ಬ್ರಹ್ಮದಂಡಿ, ಗಜಗದ ಒಳಗಿನ ಹೊಂಗು ೧ (ಪಪ್ಪು) ಹಾಗೂ ಅಶ್ವಗಂಧಿ ಇವೆಲ್ಲವನ್ನು ಸಮ ಪ್ರಮಾಣದಲ್ಲಿ ಮಿಶ್ರಣಗೊಳಿಸಿ ದಿನಾಲು ಎರಡು ವೇಳೆ ಮುಟ್ಟಾದ ಐದನೇ ದಿನದಿಂದ ಹದಿನಾಲ್ಕನೇ ದಿನದವರೆಗೆ ೧೫ರಿಂದ ೨೫ ಗ್ರಾಂ ದವರೆಗೆ ಈ ಮಿಶ್ರಣವನ್ನು ಪ್ರತಿ ಬಾರಿಗೆ ಹೊಟ್ಟೆಗೆ ತೆಗೆದು ಕೊಂಡು ಒಂದು ಗ್ಲಾಸ್ ಹಾಲು ಕುಡಿಯಬೇಕು.

**ಇಸಬಿಗೆ:**

ಆಡುಸೋಗೆಯ ಎಲೆಯ ರಸ, ಹುಲಗಲ ಎಣ್ಣೆ, ಬೇವಿನ ಎಣ್ಣೆ ಮೂರನ್ನು ಮಿಶ್ರಣಗೊಳಿಸಿ ಚರ್ಮಕ್ಕೆ ಹಚ್ಚಬಹುದು.

**ಉರಿಮೂತ್ರ:**

ಆಡುಸೋಗೆಯ ಬೇರಿನ ಕಷಾಯದಲ್ಲಿ ಕಲ್ಲುಸಕ್ಕರೆ ಮಿಶ್ರಣಗೊಳಿಸಿ ದಿನಾಲು ಎರಡು ವೇಳೆ ಹೊಟ್ಟೆಗೆ ತೆಗೆದುಕೊಳ್ಳುವುದು.

**ಸ್ತ್ರೀಯರಲ್ಲಿ ಕಂಡು ಬರುವ ಮಾಸಿಕ ಅತೀ ರಕ್ತಸ್ರಾವಕ್ಕೆ:**

ಆಡುಸೋಗೆಯ ಎಲೆಯ ರಸ ಹಾಗೂ ನಾಗಕೇಸರಿಯನ್ನು ಮಿಶ್ರಣಗೊಳಿಸಿ ಹೊಟ್ಟೆಗೆ ತೆಗೆದುಕೊಳ್ಳಬಹುದು.

**ಬಿಳಿ ಸೆರಗಿಗೆ:**

ಆಡುಸೋಗೆಯ ಎಲೆಯ ರಸ ಹಾಗೂ ಲೋಳ ಸರವನ್ನು ಮಿಶ್ರಣಗೊಳಿಸಿ ದಿನಾಲು ಎರಡು ವೇಳೆ ಹೊಟ್ಟೆಗೆ ಕೊಡಬಹುದು.

**ಮೂತ್ರ ಬಂದಾದಲ್ಲಿ:**

ಆಡುಸೋಗೆಯ ಎಲೆಯ ರಸ, ಬಿಳಿ ಗಣಜಲಿ ಬೇರು, ಇವುಗಳನ್ನು ಕೂಡಿಸಿ ಹೊಟ್ಟೆಗೆ ಕೊಡಬಹುದು.

**ಮುಖದಲ್ಲಿ ಕಂಡು ಬರುವ ಕಪ್ಪು ಕಲೆಗಳು ಹಾಗೂ ಸುಕ್ಕುಗಟ್ಟುವಿಕೆ ತಡೆಯಲು:**

ಆಡುಸೋಗೆಯ ರಸದಲ್ಲಿ ಅರಿಶಿನ, ಕೊಬ್ಬರಿ ಎಣ್ಣೆ, ಭಜಿ, ಇವೆಲ್ಲವನ್ನು ಮಿಶ್ರಣ ಗೊಳಿಸಿ ರಾತ್ರಿ ನೆನೆ ಇಟ್ಟು ಮರುದಿನ ಈ ಮಿಶ್ರಣ ವನ್ನು ಕಾಯಿಸಿ ತೈಲ ಮಾಡಿ, ಈ ತೈಲವನ್ನು ದಿನಕ್ಕೆ ಎರಡು ಸಾರಿ ಮುಖಕ್ಕೆ ಹಚ್ಚಿಕೊಂಡು, ಅರ್ಧ ಗಂಟೆಯ ನಂತರ ಮುಖವನ್ನು ತೊಳೆದುಕೊಳ್ಳ ಬೇಕು. ಆದರೆ ಯಾವುದೇ ತರಹದ ಹೊಸ ಬೆಡಗಿನ ಸಾಬೂನುಗಳನ್ನು ಉಪಯೋಗಿಸ ಬಾರದು. ಒಂದು ವೇಳೆ ನಿಮಗೆ ಮುಖವನ್ನು ತೊಳೆದುಕೊಳ್ಳಬೇಕಾದಲ್ಲಿ ಹೆಸರುಬೇಳೆ ಹಿಟ್ಟಿ ನಿಂದ ಮುಖ ತೊಳೆದುಕೊಳ್ಳಬಹುದು.

ಹಲವಾರು ಔಷಧಿಗಳಿಗೆ ಉಪಯೋಗಿ ಯಾದ ಆಡುಸೋಗೆಯ ಎಲೆಗಳಿಗೆ ಗರ್ಭಪಾತ ಮಾಡುವ ಶಕ್ತಿ ಇದೆ ಎಂದು ಇತ್ತೀಚಿಗೆ ಜಮ್ಮುವಿನ ಪ್ರಾದೇಶಿಕ ಸಂಶೋಧನಾ ಸಂಸ್ಥೆ ಪ್ರಕಟಿಸಿದೆ. ಎಲೆ ಯಲ್ಲಿರುವ ವ್ಯಾಸೀಸಿನ್ ಎಂಬ ರಾಸಾಯನಿಕ ಕೇವಲ ಒಂದು ಮಿಲಿಗ್ರಾಂನಷ್ಟು ಸ್ತ್ರೀಯ ದೇಹ ವನ್ನು ಸೇರಿದರೂ (ಆಕೆ ಗರ್ಭಿಣಿಯಾಗಿದ್ದರೆ) ಗರ್ಭಾಶಯದ ಒಳಗೋಡೆಯನ್ನು ಪ್ರಚೋದಿ ಸುತ್ತದೆ. ಗರ್ಭಪಾತವನ್ನುಂಟು ಮಾಡುತ್ತದೆಂದು ಇಲಿ ಹಾಗೂ ಮೊಲಗಳ ಮೇಲೆ ನಡೆಸಿದ ಪ್ರಯೋಗಗಳಿಂದ ಗೊತ್ತಾಗುತ್ತದೆ. ಬೇಡದ ಗರ್ಭವನ್ನು ಬಹು ಸುಲಭದಲ್ಲಿ ಇಳಿಸಲು ಸಹಾಯಕವಾಗಿರಬಹುದಾದ ಔಷಧಿ ಬಹು ಬೇಗನೆ ಇದರಿಂದ ತಯಾರಾಗಲಿದೆ. ಆಡು ಸೋಗೆ ಎಲೆಗಳನ್ನು ಕೀಟಗಳು ತಿಂದರೆ ಅವುಗಳ ಮೊಟ್ಟೆಯಿಡುವ ಶಕ್ತಿ ಶೇ. ೫೦ ತಗ್ಗುವುದಲ್ಲದೆ ಇರಿಸಿದ ಮೊಟ್ಟೆಗಳಲ್ಲಿ ಅರ್ಧಾಂಶ ಮರಿಗಳಾಗು ವುದಿಲ್ಲ ಎನ್ನುವುದು ಗೊತ್ತಾಗಿದೆ. ಇದರಿಂದ ಗರ್ಭನಿರೋಧಕ ತಯಾರಾಗಲು ಅವಕಾಶವಿದೆ. ಇದರ ಕೆಮ್ಮಿನ ಔಷಧಿಗಳಿಂದ ಗರ್ಭಿಣಿಯರಿಗೆ ಯಾವ ತೊಂದರೆಯೂ ಇಲ್ಲ.

ಆಡುಸೋಗೆಯಿಂದಲೇ ಅನೇಕ ತರಹದ ಸಿದ್ಧ ಔಷಧಿಗಳನ್ನು ತಯಾರಿಸಲಾಗುತ್ತದೆ. ಅಂದರೆ ಕೆಮ್ಮಿನ ಔಷಧಿಗಳು, ಮಾತ್ರೆಗಳು, ಇಂಜೆಕ್ಷನ್‌ಗಳು, ತೈಲಗಳು ಇನ್ನಿತರಗಳು ತಮಗೆ ಆಯುರ್ವೇದ ಔಷಧಿ ಅಂಗಡಿಗಳಲ್ಲಿ ದೊರಕು ತ್ತವೆ. ಇವುಗಳಲ್ಲಿನ ಕೆಲವುಗಳನ್ನು ಫೋಟೋ ದಲ್ಲಿ ತೋರಿಸಲಾಗಿದೆ. ಇವುಗಳನ್ನು ತಾವು ತಮ್ಮ ಹತ್ತಿರದ ಆಯುರ್ವೇದ ವೈದ್ಯರ ಸಲಹೆ ಮೇರೆಗೆ ಸೇವಿಸುವುದು ಒಳಿತು. ●

# ಮುಖದ ಸೌಂದರ್ಯ ಹೆಚ್ಚಿಸುವ ಟಾಲ್ಕಂ ಪೌಡರ್

- ಕಸ್ತೂರಿ



ಮುಖದ ಮೇಕಪ್‌ಗಾಗಿ ಕ್ರೀಮು, ಲೋಷನ್‌ಗಳನ್ನು ಹೆಚ್ಚು ಬಳಸುತ್ತಾರೆ. ಇದಕ್ಕೆ ನೀಡಿದಷ್ಟು ಪ್ರಾಮುಖ್ಯತೆ ಟಾಲ್ಕಂ ಪೌಡರ್‌ಗೆ ನೀಡುವುದಿಲ್ಲ. ಆಧರೆ ಮುಖವನ್ನು ಫ್ರೆಷ್ಷಾಗಿ ಸುವಾಸನೆಯುಕ್ತವಾಗಿಡುವುದು ಪೌಡರ್ ಎಂದರೆ ಆತಿಶಯೋಕ್ತಿಯಲ್ಲ.

ಯಾವುದೇ ಶೃಂಗಾರ ಸಾಮಗ್ರಿ ಅಂಗಡಿಗೆ ಹೋದಾಗ ನಮ್ಮ ದೃಷ್ಟಿಗೆ ಬೀಳುವುದು ವಿವಿಧ ಪ್ರಕಾರಗಳ ಪ್ರಸಾದನಗಳು. ಅವುಗಳೊಂದಿಗೆ ಒಪ್ಪವಾಗಿ ಜೋಡಿಸಿಟ್ಟ ಹಲವಾರು ಕಂಪನಿಗಳಿಗೆ ಸೇರಿದ ಪೌಡರ್ ಡಬ್ಬಗಳು. ಆರ್ಥಿಕ ಅಸಮಾನತೆಯೊಂದಿಗೆ ಸಂಬಂಧವಿಲ್ಲದೆ ಪ್ರತಿಯೊಬ್ಬರ ಮನೆಯಲ್ಲಿ ಕಾಣಸಿಗುವ ಸುವಾಸನೆಯ ವಸ್ತು ಪೌಡರ್. ಸಾರ್ವತ್ರಿಕ ಬಳಕೆಯಾಗಿರುವ ಪೌಡರ್ ದೈನಂದಿನ ಅಗತ್ಯ ವಸ್ತುಗಳ ಪಟ್ಟಿಗೆ ಸೇರಿದೆ.

ದಶಕಗಳಿಂದ ಪ್ರಾಧಾನ್ಯತೆ ಹೊಂದಿದ ಈ ಪೌಡರ್ ಮುಖಕ್ಕೆ, ಶರೀರಕ್ಕೆ ಫ್ರೆಷ್ಷಾಗಿರಲು ಬಳಸುತ್ತೇವೆ. ಮುಖ ಸ್ವಲ್ಪ ಬಾಡಿದೆಯೆಂದರೆ ತಣ್ಣನೆ ನೀರಿನಿಂದ ಮುಖ ತೊಳೆದು ಪೌಡರ್ ಹಚ್ಚಿಕೊಂಡರೆ ಶರೀರಕ್ಕಷ್ಟೆ ಅಲ್ಲ; ಮನಸ್ಸು ಕೂಡಾ ಉಲ್ಲಸಿತವಾಗಿರುತ್ತದೆ. ಮುಖ್ಯವಾಗಿ ಚರ್ಮ ಎಣ್ಣೆಯಂಶಕ್ಕೆ ತಿರುಗಿದರೆ ಅಥವಾ ಹೆಚ್ಚು ಶ್ರಮದಿಂದ ನೀರಸತೆ ತಲೆದೋರಿದಾಗ ಮುಖ, ಮೈಮೇಲೆ ಸ್ವಲ್ಪ ಪೌಡರ್ ಚೆಲ್ಲಿದರೆ ನೀರಸತೆ ನಿವಾರಣೆಯಾಗುತ್ತದೆ. ಸುವಾಸನೆಯ ಪೌಡರ್‌ನಿಂದ ಮನಸ್ಸಿಗೆ ಹಿತವಾಗಿ ಸ್ಫೂರ್ತಿಯನ್ನು ತರುತ್ತದೆ.

ಸೌಂದರ್ಯವರ್ಧಕಗಳಲ್ಲಿ ಅತಿ ನಿರ್ಲಕ್ಷ್ಯವಾಗಿ ನೋಡುವುದೆಂದರೆ ಪೌಡರ್. ಮುಖದ ಸೌಂದರ್ಯ ಹೆಚ್ಚಿಸಲು ಬಳಸುವ ಇತರ ಸಾಮಗ್ರಿಗಳಲ್ಲಿ ಅತೀ ಮುಖ್ಯವಾದುದು ಪೌಡರ್. ಆದಾಗ್ಯೂ ಹಲವಾರು ಪ್ರಚಾರದ ಭರಾಟೆಯಲ್ಲಿರುವ ವಿವಿಧ ರಸಾಯನಯುಕ್ತ ಕ್ರೀಮುಗಳನ್ನು ಬಳಸುತ್ತಾರೆ. ಲೇಪನ ಮಾಡಿಕೊಳ್ಳುತ್ತಾರೆ. ಇವುಗಳಿಂದ ತಾತ್ಕಾಲಿಕ ಸೌಂದರ್ಯ ವರ್ಧನೆಯಾಗಬಹುದು. ಆದರೆ ನಿರಂತರ ಬಳಕೆಯಿಂದ ಚರ್ಮದ ಆರೋಗ್ಯಕ್ಕೆ ಹಾನಿಕಾರವೆ. ಆದೇ ಪೌಡರ್ ಹಾಗಲ್ಲ. ಮುಖ, ಮನಸ್ಸನ್ನು ಆಹ್ಲಾದಕರವಾಗಿರಿಸುವುದಲ್ಲದೆ ಎಲ್ಲ ಪ್ರಕಾರದ ಇನ್‌ಫೆಕ್ಷನ್‌ನಿಂದ ಕಾಪಾಡುತ್ತದೆ.

ಈ ಪೌಡರ್ 'ಟಾಲ್ಕಂ' ಎನ್ನುವ ಪದಾರ್ಥದಿಂದ ತಯಾರಾಗುತ್ತದೆ. ಈ ಟಾಲ್ಕ್ ಎನ್ನುವುದು ಒಂದು ಪ್ರಕಾರದ ಖನಿಜ (ಮಿನರಲ್). ಇದು ದಕ್ಷಿಣ ಯುರೋಪ್, ದಕ್ಷಿಣ ಅಮೆರಿಕ ಹಾಗೂ ಆಸ್ಟ್ರೇಲಿಯಾದಲ್ಲಿ ದೊರೆಯುತ್ತದೆ. ಈ ಖನಿಜಯುಕ್ತ ವಸ್ತುವನ್ನು ಅನೇಕ ವಿಧವಾಗಿ ಶುದ್ಧೀಕರಿಸುವುದರಿಂದ ಪೌಡರಾಗಿ ಸಿದ್ಧವಾಗುತ್ತದೆ.

**ನೈಜ ಸೌಂದರ್ಯಕ್ಕೆ ಕೃತಕ ಅಲಂಕಾರ ಸರಿಸಾಟಿಯಾಗಲಾರದು. ಆದರೆ ಇರುವ ಅಂದಕ್ಕೆ ಇನ್ನಷ್ಟು ಮೆರುಗು ನೀಡಬಲ್ಲ ಸೌಂದರ್ಯ ವರ್ಧಕಗಳನ್ನು ಅಲ್ಲಗಳೆಯಲಾಗದು.**

ಈ ಟಾಲ್ಕಂ ಪೌಡರ್‌ಗೆ ಕೆಲವು ಪ್ರಕಾರದ ಇನ್ಫೆಕ್ಷನ್‌ನಿಂದ ತಡೆಯುವ ಗುಣವಿದೆ. ಸಾಮಾನ್ಯವಾಗಿ ನಮ್ಮ ಮನೆಯಲ್ಲಿ ಮಕ್ಕಳಿಗೆ ಚಿಕ್ಕ ಪುಟ್ಟ ಪೆಟ್ಟು ತಗುಲಿದಾಗ ಪೌಡರ್ ಹಾಕುವುದುಂಟು. ಅಂದರೆ ಇದನ್ನು ಪ್ರಥಮ ಚಿಕಿತ್ಸೆಗಾಗಿ ಬಳಸುತ್ತಾರೆ. ತಗುಲಿದ ಪೆಟ್ಟು ಪೂರ್ಣ ನಿವಾರಣೆಯಾಗದಿದ್ದರೂ ನೋವಿನಿಂದ ಉಪಶಮನ ಹೊಂದುತ್ತಾರೆ.

ಇತ್ತೀಚಿನ ದಿನಗಳಲ್ಲಿ ಪೌಡರ್‌ಗಳು ಹಲವು ಪ್ರಕಾರಗಳಲ್ಲಿ ಲಭ್ಯವಾಗುತ್ತವೆ. ಬೇಬಿ ಪೌಡರ್, ಫ'ವ'ರ್ ಪೌಡ'ರ್, ನೈಸಿಲ್ ಪೌಡರ್ ಹೀಗೆ ವಿಧವಿಧವಾಗಿರುತ್ತವೆ.

ಹುಟ್ಟಿದ ಮಕ್ಕಳನ್ನು ಯಾವಾಗಲೂ ಶುಭ್ರವಾಗಿಡುವುದೆಂದರೆ ಈ ಬೇಬಿ ಪೌಡರ್. ಮಕ್ಕಳನ್ನು ಸದಾ ಉಲ್ಲಸಿತವಾಗಿರಿಸಲು ಇವು ಹೆಚ್ಚು ನೆರವಾ ಗುತ್ತವೆ. ಇನ್ನು ನೈಸಿಲ್ ಪೌಡರ್ ಬೇಸಿಗೆಯಲ್ಲಿ ಬೆವರು ಸುರಿಸುತ್ತಾ ಮನಸ್ಸಿಗೆ ಕಿರಿಕಿರಿಯುಂಟು ಮಾಡುವುದನ್ನು ನಿವಾರಿಸುತ್ತದೆ. ಅದಲ್ಲದೆ ಬೆವರುಸಾಲೆ ಬರುವುದನ್ನು ತಪ್ಪಿಸುತ್ತದೆ. ಚರ್ಮದಲ್ಲಿರುವ ತೇವಾಂಶ ತಗ್ಗಿಸಿ ಹಾಯಾಗಿ ಇರಲು ಸಹಾಯ ಮಾಡುತ್ತದೆ. ಅದು ಅಲ್ಲದೆ ಶರೀರದ ಕಂಕುಳ, ತೊಡೆ ಸಂದುಗಳಲ್ಲಿರುವ ತೇವ ತಗ್ಗಿಸಿ ಫಂಗಸ್ ಬರದಂತೆ ಅದ್ಬುತ ಕಾರ್ಯ ಮಾಡುತ್ತದೆ.

ಪೌಡರ್ ಉಪಯೋಗಿಸುವುದರಿಂದ ಕ್ಯಾನ್ಸರ್ ಬರುತ್ತದೆಂದು ಕೆಲವರು ಸಂಶಯಿಸುತ್ತಾರೆ. ಆದರೆ ಇದು ಶುದ್ಧ ತಪ್ಪು. ಸರಕಾರ ವಿಧಿಸಿದ ಷರತ್ತುಗಳಿಗನುಗುಣವಾಗಿ ಕಂಪನಿಗಳು ಪೌಡರ್ ತಯಾರಿಸುತ್ತವೆ. ಆದ್ದರಿಂದ ಪೌಡರ್ ಯಾವ ದೃಷ್ಟಿಯಿಂದಲೂ ಶರೀರಕ್ಕೆ ಹಾನಿಕರವಲ್ಲ.

ಮುಖ ಮನಸ್ಸಿನ ಕನ್ನಡಿ. ಮನಸ್ಸಿನಲ್ಲಿರುವುದು ಮುಖದ ಮೇಲೆ ಪ್ರತಿಫಲಿಸುತ್ತದೆ. ಅಂದರೆ ಭಾವನೆಗಳನ್ನು ಮುಖದ ಮೇಲೆ ಗುರುತಿಸಲಾಗುತ್ತದೆಯೆಂದೆ ಇದರ ಅರ್ಥ. ಅದಕ್ಕಾಗಿ ನಮ್ಮ ಹೊರ ನೋಟವನ್ನು ತುಂಬಾ ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕು. ಆದ್ದರಿಂದ ಪರಿಮಳ ಯುಕ್ತ ಪೌಡರ್ ಬಳಸಿ, ಮುಖ - ಮನಸ್ಸನ್ನು ಆಹ್ಲಾದವಾಗಿರಿಸಿಕೊಳ್ಳಿ.

❖

# 'ಫಿಟ್ಸ್' ವ್ಯಾಪ್ತಿ ಮುಕ್ತಿ ಗೋವು ಅಷ್ಟೇ

ಭಾಗ - ೨

ಫಿಟ್ಸ್‌ನಲ್ಲಿಯೇ ಹಲವಾರು ವಿಧಗಳಿವೆ. ಮೆದುಳಿನ ಸ್ವಲ್ಪ ಭಾಗಕ್ಕೆ ಸೀಮಿತವಾದ ಆಂಶಿಕ ಅಪಸ್ಮಾರದಲ್ಲಿ ರೋಗಿ ಕೆಲಕ್ಷಣ ಮಾತ್ರ ಪ್ರಜ್ಞಾ ಶೂನ್ಯನಾಗಬಹುದು. ಇಲ್ಲವೆ ದೃಷ್ಟಿ ಶ್ರವಣ ಶೂನ್ಯನಾಗಬಹುದು. ದೇಹದ ಒಂದೆರಡು ಭಾಗ ಮಾತ್ರ ಅದುರಬಹುದು. ಕೆಲಕ್ಷಣ ಮಾತ್ರ ಮೈಮೇಲಿನ ಪರಿವೆ ಇಲ್ಲದಿರಬಹುದು. ಕೆಲವರಿಗೆ ನಿದ್ದೆಯಲ್ಲಿಯೂ ಫಿಟ್ಸ್ ಬರಬಹುದು. ಫಿಟ್ಸ್‌ನ ನಮೂನೆಗೆ ಅನುಸಾರವಾಗಿ ಲಕ್ಷಣಗಳ ಬದಲಾವಣೆಗಳಿರುತ್ತವೆ.

ಕೆಲವರಿಗೆ ತಿಂಗಳಿಗೊಮ್ಮೆ ಫಿಟ್ಸ್ ಬಂದರೆ ಮತ್ತೆ ಕೆಲವರಿಗೆ ವರ್ಷಕೊಂಧೆರಡು ಬಾರಿ ಬರಬಹುದು. ಕೆಲವರಲ್ಲಿ ಮೇಲಿಂದ ಮೇಲೆಯೆ ಹತ್ತಾರುಬಾರಿ ಫಿಟ್ಸ್ ಕಂಡು ಪ್ರಾಣಾಪಾಯವಾಗಬಹುದು.

> **ಅಪಸ್ಮಾರ ಸಂಘ**
>
> ಮೂರ್ಛೆರೋಗಿಗಳ ಕ್ಷೇಮಾಭಿವೃದ್ಧಿಗೆ ಭಾರತೀಯ ಅಪಸ್ಮಾರ ಸಂಘ ಶ್ರಮಿಸುತ್ತಿದೆ. ಇದರ ಶಾಖೆ ಉಪಶಾಖೆಗಳು ದೇಶದಾದ್ಯಂತ ಹರಡಿವೆ. ಪ್ರತಿವರ್ಷ ನವೆಂಬರ್ ೧೭ನೇ ದಿನಾಂಕವನ್ನು ರಾಷ್ಟ್ರೀಯ ಅಪಸ್ಮಾರ ದಿನವೆಂದು ಆಚರಿಸಲಾಗುತ್ತದೆ.
>
> ಫಿಟ್ಸ್ ರೋಗಿಗಳ ಬದುಕು-ಭವಿಷ್ಯಕ್ಕೆ ದಾರಿದೀಪವಾಗಬಲ್ಲ ಈ ಸಂಸ್ಥೆಗೆ ರೋಗಿಗಳು, ಆಸಕ್ತರು ಸದಸ್ಯರಾಗಿ ಪ್ರಯೋಜನ ಪಡೆದುಕೊಳ್ಳಬಹುದು.

ಫಿಟ್ಸ್‌ನ ವಿಧಗಳನ್ನು ವಿಶ್ಲೇಷಿಸಿ ಯುಕ್ತ ನಿರ್ಧಾರ ಕೈಗೊಳ್ಳುವ ಹಕ್ಕನ್ನು ವೈದ್ಯರಿಗೆ ಬಿಡೋಣ. ಆದಾಗ್ಯೂ ನಾವು ಫಿಟ್ಸ್ ಬಂದವರನ್ನು ಕೂಲಂಕುಷವಾಗಿ ವೀಕ್ಷಿಸಿ ವೈದ್ಯರಿಗೆ ವಿವರಿಸಿದಲ್ಲಿ ರೋಗದ ಪತ್ತೆಗೆ ಹಾಗೂ ಚಿಕಿತ್ಸೆಗೆ ಸಹಯ ಮಾಡಿದಂತಾಗುತ್ತದೆ.

### ಫಿಟ್ಸ್ ಬೆಂಬಿಡದ ಭೂತವಲ್ಲ

ಬಹಳಷ್ಟು ಜನರು ತಿಳಿದಿರುವಂತೆ ಫಿಟ್ಸ್ ಕಾಯಂ ವ್ಯಾಧಿಯಲ್ಲ. ಸೂಕ್ತ ಚಿಕಿತ್ಸೆಯಿಂದ ರೋಗ ಸಂಪೂರ್ಣವಾಗಿ ಗುಣವಾ ಗುತ್ತದೆ. ರೋಗದ ತೀವ್ರತೆಯನ್ನು ತಗ್ಗಿಸುವುದು, ಫಿಟ್ಸ್ ಬರುವ ಸಂಭವವನ್ನು ಇಲ್ಲವಾಗಿಸಿ



ರೋಗಿಗೆ ಫಿಟ್ಸ್ ರಹಿತ ಸಹಜ ಜೀವನ ಕಲ್ಪಿಸುವುದೇ ಚಿಕಿತ್ಸೆಯ ಮುಖ್ಯ ಗುರಿಯಾಗಿದೆ.

ಫಿಟ್ಸ್‌ನ ಲಕ್ಷಣಗಳು ಮತ್ತು ಹಲವಾರು ರೀತಿಯ ಪ್ರಯೋಗ ಪರೀಕ್ಷೆಗಳ ಫಲಿತಾಂಶಗಳ ಆಧಾರದಿಂದ ವೈದ್ಯರು ಫಿಟ್ಸ್‌ಗೆ ಕಾರಣ ಕಂಡುಹಿಡಿಯಲು ಯತ್ನಿಸುತ್ತಾರೆ. ಮೂಲ ಕಾರಣ ಗೊತ್ತಾದಲ್ಲಿ ಕಾರಣವನ್ನು ಬೇರ ಸಹಿತ ಕಿತ್ತೆಸೆದು ರೋಗಿಗೆ ಫಿಟ್ಸ್‌ನಿಂದ ಶಾಶ್ವತ ಮುಕ್ತಿ ದೊರಕಿಸಿಕೊಡಲಾಗುತ್ತದೆ. ಆಶ್ಚರ್ಯಕರ ಸಂಗತಿ ಎಂದರೆ ಬಹಳಷ್ಟು ಜನರಲ್ಲಿ ಫಿಟ್ಸ್‌ಗೆ ನಿಮಿತ್ಯ ಕಾರಣ ಪತ್ತೆಯಾಗುವುದೇ ಇಲ್ಲ. ಆದಾಗ್ಯೂ ರೋಗಿ ಹತಾಶನಾಗಬೇಕಿಲ್ಲ. ಈಗ ಫಿಟ್ಸ್ ನಿವಾರಕ ಮಾತ್ರೆಗಳ ಗುಂಪೇ ನಮ್ಮ ಮುಂದಿದೆ. ವೈದ್ಯರು ರೋಗಿಗೆ ಸೂಕ್ತವಾಗುವ ಮಾತ್ರೆಯನ್ನು, ಅದರ ಪ್ರಮಾಣವನ್ನು ನಿರ್ಧರಿಸಿ ಕೊಡುತ್ತಾರೆ.

### ಯಶಸ್ಸಿನ ಗುಟ್ಟು - ದೀರ್ಘಕಾಲದ ಚಿಕಿತ್ಸೆ

ಮಾತ್ರೆಗಳನ್ನು ಬಹಳ ವರ್ಷದವರೆಗೆ ಸೇವಿಸಬೇಕೆಂಬುದು ಅತ್ಯಂತ ಮುಖ್ಯವಾದ ಸಂಗತಿ. ವೈದ್ಯ ವಿಧಿಸಿದ ಮಾತ್ರೆಗಳನ್ನು ಒಂದು ದಿನವೂ ತಪ್ಪಿಸದಂತೆ ಸೇವಿಸುವುದರಲ್ಲಿಯೇ

ಡಾ|| ಡಿ.ಕೆ. ಮಹಾಬಲರಾಜು ..

ಚಿಕಿತ್ಸೆಯ ಯಶಸ್ಸಿನ ಗುಟ್ಟು ಅಡಗಿದೆ. ಸಾಮಾನ್ಯವಾಗಿ ಈ ಮಾತ್ರೆಗಳನ್ನು ೨ ರಿಂದ ೫ ವರ್ಷ ತೆಗೆದುಕೊಳ್ಳಬೇಕಾಗುತ್ತದೆ. ಕೊನೆ ಬಾರಿಗೆ ಫಿಟ್ಸ್ ಬಂದ ಎರಡು ವರ್ಷದ ಅನಂತರವೂ ಮಾತ್ರೆಯನ್ನು ಮುಂದುವರಿಸಬೇಕಾಗುತ್ತದೆ. ವೈದ್ಯರ ಅನುಮತಿ ಇಲ್ಲದೆ ಏಕಾಏಕಿ ಮಾತ್ರೆ ಸೇವಿಸುವುದನ್ನು ನಿಲ್ಲಿಸಿದರೆ ಫಿಟ್ಸ್ ಮತ್ತೆ ಮರುಕಳಿಸಬಹುದಾದ ಸಾಧ್ಯತೆ ಇರುತ್ತದೆ.

ಫಿಟ್ಸ್ ರೋಗದ ಬಗ್ಗೆ ನಾವು ತಿಳಿದಿರಲೇಬೇಕಾದ ತತ್ವಗಳು.

ರೋಗಿ ಹಾಗೂ ಕುಟುಂಬ ಪಾಲಿಸಬೇಕಾದ ನಿಯಮಗಳು.

★ ರೋಗಿ ವೈದ್ಯರ ಸಲಹೆಯಂತೆ ಪ್ರತಿದಿನವೂ ತಪ್ಪಿಸದೆ ಮಾತ್ರೆ ಸೇವಿಸಬೇಕು. ಮನೆಯವರೂ ಈ ಬಗ್ಗೆ ನೆನಪಿಸುತ್ತಿರಬೇಕು.

★ ಪ್ರವಾಸಕ್ಕೆ ಬೇರೆ ಊರಿಗೆ ಹೋಗುವಾಗ ಮರೆಯದೆ ಮಾತ್ರೆಗಳನ್ನು ತೆಗೆದುಕೊಂಡು ಹೋಗಬೇಕು.

★ ಪ್ರತಿ ತಿಂಗಳೂ ನಿಯಮಿತವಾಗಿ ವೈದ್ಯರ ಸಲಹೆ ಪಡೆಯಬೇಕು. ವೈದ್ಯರು ನಿಮ್ಮ ಮಾತ್ರೆ ಪ್ರಮಾಣವನ್ನು ಪುನರಾಮರ್ಷಿಸುತ್ತಾರೆ.

★ ಚಿಕಿತ್ಸೆ ಪಡೆದಾಗ ಫಿಟ್ಸ್ ಬಂದರೆ ತಕ್ಷಣ ವೈದ್ಯರನ್ನು ಕಾಣಬೇಕು.

★ ಮಾತ್ರೆ ಸೇವನೆ ಬಗ್ಗೆ, ಫಿಟ್ಸ್ ಬಂದ ಬಗ್ಗೆ ಸವಿವರವಾದ ಡೈರಿ ಬರೆದಿಟ್ಟುಕೊಳ್ಳಬೇಕು. ವೈದ್ಯರ ಬಳಿ ಹೋಗುವಾಗ ಈ ಡೈರಿ ತೆಗೆದುಕೊಂಡು ಹೋಗಬೇಕು.

★ ಮಾತ್ರೆಗಳು ಇತರರಿಗೆ ಸುಲಭವಾಗಿ ದೊರಕದಂತೆಸುರಕ್ಷಿತವಾಗಿಟ್ಟುಕೊಳ್ಳಬೇಕು.

★ "ನಾನು ಫಿಟ್ಸ್ ರೋಗಿ. ನನಗೆ ಮೂರ್ಛೆ

ಬಂದಿದ್ದು ಕಂಡಾಗ ತಾವು ದಯಮಾಡಿ ನನ್ನ ದೇಹಕ್ಕೆ ಅಪಾಯವಾಗುವುದನ್ನು ತಪ್ಪಿಸಿ. ಉಸಿರಾಟ ನಿಲ್ಲದಂತೆ ನನ್ನ ಹಲ್ಲುಗಳ ನಡುವೆ ಕರ್ಚೀಫಿನ ಸುರಳಿ ಇಡಿ''. ಎಂದು ಬರೆದ ಕಾರ್ಡ್ ಅನ್ನು ಯಾವಾಗಲೂ ರೋಗಿ ತನ್ನ ಕಿಸೆಯಲ್ಲಿ ಇರಿಸಿಕೊಳ್ಳಬೇಕು. ಈ ಕಾರ್ಡಿನಲ್ಲಿ ನಿಮ್ಮ ಹೆಸರು, ವಿಳಾಸ, ದೂರವಾಣಿ ಸಂಖ್ಯೆ ನಿಮ್ಮ ವೈದ್ಯರ ವಿವರಗಳಿರುವುದೂ ಮುಖ್ಯ.

- ★ ಫಿಟ್ಸ್ ಮುನ್ಸೂಚನೆ ಇಲ್ಲದೆ ಬರುವ ವ್ಯಾಧಿ. ಆದುದರಿಂದ ರೋಗಿ, ಚಿಕಿತ್ಸೆ, ಕೆರೆ, ಬಾವಿ ವಿದ್ಯುತ್ ಹತ್ತಿರ ಸುಳಿಯಬಾರದು. ವಾಹನ ಚಾಲನೆ, ಈಜು, ಎತ್ತರ ಏರುವುದು, ರಾತ್ರಿ ಪ್ರಯಾಣ, ಅಡಿಗೆ ಮಾಡುವುದು ಮುಂತಾದ ಸಂದರ್ಭಗಳಲ್ಲಿ ಒಂಟಿಯಾಗಿರಬಾರದು. • ವಾಹನ ಚಾಲನೆಯಲ್ಲಿ ಹೆಲ್ಮೆಟ್ ಧರಿಸಬೇಕು.
- ★ ರೋಗಿಗೆ ಆಹಾರ ಪಥ್ಯ ಇಲ್ಲ. ಆದರೆ ಎಂದಿಗೂ ಉಪವಾಸ ಮಾಡಬಾರದು.
- ★ ನಿದ್ದೆಗೆಡಬಾರದು
- ★ ಮದ್ಯ ಸೇವಿಸಬಾರದು
- ★ ಅತಿಯಾದ ದೈಹಿಕ ಶ್ರಮ, ಮಾನಸಿಕ ವೇದನೆ ಸಲ್ಲದು.
- ★ ದೂರದರ್ಶನ ವೀಕ್ಷಿಸುವಾಗ ಕೋಣೆಯಲ್ಲಿ ಬೆಳಕು ಇರಲಿ. ಚಾನೆಲ್ ಬದಲಿಸುವಾಗ, ಅಡಚಣೆ ಇರುವಾಗ ಕಣ್ಣು ಮುಚ್ಚಿಕೊಳ್ಳಬೇಕು. ರಿಮೋಟ್ ಬಳಸುವುದು ಒಳ್ಳೆಯದು. ಟಿ.ವಿ. ಯಿಂದ ಕನಿಷ್ಠ ೮ ಅಡಿ ದೂರದಲ್ಲಿ ಕುಳಿತುಕೊಳ್ಳಬೇಕು.
- ★ ಅತಿ ಬಿಸಿ ಅಥವಾ ಅತಿ ತಣ್ಣೀರಿನ ಸ್ನಾನ ಸಲ್ಲದು. ಸ್ನಾನದ ಕೋಣೆಗೆ ಚಿಲಕ ಹಾಕಿಕೊಳ್ಳದಿರುವುದು ಒಳ್ಳೆಯದು.
- ★ ವೈದ್ಯರ ಅನುಮತಿ ಇಲ್ಲದೆ ಏಕಾಏಕಿ ಮಾತ್ರೆಗಳ ಸೇವನೆಯನ್ನು ನಿಲ್ಲಿಸಿಬಿಡಬಾರದು.
- ★ ಸತತವಾಗಿ ಮೂರು ವರ್ಷ ಫಿಟ್ಸ್ ಬಂದಿರದಿದ್ದರೆ ಇಂಜಿನ್‌ನಿಂದ ನಡೆವ ವಾಹನ (ಸ್ಕೂಟರ್, ಕಾರು) ಚಲಿಸುವುದಕ್ಕೆ ಅನುಮತಿ ಉಂಟು.

### ಮೂರ್ಛೆ ರೋಗಿಗಳು ಕಡಿಮೆ ಏನಲ್ಲ

ಮೂರ್ಛೆ ರೋಗಿಗಳು ಕಡಿಮೆ ಸಾಮರ್ಥ್ಯದವರೇನಲ್ಲ. ಫಿಟ್ಸ್ ರೋಗಿಯಾಗಿದ್ದು ಅಪ್ರತಿಮ ಸಾಧನೆಗೈದ ವ್ಯಕ್ತಿಗಳ ಬಗ್ಗೆ ನಿಮಗೆ ಗೊತ್ತೆ?

ಲಾರ್ಡ್ ಬೈರನ್, ವ್ಯಾನ್‌ಗೊ, ಜೂಲಿಯಸ್ ಸೀಜರ್ ನೆಪೋಲಿಯನ್, ಬೋನಾಪಾರ್ಟೆ, ಟೋನಿಗ್ರೇಗ್ ರೋಡ್ಸ್ ಇವರೆಲ್ಲಾ ಫಿಟ್ಸ್ ರೋಗವಿದ್ದರೂ ಅಪ್ರತಿಮ ಸಾಧನೆಗೈದಿದ್ದಾರೆ. ಹೀಗಾಗಿ ಫಿಟ್ಸ್ ಎಂದಾಕ್ಷಣ ಮುದುಡಿಕೊಳ್ಳಬೇಡಿ. ಕೀಳರಿಮೆ ಬೆಳೆಸಿಕೊಳ್ಳಬೇಡಿ. ಬದಲಿಗೆ ನಿಮ್ಮ ಉತ್ಸಾಹವನ್ನು ನೂರ್ಮಡಿಗೊಳಿಸಿಕೊಳ್ಳಿ.

### ಆರಂಭದಲ್ಲೇ ಚಿಕಿತ್ಸೆ ಪಡೆಯಿರಿ

ಕರುಳ ಕುಡಿಗೆ ಅಥವಾ ಆತ್ಮೀಯರಿಗೆ ಬಂದ ಫಿಟ್ಸ್ ಅನ್ನು ನೋಡಿದಾಗ ದಿಗ್ಭ್ರಮೆಗೊಳಗಾಗದಿರುವವರು ಇಲ್ಲ. ಈ ಮಾನಸಿಕ ಆಘಾತ ಕ್ರಮೇಣ ಆತ್ಮಸಂಕಟಕ್ಕೆ ಹಾದಿಯಾಗುತ್ತದೆ. ಪಾಪಪ್ರಜ್ಞೆ ಮೂಡುತ್ತದೆ. ಕ್ರಮೇಣ ಕಾಯಿಲೆಯನ್ನು ಒಪ್ಪಿಕೊಳ್ಳಲು ಮನಸ್ಸು ಹಿಂಜರಿಯುತ್ತದೆ. ಹೀಗಾಗಿ ಬಹಳಷ್ಟು ಜನರು ತಮ್ಮ ರೋಗವನ್ನು ಮರೆಮಾಚಿಕೊಳ್ಳಲು ಅನವರತವಾಗಿ ಹೆಣಗಾಡುತ್ತಾರೆ. ತಜ್ಞವೈದ್ಯರ ಬಳಿ ಸುಳಿದಾಡಲೂ ಅಂಜಿ ಅಂತ್ರ-ತಂತ್ರ ಮಾಟ-ಮದ್ದು, ನಾಟಿ ಔಷಧಿಗಳ ಮೊರೆ ಹೋಗುತ್ತಾರೆ. ಇವೆಲ್ಲಾ ಮುಗಿದ ಅನಂತರವೇ ತಜ್ಞ ವೈದ್ಯರನ್ನು ಕಾಣುವ ಹಾದಿ ಹುಡುಕಾಡುತ್ತಾರೆ. ಇದು ತಪ್ಪು. ಕಾಯಿಲೆಯನ್ನು ಒಪ್ಪಿಕೊಂಡು ಆರಂಭದಲ್ಲಿಯೇ ಉತ್ತಮ ಚಿಕಿತ್ಸೆ ದೊರಕಿಸಿದಲ್ಲಿ ಫಲಿತಾಂಶ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ.

### ಫಿಟ್ಸ್ ಮತ್ತು ಸಮಾಜ

ಫಿಟ್ಸ್ ಬಗ್ಗೆ ನಮ್ಮ ಸಮಾಜದಲ್ಲಿ ಅಪರಿಮಿತವಾದ ಅಪಕಲ್ಪನೆಗಳು, ತಪ್ಪು ತಿಳುವಳಿಕೆಗಳು ಹಾಸುಹೊಕ್ಕಾಗಿ ಬೇರೂರಿವೆ. ಹೀಗಾಗಿ ಫಿಟ್ಸ್ ರೋಗಿಗಳನ್ನು ಸಮಾಜ ಅಸ್ಪೃಶ್ಯರನ್ನಾಗಿ ಕಾಣುತ್ತಿದೆ. ಕಲಂಕದ ಕೆಸರನ್ನು ಲೇಪಿಸಿದೆ. ಫಿಟ್ಸ್ ಬಂದವರಿಗೆ ಮೆಟ್ಟಿನಿಂದ ಹೊಡೆವ, ಬಳೆಚೂರು ಕಾಯಿಸಿ ಬರೆ ಹಾಕುವ, ಕಬ್ಬಿಣದ ಸಾಮಗ್ರಿ ಕೊಡುವ, ಅವೈಜ್ಞಾನಿಕ, ಅಮಾನುಷ ಆಚರಣೆಗಳು ಜಾರಿಯಲ್ಲಿವೆ. ಫಿಟ್ಸ್ ವಂಶಪಾರಂಪರ್ಯವಾಗಿ ಬರುವ ಕಾಯಿಲೆ ಎಂದು ಹಣೆಪಟ್ಟಿ ಅಂಟಿಸಲಾಗಿದೆ. ಫಿಟ್ಸ್ ಕುಟುಂಬದೊಂದಿಗೆ ವೈವಾಹಿಕ ಸಂಬಂಧ ನಡೆಸಲು ಜನ ನಿರಾಕರಿಸುತ್ತಾರೆ. ಫಿಟ್ಸ್ ವಾಸಿಯಾಗದ ರೋಗ, ಇದೊಂದು ರೀತಿ ಮಾನಸಿಕ ಕಾಯಿಲೆ, ಇದು ಬೆಂಬಿಡದೆ ಕಾಡುವ ಅಂಟುರೋಗ, ಚಿಕಿತ್ಸೆ ಅತ್ಯಂತ ದುಬಾರಿ, ಮುಂತಾದ ತಪ್ಪು ತಿಳುವಳಿಕೆಗಳು ಜನತೆಯ,

### ಫಿಟ್ಸ್ ಬಂದವರನ್ನು ನೋಡಿದಾಗ ನಾವೇನು ಮಾಡಬೇಕು ?

- ★ ನಿಂತ ವ್ಯಕ್ತಿಗೆ ಫಿಟ್ಸ್ ಬರುವುದಿದೆ ಎಂಬ ಸುಳಿವು ದೊರೆತಾಕ್ಷಣ ಆತನನ್ನು ಮಲಗಿಸಬೇಕು.
- ★ ಉಡುಪು, ಮುಖ್ಯವಾಗಿ ಕಾಲರ್, ಟೈ ಬಿಗಿಯಾಗಿದ್ದರೆ ಸಡಿಲಿಸಬೇಕು.
- ★ ಉಸಿರಾಟ ಸರಾಗವಾಗಿ ನಡೆಸಲು ಅನುಕೂಲವಾಗುವಂತೆ, ಮುಖವನ್ನು ಒಂದು ಪಕಕ್ಕೆ ತಿರುಗಿಸಬೇಕು.
- ★ ದಂತಪಂಕ್ತಿಗಳ ನಡುವೆ ಕರ್ಚಿಫ್ ಅನ್ನು ಸುತ್ತಿ ಇಡಬೇಕು.
- ★ ಸುತ್ತಲಿನ ಅಪಾಯಕಾರಿಯಾದ, ಹರಿತವಾದ ವಸ್ತುಗಳನ್ನು ತೆಗೆದು ಹಾಕಬೇಕು.
- ★ ರೋಗಿಯ ಬಾಯಲಿ ಬೆರಳು ಹಾಕಬಾರದು. ನಿಮ್ಮ ಬೆರಳೇ ಗಾಯವಾದೀತು.
- ★ ದೇಹ ಕಂಪನವನ್ನು ನಿಲ್ಲಿಸುವ ಯತ್ನ ಮಾಡಬಾರದು.
- ★ ರೋಗಿಯ ವರ್ತನೆಯನ್ನು ವಿವರವಾಗಿ ವೀಕ್ಷಿಸಿ ವೈದ್ಯರಿಗೆ ವಿವರಿಸಬೇಕು.
- ★ ಆದಷ್ಟು ಬೇಗ (ಫಿಟ್ಸ್‌ನಿಂತ ನಂತರ) ವೈದ್ಯರ ಬಳಿ ಕರೆದೊಯ್ಯಬೇಕು.

ಸಮಾಜದ ಹೃದಯದಾಳದಲ್ಲಿ ಮೂಡಿವೆ. ಕಾಲವೀಗ ನಾಗಾಲೋಟದಿಂದ ಮುಂದುವರಿದಿದೆ. ನಾವೀಗ ತಮ್ಮ ತಪ್ಪು ತಿಳುವಳಿಕೆಗಳನ್ನು ಅಸತ್ಯದ ಎಳೆಗಳನ್ನು ವಿಜ್ಞಾನವೆಂಬ ಕತ್ತರಿಯಿಂದ ಕತ್ತರಿಸಿ ಹಾಕಬೇಕಾಗಿದೆ. ಫಿಟ್ಸ್ ರೋಗಿಗಳ ಕೀಳರಿಮೆಯನ್ನು ಕೊನೆಗಾಣಿಸಿ ಅವರ ಜೀವನದಲ್ಲಿ ಹೊಸ ಬೆಳಕು ಮೂಡಿಸಬೇಕಾಗಿದೆ.

ಫಿಟ್ಸ್ ಒಂದು ಸಾಮಾನ್ಯ ವ್ಯಾಧಿ. ಪ್ರತಿ ಸಾವಿರ ಜನರಲ್ಲಿ ೮-೧೦ ಜನರಿಗೆ ಫಿಟ್ಸ್ ಇರುತ್ತದೆ ಎಂದು ವೈಜ್ಞಾನಿಕ ಸಮೀಕ್ಷೆಗಳು ತಿಳಿಸಿವೆ. ಉತ್ತಮ ಚಿಕಿತ್ಸೆಯಿಂದ ವ್ಯಕ್ತಿ ಫಿಟ್ಸ್‌ರಹಿತ ಸಹಜ ಜೀವನವನ್ನು ನಡೆಸಬಹುದು. ಚಿಕಿತ್ಸೆ ದುಬಾರಿ ಏನಲ್ಲ. ಫಿಟ್ಸ್ ರೋಗ ವೈವಾಹಿಕ ಜೀವನಕ್ಕೆ ಅಡ್ಡಿ ತರುವುದಿಲ್ಲ ಓದು, ಉದ್ಯೋಗ, ಆಟ, ಕ್ರೀಡೆ ಮುಂತಾದ ಯಾವುದೇ ಕ್ರಿಯೆಗೂ ಫಿಟ್ಸ್ ಅಡ್ಡಗಾಲಾಗುವುದಿಲ್ಲ. ಫಿಟ್ಸ್‌ನವರು ವಿವಾಹ ಪೂರ್ವ ವೈದ್ಯ ಸಮೀಕ್ಷೆ ನಡೆಸುವುದು ಅಗತ್ಯವಾಗಬಹುದು.

ಫಿಟ್ಸ್ ರೋಗಿಗಳು ಕಡಿಮೆ ಸಾಮರ್ಥದವರೇನಲ್ಲ (ಬಾಕ್ಸ್) ಫಿಟ್ಸ್ ಇದ್ದು ಸಂಪೂರ್ಣ ಸಹಜ ಜೀವನ ನಡೆಸಿದವರ ಉದಾಹರಣೆಗಳು ನಮ್ಮ ಸುತ್ತಮುತ್ತಲೇ ಸಾಕಷ್ಟಿವೆ. ಫಿಟ್ಸ್ ರೋಗಿಗಳಿಗೆ ನಮ್ಮ ಅನುಕಂಪಕ್ಕಿಂತಾ ಆದರದ ಅಗತ್ಯವಿದೆ. ಸಮಾಜ ಅವರನ್ನು ಕೀಳಾಗಿ ಕಾಣದೆ, ನಮ್ಮ ನಿಮ್ಮಂತೆ ಎಂಬ ಭಾವನೆ ಬೆಳೆಸಿಕೊಳ್ಳಬೇಕು. ಅವರು ಚಿಕಿತ್ಸೆ ಪಡೆಯಲು, ಓದಲು, ಉದ್ಯೋಗ ನಡೆಸಲು, ಮದುವೆಯಾಗಲು, ಆಟ-ಕ್ರಿಡೆ, ಸಾಹಿತ್ಯಗಳಲ್ಲಿ ತೊಡಗಿಸಿಕೊಳ್ಳಲು ಪ್ರೋತ್ಸಾಹಿಸಬೇಕು. ಯಾವುದೇ ರೀತಿಯ ಉದಾಸೀನತೆ ಬೇಡ. ಫಿಟ್ಸ್ ಬಂದ ಕೆಲವೇ ಕ್ಷಣಗಳನ್ನು ಹೊರತುಪಡಿಸಿದಲ್ಲಿ ಅವರಿಗೂ ಇತರೆಲ್ಲ ಆರೋಗ್ಯವಂತರಿಗೂ ವ್ಯತ್ಯಾಸವೇ ಇಲ್ಲ. ಅವರಿಗೆ ಆತ್ಮವಿಶ್ವಾಸ, ಪ್ರೋತ್ಸಾಹ ಬೇಕು.

ಹಿಂದು ವಿವಾಹ ಕಾಯಿದೆಯಲ್ಲಿ, ವಿಮೆ ಪಾಲಿಸಿಯಲ್ಲಿ, ಹಾಗೂ ವಾಹನ ಚಾಲನೆ ಲೈಸೆನ್ಸ್ ನೀಡುವಲ್ಲಿ ಈಗ ಫಿಟ್ಸ್ ರೋಗಿಗಳಿಗೆ ಇರುವ ನಿರ್ಬಂದನೆಗೆ ತಿದ್ದುಪಡಿಯಾಗುವ ಅವಶ್ಯಕತೆ ಇದೆ.

(ಮುಗಿಯಿತು)

# ತಂಬಾಕು ಹಾಲಾಹಲ ಎನ್ನುವುದಕ್ಕೆ ಇನ್ನೊಂದು ಹೊಸ ಸಾಕ್ಷಿ

ತಂಬಾಕು ಆಧುನಿಕ ಕಾಲದ ಹಾಲಾಹಲ ಎಂದೇ ವರ್ಣಿಸಲ್ಪಡುತ್ತದೆ. ತಂಬಾಕನ್ನು ನಾವು ಯಾವುದೇ ರೂಪದಲ್ಲಿ ಸೇವಿಸಿದರೂ ಅದು ಸದ್ದಿಲ್ಲದೇ ಕ್ಯಾನ್ಸರ್ ಮಾರಿಗೆ ಆಮಂತ್ರಣ ಕೊಡುತ್ತದೆ. ತಂಬಾಕು ಅಗಿದರೆ ನಾಲಿಗೆ, ಒಸಡು, ಗಂಟಲು ಹಾಗೂ ತುಟಿಗಳ ಕ್ಯಾನ್ಸರ್ ಕಾಣಬಹುದು. ಬೀಡಿ ಸೇದಿದರೆ ನಾಲಿಗೆ, ಮೆಂಡಿಕೆಗಳ ಕ್ಯಾನ್ಸರ್ ಬರುವುದು. ತಿರುವು, ಮುರುವ ಚುಟ್ಟಾ ಸೇದಿದರೆ ಅಂಗಳ ಕ್ಯಾನ್ಸರ್ ಕಾಣುವುದು. ಸಿಗರೇಟು, ಸಿಗಾರ ಸೇದಿದರೆ ಪುಪ್ಪುಸ ಕ್ಯಾನ್ಸರ್ ಬರುವುದು. ತಂಬಾಕು ಸೇದುವವರನ್ನು ಮಾತ್ರ ಪೀಡಿಸುವುದು ಎಂಬ ತಿಳುವಳಿಕೆ ತಪ್ಪು ಎಂದು ಮುಂದೆ ತಿಳಿಯಿತು. ಸೇದುವವರ ಮಗ್ಗುಲಲ್ಲಿದ್ದು, ಅವರು ಬಿಟ್ಟ ಹೊಗೆಯನ್ನು ಸೇವಿಸಿದರೂ ಪೀಡನೆಗೆ ಒಳಪಡುವರು ಎಂಬ ಕಟುಸತ್ಯ ಹೊರಬಂದಿತು. ಇಂಥವರನ್ನು ಪರೋಕ್ಷ ತಂಬಾಕು ಸೇದುವವರು ಎನ್ನಬಹುದು. ಆಂಗ್ಲಭಾಷೆಯಲ್ಲಿ ಇವರಿಗೆ 'ಪ್ಯಾಸ್ಸಿವ್ ಸ್ಮೋಕರ್ಸ್' ಎಂದು ಹೇಳುತ್ತಾರೆ.

ಈಗ ವಿಜ್ಞಾನಿಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ನೇರವಾಗಿ ತಂಬಾಕು ಸೇದುವವರದು ಮೊದಲ ಸ್ಥಾನವಾದರೆ, ಪರೋಕ್ಷವಾಗಿ ಸೇದುವವರದ್ದು ದ್ವಿತೀಯ



ಹಂತವೆನ್ನೋಣ. ಪರೋಕ್ಷವಾಗಿ ತಂಬಾಕು ಹೊಗೆ ಸೇವಿಸುವವರಲ್ಲಿ ಯಾರಾದರೂ ಗರ್ಭಿಣಿಯಾಗಿದ್ದರೆ, ಗರ್ಭದಲ್ಲಿಯ ಶಿಶು ಮೂರನೆಯ ಹಂತದಲ್ಲಿ ನಿಲ್ಲುವುದು. ಇಂಥ ಸ್ತ್ರೀಯರು ಮಕ್ಕಳನ್ನು ಪ್ರಸವಿಸಿದ ಮೇಲೆ ಈ ಮಕ್ಕಳ ಗತಿ ಏನು? ಎಂಬ ಪ್ರಶ್ನೆ ಬಂದಿತು. ಇಂಥ ಹಸುಳೆಗಳ ಮೂತ್ರವನ್ನು ಪರೀಕ್ಷಿಸಿದಾಗ ಆಘಾತ ಕಾದಿತ್ತು. ಈ ಶಿಶುಗಳ ಮೂತ್ರದಲ್ಲಿಯ ರಸಾಯನಿಕಗಳು ಶಿಶುವಿನ ದೇಹದಲ್ಲಿ ಕ್ಯಾನ್ಸರ್ ಕಾರಕ ಘಟಕಗಳು ಸೇರಿವೆ ಎಂಬುದನ್ನು ಖಚಿತಗೊಳಿಸಿವೆ. ಅಂದರೆ ಈ ಶಿಶುಗಳು ಮುಂದೆ ಯಾವುದಾದರೊಂದು ಕ್ಯಾನ್ಸರ್ ಬೆಳೆಸುವುದಂತೂ ನಿಶ್ಚಿತ.

ಇಲ್ಲಿಯವರೆಗೆ ಇದು ದೆವ್ವದ ನೆರಳು ಅನ್ನುವುದು ಹೋಗಿ, ಈಗ ನೆರಳಲ್ಲ ಅದು ನಿಜವಾಗಿ ದೆವ್ವವೇ ಹೌದು ಎನಿಸಿತು.

ತಂಬಾಕು ಸೇದುವ ಗಂಡ ಹೆಂಡತಿಗೆ ಸಣ್ಣ ಕಾಣಿಕೆ ಕೊಟ್ಟನೆಂದರೆ, ಹೆಂಡತಿ ತನ್ನ ಮಗುವಿಗೆ ಚೊಕ್ಕ ಕಾಣಿಕೆ ಕೊಟ್ಟಳೆಂದಾಯಿತು.

ಇಂಥ ಒಂದು ಸಂಶೋಧನೆ ನಡೆದದ್ದು ಅಮೇರಿಕೆಯ ಮಿನ್ನಿಸೋಟಾ ವಿಶ್ವವಿದ್ಯಾಲಯದಲ್ಲಿ. ಈ ವಿದ್ಯಾಲಯದಲ್ಲಿ ಒಂದು ಕ್ಯಾನ್ಸರ್ ಸಂಶೋಧನಾ ಕೇಂದ್ರವಿದೆ. ಕೇಂದ್ರದಲ್ಲಿ ಸ್ಟಿಫೆನ್ ಹೆಚ್ ಎಂಬ ವಿಜ್ಞಾನಿಗಳಿದ್ದಾರೆ. ಅವರು ಯೋಜಿಸಿದ ಸಂಶೋಧನೆ ಇದು.

ಈ ತಂಡದವರು ತಂಬಾಕು ಸೇದುವ ಸ್ತ್ರೀಯರ ಕೂಸುಗಳ ಮೂತ್ರವನ್ನು ಹಾಗು ಸೇದದೇ ಇದ್ದವರ ಕೂಸುಗಳ ಮೂತ್ರಗಳನ್ನು ಪರೀಕ್ಷಿಸಿದರು. ತಂಬಾಕು ಸೇವಿಸಿದ ತಾಯಂದಿರ ಕೂಸುಗಳ ಮೂತ್ರಗಳು ಕ್ಯಾನ್ಸರ್‌ಕಾರಕ ಘಟಕಗಳು ಕೂಸಿನ ದೇಹದಲ್ಲಿದ್ದುದರ ಸುಳಿವು ಕೊಟ್ಟವು. ಆದರೆ ಸೇದದೇ ಇದ್ದ ಸ್ತ್ರೀಯರ ಕೂಸುಗಳು ಮೂತ್ರ, ಯಾವುದೇ ಅಂಥ ಘಟಕಗಳ ಸುಳಿವನ್ನು ತೋರಲಿಲ್ಲ.

✷

# ಡಯಾಬಿಟಿಸ್ಸಿಗೆ ವೈರಸ್ ಕಾರಣವೆ ?

◊ ಅಂಶುಮಾಲಿ

ಡಯಾಬಿಟೀಸ್, ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿರುವ ಪ್ರಮುಖ ರೋಗ ವಾಗಿದೆ. ಡಯಾಬಿಟೀಸ್, ಸಿಹಿಮೂತ್ರ ರೋಗ, ಮಧುಮೇಹ, ಸಕ್ಕರೆ ಕಾಯಿಲೆ ಎಂದೆಲ್ಲಾ ಪರಿಚಿತವಾಗಿರುವ ಈ ರೋಗ ಪುರಾತನ ವಾದದ್ದು. ನಮ್ಮ ಸಶ್ರುತ ಸಂಹಿತೆಯಲ್ಲೂ ಮಧುಮೇಹದ ಬಗ್ಗೆ ವಿಸ್ತೃತ ವಿವರಣೆಯಿದೆ.

ಡಯಾಬಿಟೀಸ್ ಹೇಗೆ ಬರುತ್ತದೆ ಎಂಬ ಮಾಹಿತಿ ಜನಸಾಮಾನ್ಯರಿಗೆ ತಿಳಿದಿರುವಂತಹ ವಿಷಯವೇ ಆಗಿದೆ. ನಮ್ಮ ದೇಹದಲ್ಲಿ 'ಮಾಂಸಲಿ' (ಪ್ಯಾಂಕ್ರಿಯಾಸ್) ಎಂಬ ಗ್ರಂಥಿ ಯಿದೆ. ಈ ಗ್ರಂಥಿಯಲ್ಲಿ ಇರುವ ಲ್ಯಾಂಗರ್ ಹಾನನ ದ್ವೀಪಗಳು 'ಇನ್‌ಸುಲಿನ್' ಎಂಬ ರಾಸಾಯನಿಕ ವಸ್ತುವನ್ನು ಉತ್ಪಾದಿಸುತ್ತದೆ. ರಕ್ತದಲ್ಲಿರುವ ಹೆಚ್ಚುವರಿ ಸಕ್ಕರೆಯ ವಿಲೇವಾರಿಗೆ ಈ ಇನ್‌ಸುಲಿನ್ ಅಗತ್ಯ. ಇನ್‌ಸುಲಿನ್ ಕೊರತೆ ಯಿದ್ದಾಗ, ರಕ್ತದಲ್ಲಿ ಸಕ್ಕರೆಯಂಶ ಮಿತಿಮೀರು ತ್ತದೆ. ಈ ಅವಸ್ಥೆಯೇ ಸಿಹಿಮೂತ್ರ ರೋಗ!

ಇಲ್ಲಿ ಒಂದು ಮೂಲಭೂತ ಪ್ರಶ್ನೆಯಿದೆ. ಲ್ಯಾಂಗರ್ ಹಾನನ ದ್ವೀಪದಲ್ಲಿರುವ ಜೀವಕೋಶ ಗಳು ಇನ್‌ಸುಲಿನ್ ಉತ್ಪಾದನೆಯನ್ನು ಏಕೆ ಕಡಿಮೆ ಮಾಡುತ್ತಾ ಹೋಗುತ್ತವೆ ? ಅಥವಾ ಸಂಪೂರ್ಣ ನಿಲ್ಲಿಸಿಬಿಡುತ್ತವೆ ? - ಈ ಪ್ರಶ್ನೆಗೆ ಖಚಿತವಾದ ಉತ್ತರ ನಮಗೆ ತಿಳಿದಿಲ್ಲ. ಆದರೆ ಇತ್ತೀಚಿನ ಸಂಶೋಧನೆ - ಇದಕ್ಕೆ ಕಾರಣ ಒಂದು ವೈರಸ್ ಆಗಿರಬಹುದೆಂಬ ಗುಮಾನಿಯನ್ನುಂಟು ಮಾಡಿದೆ.

ಸ್ವಿಸ್ ವಿಜ್ಞಾನಿಗಳು ಒಂದು ಸಂಶೋಧನೆ ಯನ್ನು ಮಾಡಿದರು. ಇನ್‌ಸುಲಿನ್ ಆಧಾರಿತ ಡಯಾಬಿಟೀಸ್ ರೋಗಿಗಳ ಲ್ಯಾಂಗರ್‌ಹಾನನ ದ್ವೀಪಗಳನ್ನು ಆಯ್ದು, ಅದರ ಕೃಷಿಕೆ (ಕಲ್ಚರ್) ಯನ್ನು ಮಾಡಿದರು. ಈ ಕೃಷಿಕೆಯಲ್ಲಿ 'ರಿವರ್ಸ್ ಟ್ರಾನ್ಸ್‌ಕ್ರಿಪ್ಟೇಸ್' ಎಂಬ ರಾಸಾಯನಿಕ ವಸ್ತು ಕಂಡು ಬಂದಿತು. ಇಂತಹ ವಸ್ತುವನ್ನು ''ರೆಟ್ರೋವೈರಸ್''ಗಳು ಉತ್ಪಾದಿಸುತ್ತವೆ.

ರೆಟ್ರೋವೈರಸ್‌ಗಳ ತಳಿಸೂತ್ರ RNA ರೂಪದಲ್ಲಿರುತ್ತದೆ. ಈ ವೈರಸ್ ಅತಿಥಿಯ ಜೀವಕೋಶವನ್ನು ಪ್ರವೇಶಿಸಿದ ಮೇಲೆ, ತನ್ನ RNA ರೂಪವನ್ನು DNA ರೂಪಕ್ಕೆ



**ಡಯಾಬಿಟಿಸ್ ಹೇಗೆ ಬರುತ್ತದೆನ್ನುವುದಕ್ಕೆ ಜನರಲ್ಲಿ ನಾನಾ ಅಭಿಪ್ರಾಯಗಳಿವೆ. ಆದರೆ ಮೇಲ್ನೋಟಕ್ಕೆ ಕಾಣುವಂತೆ ಈ ರೋಗದ ಮೂಲ ಸರಳವಲ್ಲ. ಅದನ್ನು ಕೆದಕುತ್ತ ಹೋದಂತೆ ಬೇರೆ ಸಂಗತಿಗಳು ತಲೆದೋರಿದವು. ಅಲ್ಲಿ ಕಾಣಿಸಿಕೊಂಡಿತು ವೈರಸ್ !**

ಬದಲಾಯಿಸಿಕೊಳ್ಳುತ್ತದೆ, ಹಾಗೂ ಅತಿಥಿಯ DNA ದೊಂದಿಗೆ ಸೇರಿಕೊಂಡು ತನ್ನ ಸಂತಾನವರ್ಧನೆಯನ್ನು ಮಾಡುತ್ತದೆ. ಈ ರೂಪಾಂತರದಲ್ಲಿ ''ರಿವರ್ಸ್ ಟ್ರಾನ್ಸ್‌ಕ್ರಿಪ್ಟೇಸ್'' ಪ್ರಮುಖ ಪಾತ್ರವಹಿಸುತ್ತದೆ.

ವಿಜ್ಞಾನಿಗಳು ಪತ್ತೆದಾರಿಕೆ ನಡೆಸಿದಾಗ ''IDDMK 22'' ಎಂಬ ವೈರಸ್‌ನ ಇರುವಿಕೆ ಬಯಲಿಗೆ ಬಂದಿತು.

IDDMK 22 ಎಂಬ ಈ ವೈರಸ್ಸು ಲ್ಯಾಂಗರ್‌ಹಾನ್ ದ್ವೀಪದ ಜೀವಕೋಶಗಳಲ್ಲಿ ಸೇರಿಕೊಂಡ ಮೇಲೆ ''ಸೂಪರ್ ಆಂಟಿಜೆನ್'' (SAG) ಎಂಬ ಪ್ರೋಟೀನನ್ನು ಉತ್ಪಾದಿಸುತ್ತವೆ. ಇಂತಹ ಪ್ರೋಟೀನು ಹೊಸದು. ನಮ್ಮ ದೇಹದಲ್ಲಿ ಇರುವಂತಹದ್ದಲ್ಲ. ವೈರಸ್ ನಿರ್ಮಿಸುವ ಈ ಪ್ರೋಟೀನು ಒಂದು ಪರವಸ್ತು. ಹಾಗಾಗಿ ನಮ್ಮ ದೇಹವನ್ನು ರಕ್ಷಿಸುವ ಬಿಳಿಯ ರಕ್ತಕಣಗಳಲ್ಲಿ ಅತಿಮುಖ್ಯವಾದ ಟಿ-ದುಗ್ಧಕಣ (T-ಲಿಂಫೋಸೈಟ್) ಅಥವಾ ಟಿ-ಕಣವು ಸೂಪರ್ ಆಂಟಿಜೆನ್‌ನನ್ನು ಶತ್ರುವೆಂದು ಪರಿಗಣಿಸಿ ಅದರ ಮೇಲೆ ಎರಗುತ್ತದೆ. ಈ ಸೂಪರ್ ಆಂಟಿಜೆನ್‌ನನ್ನು ಉತ್ಪಾದಿಸುವ ಲ್ಯಾಂಗರ್‌ಹಾನನ ಜೀವಕೋಶಗಳನ್ನೂ ಶತ್ರುತಾಣವೆಂದು ಬಗೆದು, ಅವುಗಳ ಮೇಲೆ ಆಕ್ರಮಣ ನಡೆಸಿ ಧ್ವಂಸಗೊಳಿಸಲಾರಂಭಿ ಸುತ್ತವೆ. ಆಗ ಈ ಜೀವಕೋಶಗಳು ತಮ್ಮ ಸಹಜ ಕೆಲಸವಾದ ಇನ್‌ಸುಲಿನ್ ಉತ್ಪಾದನೆಯನ್ನು ನಡೆಸಲಾಗುವುದಿಲ್ಲ. ಹಾಗಾಗಿ ಇನ್‌ಸುಲಿನ್ ಕೊರತೆ ಕ್ರಮವಾಗಿ ಹೆಚ್ಚುತ್ತಾ ಹೋಗುತ್ತದೆ. ಅದರ ಫಲವಾಗಿ ಡಯಾಬಿಟೀಸ್ ಕಂಡು ಬರುತ್ತದೆ!

ಸ್ವಿಸ್ ವಿಜ್ಞಾನಿಗಳ ಗಮನಕ್ಕೆ ಬಂದ ಈ ಪ್ರಕ್ರಿಯೆ ಸಂಪೂರ್ಣ ಖಚಿತವಾದರೆ, ಕೇವಲ ಡಯಾಬಿಟೀಸ್ ಮಾತ್ರವಲ್ಲ ಮೋಟಾರ್ ನ್ಯೂರಾನ್ ಡಿಸೀಸ್, ಮಲ್ಟಿಪಲ್ ಸ್ಕ್ಲೀರೋಸಿಸ್, ರುಮಟಾಯಿಡ್ ಆರ್ಥೈಟಿಸ್ ಮುಂತಾದ ಹಲವು ಸ್ವಯಂ ವಿನಾಶಕ ರೋಗ (ಆಟೋ ಇಮ್ಯೂನ್ ಡಿಸೀಸಸ್) ಗಳ ಗುಟ್ಟು ಹೊರಬರಬಹುದು. ಈ ರೋಗಗಳಿಗೂ ಸಹ ನಿರ್ದಿಷ್ಟ ರೆಟ್ರೋವೈರಸ್ ಗಳು ಕಾರಣವಾಗಿರಬಹುದು!

ಏಡ್ಸ್ ರೋಗಕ್ಕೂ ಕಾರಣ HIV ಎಂಬ ರೆಟ್ರೋವೈರಸ್ ಎಂಬ ವಿಷಯವನ್ನು ಇಲ್ಲಿ ಪ್ರಾಸಂಗಿಕವಾಗಿ ನೆನಪಿಸಿಕೊಳ್ಳಬಹುದು. ●

# ದೂರ ಚಿಕಿತ್ಸೆ

*ಚಿಕಿತ್ಸೆಗಾಗಿ ದೂರದ ದೇಶಗಳಿಗೆ ಜನ ಹೋಗಿ ಬರುವುದನ್ನು ಕೇಳಿ ಬೆರಗಾಗುತ್ತಿದ್ದ ಕಾಲವೊಂದಿತ್ತು. ಈಗ ನಾವಿದ್ದಲ್ಲಿಗೇ ದೂರದ ಎಲ್ಲೋ ಇರುವ ವೈದ್ಯರಿಂದ ಸಲಹೆ, ಚಿಕಿತ್ಸೆ ಪಡೆಯಬಹುದು! ದೂರ ಚಿಕಿತ್ಸೆಯಂತೆ ದೂರದ ಊಟ, ದೂರದ ನಿದ್ರೆಗಳ ವ್ಯವಸ್ಥೆ ಆದರೂ ಆಗಬಹುದು!!*

**O ಆರ್. ಕೆ.**

ದೂರದರ್ಶನ, ದೂರವಾಣಿ, ದೂರ ಸಂಪರ್ಕ ಇತ್ಯಾದಿಗಳನ್ನು ಕೇಳಿದ್ದೀರಿ ಆದರೆ ದೂರಚಿಕಿತ್ಸೆ, ದೂರೌಷಧ, ದೂರವೈದ್ಯ ಇತ್ಯಾದಿಗಳನ್ನು ಕೇಳಿದ್ದೀರಾ ? ಇದೊಂದು ಹೊಸಕಲ್ಪನೆ. ದೂರ ಚಿಕಿತ್ಸೆ (tele medicine). ಆಗಲೇ ಭಾರತವನ್ನು ಪ್ರವೇಶಿಸಿದೆ. ನಿಮ್ಮ ಮನೆಯಲ್ಲಿಯೇ ಕುಳಿತು 'ಮಾಹಿತಿ ತಂತ್ರಜ್ಞಾನ'ದ ಸಹಾಯದಿಂದ ನಿಮಗೆ ಬೇಕಾದ ಔಷಧಿಯನ್ನು ಪಡೆಯಬಹುದು!



## ದೂರ ಚಿಕಿತ್ಸೆ ಎಂದರೇನು ?

ಐರೋಪ್ಯ ಕಮಿಷನ್ ಪ್ರಕಾರ ದೂರ ಚಿಕಿತ್ಸೆ ಎಂದರೆ ದೂರಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನದ ಮೂಲಕ ದೂರದಿಂದ ವೈದ್ಯಕೀಯ ಪರಿಣತರ ಸಲಹೆಗಳನ್ನು ಪಡೆಯುವುದು. ಇಲ್ಲಿ ರವಾನಿಸಲಾಗುವ ಮಾಹಿತಿಯು ವಿದ್ಯುತ್ ಸಂಕೇತಗಳಾಗಿದ್ದು ಅವುಗಳಲ್ಲಿರುವ ವೈದ್ಯಕೀಯ ಮಾಹಿತಿಗಳಿಗೆ ಮಿತಿ ಎನ್ನುವುದಿಲ್ಲ.

ದೂರ ಚಿಕಿತ್ಸೆಯ ಹಿಂದಿರುವ ಮುಖ್ಯ ಉದ್ದೇಶವೆಂದರೆ ಸಮಯ ಮತ್ತು ದೂರಗಳ ತೊಡರುಗಳನ್ನು ನಿವಾರಿಸುವುದು. ಆದ್ದರಿಂದ ಗ್ರಾಮೀಣ ಪ್ರದೇಶದಲ್ಲಿರುವವರಿಗೆ ಮತ್ತು ದೂರದ ಪ್ರದೇಶಗಳಲ್ಲಿ ಪಸರಿಸುವ ಸೈನಿಕ ನೆಲೆಗಳಿಗೆ ಇದು ಅತ್ಯಂತ ಸಹಕಾರಿಯಾಗ ಬಲ್ಲುದು. ದೂರ ಚಿಕಿತ್ಸೆಯು ತುರ್ತು ಚಿಕಿತ್ಸಾ ಸಲಹೆಗಳಿಗಾಗಿ ಮತ್ತು ದೂರದಿಂದ ಸಲಹೆಗಳನ್ನು ಪಡೆಯಲು ಪರಿಣಾಮಕಾರಿಯಾದ ಮಾರ್ಗಗಳನ್ನು ಒದಗಿಸುತ್ತದೆ. ರೋಗಿಗಳ ಎಲ್ಲಾ ವೈದ್ಯಕೀಯ ಮಾಹಿತಿಗಳ 'ಲೈಬ್ರರಿ' ಅಥವಾ 'ಸಂಗ್ರಹಾಗಾರ'ಗಳು ವೈದ್ಯರಿಗೆ ತಮಗೆ ಬೇಕಾದ ಮಾಹಿತಿಯನ್ನು ಶೀಘ್ರವಾಗಿ ಪಡೆಯಲು ಸಹಾಯವಾಗುತ್ತವೆ.

ಇಲ್ಲಿನ ನಾನಾ ವಿಧದ ಸೇವೆಗಳು ಕೇಬಲ್‌ಗಳು, ದೃಕ್‌ತಂತುಗಳು (Optical fibres), ಉಪಗ್ರಹಗಳು ಇತ್ಯಾದಿಗಳ ಮೂಲಕ ಪ್ರಸಾರ ಮಾಡಬಹುದು. ಈ ಮಾಹಿತಿಗಳಲ್ಲಿ ನಿಮ್ಮ ಅಂಗಗಳ ಕ್ಷ-ಕಿರಣ ಚಿತ್ರಗಳು, ಹೃದಯ ಬಡಿತದ ಚಿತ್ರಗಳು ಇತ್ಯಾದಿಗಳೆಲ್ಲ ಇರಬಹುದು.

ಹೊರ ರಾಜ್ಯದ, ಹೊರ ದೇಶದ ಪರಿಣಿತ ವೈದ್ಯರ ಸಲಹೆ ಪಡೆಯಲು ಆಗಲೇ ವಿಡಿಯೋ, ದೂರವಾಣಿ, ಇ-ಮೇಲ್ ಇತ್ಯಾದಿಗಳನ್ನು ಕೆಲವರು ಬಳಸುತ್ತಿದ್ದಾರೆ. ಆದರೆ ದೂರ ಚಿಕಿತ್ಸೆಯಲ್ಲಿ ವ್ಯಕ್ತಿಯ ಕೈಯಲ್ಲಿ ಒಂದು ಸಂಚಾರಿ ಗಣಕಯಂತ್ರವಿರುತ್ತದೆ. ಅಂಗೈ ಗಾತ್ರದ ಈ ಗಣಕಯಂತ್ರದಲ್ಲಿ ಆತನ ಆರೋಗ್ಯದ, ಶರೀರ ಲಕ್ಷಣಗಳ ಎಲ್ಲಾ ಮಾಹಿತಿಗಳು ಇರುತ್ತವೆ. ಅದು ದೂರವಾಣಿಗೆ ಸಂಪರ್ಕ ಹೊಂದಿರುತ್ತದೆ. ಆತ ಕಾರಿನಲ್ಲೋ ಅಥವಾ ಬೇರೆಲ್ಲೊ ಸಂಚರಿಸುತ್ತಿರುವಾಗಲೂ ವೈದ್ಯರಿಗೆ ಮಾಹಿತಿ ತಲುಪುತ್ತದೆ.

ಈ ದೂರಸಲಹಾ ಸೇವೆಗಳ ವ್ಯಾಪ್ತಿ ಅಪಾರವಾಗಿವೆ. ಅದು ಅಗ್ಗವೂ ಆಗಿದೆ. ದೂರದ ಆಸ್ಪತ್ರೆಗೆ ಹೋಗಿ ಸಲಹೆ ಪಡೆಯಬೇಕೆಂಬ ಮಾನಸಿಕ ಒತ್ತಡವಿಲ್ಲ. ಇದರ ಮುಂದುವರಿದ ರೂಪದಲ್ಲಿ ಆಸ್ಟ್ರೇಲಿಯದ ವೈದ್ಯರು 'ಟೆಲೆ - ಅಲ್ಟ್ರಾ ಸೊನೊಗ್ರಾಫಿ' ಎಂಬ ಸೇವೆಯನ್ನೂ ಆರಂಭಿಸಿದ್ದಾರೆ. ಓರ್ವ ಗರ್ಭಿಣಿ ಸ್ತ್ರೀಯನ್ನು ಸಂಪರ್ಕಿಸಲು ವಿವಿಧೆಡೆಗಳಲ್ಲಿರುವ ಪ್ರಸೂತಿ ವೈದ್ಯ ಪರಿಣತರು ಸಮಾವೇಶಗೊಳ್ಳಬಹುದು. ಅಂದರೆ ಅವರೆಲ್ಲ ಒಂದೆಡೆ ಸೇರಲಾರದೆ ಪರಸ್ಪರರಿಂದ ನೂರಾರು ಮೈಲಿಗಳ ದೂರದಲ್ಲಿ ಉಳಿದುಕೊಂಡೇ ಚರ್ಚೆ ನಡೆಸಬಹುದು. ಇದು ವಿಶೇಷವಾಗಿ ಗ್ರಾಮೀಣ ಪ್ರದೇಶದ ಆಸ್ಪತ್ರೆಗಳಿಗೆ ಹೆಚ್ಚು ಅನುಕೂಲಕರವಾಗಿರುತ್ತದೆ. ಪರಿಣತರು ಗರ್ಭಿಣಿಯ ಶಿಶುವನ್ನು ದೂರದಿಂದಲೇ ಪರೀಕ್ಷಿಸಿ ಸ್ಥಳೀಯ ಆಸ್ಪತ್ರೆಗಳಿಗೆ ಸಲಹೆಗಳನ್ನು ಕೊಡಬಹುದು.

ಇದರ ಇನ್ನೊಂದು ಮಹತ್ವದ ಕ್ರಾಂತಿಕಾರಿ ಕೊಡುಗೆಯೆಂದರೆ 'ಟೆಲೆ ಮೆಡಿಕಲ್ ಸಿಸ್ಟಮ್ಸ್ ರಿಮೋಟ್ ಸೈನ್ಸ್ ಮಾನಿಟರ್' ಎಂಬುದು. ವಿಮಾನ ಸಂಚಾರದಲ್ಲಿರುವವನಿಗೆ ಏನಾದರೂ

ತೊಂದರೆ ಆದರೆ ಸಹಾಯಕ್ಕೆ ಇದು ಬರುತ್ತದೆ. 'ಏರ್ ಲೈನ್ಸ್' ಆಗಲೇ ಇದನ್ನು ಪರೀಕ್ಷಿಸುತ್ತಿದೆ. ಈ ವ್ಯವಸ್ಥೆಯಲ್ಲಿ ರೋಗಿಯ ಹತ್ತಿರ ಸಣ್ಣ 'ಬ್ರೀಫ್‌ಕೇಸ್' ಗಾತ್ರದ ಸಾಧನವು ಪರಸ್ಪರ ಸಂಪರ್ಕ ಸಾಧನವಾಗಿರುತ್ತದೆ. ಅಂದರೆ ಭೂಮಿಯ ಮೇಲಿರುವ ವೈದ್ಯರು ಮತ್ತು ಹಾರಾಟದಲ್ಲಿರುವ ರೋಗಿಯ ಮಧ್ಯೆ ನಿಸ್ತಂತು (ವೈರ್‌ಲೆಸ್) ಸಂಪರ್ಕವಿರುತ್ತದೆ. ಪ್ರಯಾಣಿಕನು ಅಸ್ವಸ್ಥನಾದರೆ ತಕ್ಷಣ ಈ ಸಾಧನವನ್ನು ಆತನಿಗೆ ಅಳವಡಿಸಲಾಗುತ್ತದೆ. ಆಗ ಅದು ಆತನ ರಕ್ತದೊತ್ತಡ, ಹೃದಯ ಬಡಿತದ ಗತಿ, ಶ್ವಾಸೋಚ್ಛ್ವಾಸ, ನಾಡಿ ಮತ್ತು ರಕ್ತದ ಆಮ್ಲಜನಕ ಮಟ್ಟ ಇತ್ಯಾದಿಗಳನ್ನು ಪರೀಕ್ಷಿಸಿ ಆ ಮಾಹಿತಿಯನ್ನು ವೈದ್ಯರಿಗೆ ರವಾನಿಸುತ್ತದೆ. ಅದರ ಆಧಾರದ ಮೇಲೆ ಭೂಮಿಯ ಮೇಲಿನ ವೈದ್ಯರು ವಿಮಾನದಲ್ಲಿರುವ ಸಿಬ್ಬಂದಿವರ್ಗದವರಿಗೆ ತಕ್ಷಣ ಕೈಗೊಳ್ಳಬೇಕಾದ ಪ್ರಥಮ ಚಿಕಿತ್ಸೆಯ ಸಲಹೆಗಳನ್ನು ನೀಡುತ್ತಾರೆ.

ದೂರಚಿಕಿತ್ಸೆಯು ದೂರ ಶಸ್ತ್ರಚಿಕಿತ್ಸೆಯಂಥ ಆಧುನಿಕ ಕ್ಲಿಷ್ಟ ಕಲ್ಪನೆಗಳಿಗೆ ದಾರಿ ಮಾಡಿಕೊಟ್ಟಿದೆ. ಟೆಲರೇಡಿಯಾಲಜಿ, ಟೆಲಿಪೆಥಾಲಜಿ ಮತ್ತು ಟೆಲಿಸೈಟ್ರಿ (ದೂರ ಮನೋಚಿಕಿತ್ಸೆ)ಗಳು ತಲೆಯೆತ್ತಿವೆ. ಇವೆಲ್ಲ ವೈದ್ಯಕೀಯ ಸಂಶೋಧನೆಗಳಿಗೂ ಸಹಾಯಕಾರಿಯಾಗಬಲ್ಲುವು.

### ಉದ್ದೇಶಗಳು

ದೂರಚಿಕಿತ್ಸಾ ಸೇವೆಗಳ ಉದ್ದೇಶಗಳನ್ನು ಹೀಗೆ ನಿರೂಪಿಸಲಾಗುತ್ತದೆ.

**೧. ಮಾಹಿತಿ ಸೇವೆಯ ಪರಿವೀಕ್ಷಣೆ:**

ಇದರಲ್ಲಿ ವೈದ್ಯರು ರೋಗಿಯ ಎಲ್ಲಾ ಮಾಹಿತಿಗಳನ್ನು ಪಡೆಯುವುದು ಸಾಧ್ಯವಾಗುತ್ತದೆ. ಆ ಮಾಹಿತಿಯು ಆತನ ಹೆಸರು, ವಯಸ್ಸು, ಲಿಂಗ, ಪ್ರಸ್ತುತ ರೋಗಲಕ್ಷಣಗಳು ಇತ್ಯಾದಿಗಳನ್ನು ಒಳಗೊಂಡಿರುತ್ತದೆ.

**೨. ಪ್ರಮುಖ ಲಕ್ಷಣಾ ವೀಕ್ಷಣಾ ಸೇವೆ:**

(Vital Sign Monitoring Service)

ಇದರಿಂದ ರಕ್ತದೊತ್ತಡ, ಉಷ್ಣತಾಮಾನ, ರಕ್ತದ ಆಮ್ಲಜನಕ ಸಾಂದ್ರತೆ, ಉಸಿರಾಟದ ಗತಿ, ಹೃದಯ ಬಡಿತ ಲೇಖ (ECG) ಇತ್ಯಾದಿ ಮಹತ್ವದ ಲಕ್ಷಣಗಳನ್ನು ಗಮನಿಸಬಹುದಾಗಿದೆ. ರೋಗಿಯು ಗಂಡಾಂತರಕಾರಿಯಾದ ಸ್ಥಿತಿಯಲ್ಲಿ ಇದ್ದಾಗ ತಕ್ಷಣ ಕರೆಯ ಗಂಟೆಯ ವ್ಯವಸ್ಥೆಯೂ ಇದರಲ್ಲಿ ಇದೆ.

**೩. ಬಹು ಮಾಧ್ಯಮ ಸಲಹಾ ಸೇವೆ:**

(Multimedia Consulting Service)

ವಿವಿಧ ಮಾಧ್ಯಮಗಳ ಮೂಲಕ ಇಲ್ಲಿ ರೋಗಿಯನ್ನು ಪರೀಕ್ಷಿಸಬಹುದು. ಅಲ್ಲದೆ ರೋಗಿಗೆ ತಕ್ಷಣ ಬೇಕಾದ ಶುಶ್ರೂಷೆಯ ಬಗ್ಗೆ ಸಲಹೆಗಳನ್ನು ನೀಡಬಹುದು.

### ಅನ್ವಯಗಳು

ದೂರಚಿಕಿತ್ಸಾ ವಿಧಾನಗಳು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ನಾನಾ ಕ್ಷೇತ್ರಗಳಲ್ಲಿ ಅನ್ವಯವಾಗುತ್ತವೆ. ಅವುಗಳ ಸಂಕ್ಷಿಪ್ತ ಪರಿಚಯ ಇಲ್ಲಿದೆ:

★ **ರೋಗ ಶಾಸ್ತ್ರ (ಪ್ಯಾಥೊಲಾಜಿ) :**

ರೋಗದ ಮಾಹಿತಿಯನ್ನು 'ವಿಡಿಯೊ ಮೈಕ್ರೊಸ್ಕೋಪ' ಮೂಲಕ ದೂರದ ಆಸ್ಪತ್ರೆಗಳಿಗೆ ರವಾನಿಸಬಹುದು.

★ **ಎಂಡೊಸ್ಕೋಪಿ (ಅಂತರ್ ಅಂಗ ಪರೀಕ್ಷೆ):** ಕಿವಿ, ಮೂಗು ಮತ್ತು ಗಂಟಲುಗಳ ಒಳಪರೀಕ್ಷೆಯನ್ನು ಮಾಡಲು ಬೆಳಕಿನ ಮೂಲ, ಕ್ಯಾಮರಾ, ಕ್ಯಾಮರಾ ನಿಯಂತ್ರಕ ಇತ್ಯಾದಿ ಸಾಧನಗಳನ್ನು ಬಳಸುತ್ತಾರೆ. ಇವುಗಳನ್ನು ವಿಡಿಯೊ ಸಮಾವೇಷ ಘಟಕದೊಂದಿಗೆ ಮತ್ತು ದೂರದ ಸಲಹಾಗಾರರೊಂದಿಗೆ ಸಂಪರ್ಕಿಸಬಹುದು.

★ **ಲ್ಯಾಪ್ರೋಸ್ಕೋಪಿಕ್ ಶಸ್ತ್ರಚಿಕಿತ್ಸೆ :**

ಈ ಶಸ್ತ್ರಚಿಕಿತ್ಸೆಯ ಸಮಯದಲ್ಲಿ ರೋಗಿಯ ಅಂಗಗಳ ಭಾಗಗಳು ಟಿ.ವಿ. ಪರದೆಯ ಮೇಲೆ ಗೋಚರಿಸುತ್ತವೆ. ಶಸ್ತ್ರಚಿಕಿತ್ಸೆ ಮಾಡಬೇಕಾದ ಸರಿಯಾದ ಸ್ಥಳವನ್ನು ತಲುಪಲು ಇದು ಅನುಕೂಲ. ಈ ಚಿತ್ರಗಳನ್ನು ದೂರದ ತಜ್ಞರಿಗೆ ರವಾನಿಸಿ ತಕ್ಷಣ ಸಲಹೆಗಳನ್ನು ಪಡೆಯಬಹುದು.

★ **ಇಕೋ - ಕಾರ್ಡಿಯೊಗ್ರಾಫಿ (ಧ್ವನಿ - ಹೃದಯ ಪರೀಕ್ಷೆ ) :** ಹೃದಯ ರೋಗಗಳನ್ನು ಪರೀಕ್ಷಿಸಲು ಅದರಲ್ಲಿ ಧ್ವನಿತರಂಗಗಳನ್ನು ಹಾಕಿ ನೋಡುತ್ತಾರೆ. ಅದರಿಂದ ಹೃದಯದ ಅಪಧಮನಿ ಮತ್ತು ವಿವಿಧ ಕವಾಟಗಳ ಚಿತ್ರಣ ದೊರೆಯುತ್ತದೆ. ಇದನ್ನು ದೂರದ ತಜ್ಞರಿಗೆ ಕಳುಹಿಸಿ ಸಲಹೆ ಪಡೆಯಬಹುದು.

★ **ಡರ್ಮಟಾಲಾಜಿ (ಚರ್ಮರೋಗ) :**

ಚರ್ಮದ ಸೂಕ್ಷ್ಮಾತಿಸೂಕ್ಷ್ಮ ಛಾಯಾಚಿತ್ರಗಳನ್ನು ಪರಿಣತರಿಗೆ ಕಳುಹಿಸಬಹುದು.

★ **ಗ್ಯಾಸ್ಟ್ರೊಸ್ಕೋಪಿ (ಉದರ ರೋಗ ಪರೀಕ್ಷೆ):** ಅನ್ನನಾಳ, ಜಠರ, ಸಣ್ಣ ಕರುಳು, ದೊಡ್ಡ ಕರುಳು ಇತ್ಯಾದಿ ಪಚನಾಂಗಗಳ ಚಿತ್ರವನ್ನು ಈ ಪರೀಕ್ಷಕವು ಸೆರೆಹಿಡಿಯುತ್ತದೆ. ಇದನ್ನು ಬೇಕಾದರೆ ವಿಡಿಯೊ ರಿಕಾರ್ಡರ್‌ಗಳಿಗೆ, ಗಣಕಯಂತ್ರಗಳಿಗೆ ಅಥವಾ ಸಮಾವೇಶಗಳ ಘಟಕಕ್ಕೆ ಕಳುಹಿಸಬಹುದು.

ವೈದ್ಯಕೀಯ ವಿಜ್ಞಾನದಲ್ಲಿ ಈ ದೂರ ಚಿಕಿತ್ಸೆಯ ಅನ್ವಯಗಳು ವಿಶಾಲವಾಗಿವೆ. ಮೇಲೆ ಹೇಳಿದವುಗಳು ಕೆಲವು ಮಾತ್ರ. ಆದಾಗ್ಯೂ ಈ 'ಟೆಲೀಮೆಡಿಸಿನ್' ಎನ್ನುವಂಥ ಕ್ರಾಂತಿಕಾರಿ ಚಿಕಿತ್ಸೆಯನ್ನು ಅನುಷ್ಠಾನಕ್ಕೆ ತರಲು ಅನೇಕ ತೊಡಕುಗಳಿವೆ. ಅವುಗಳಲ್ಲಿ ಕೆಲವು ಇಂತಿವೆ.

★ **ರಕ್ಷಣೆ ಮತ್ತು ಗೌಪ್ಯತೆ :**

ದೂರೌಷಧ ಅಥವಾ ದೂರಚಿಕಿತ್ಸೆಯನ್ನು ಪರಿಣಾಮ ಕಾರಿಯಾಗಿ ಅನುಷ್ಠಾನಗೊಳಿಸಬೇಕಾದರೆ ರೋಗಿಯ ವೈದ್ಯಕೀಯ ದಾಖಲುಗಳು, ಮಾಹಿತಿಗಳು ಇತ್ಯಾದಿಗಳನ್ನು ಜೋಪಾನವಾಗಿ ಇಡಬೇಕಾಗುತ್ತದೆ. ಆದ್ದರಿಂದ ಅವುಗಳ ಗೌಪ್ಯತೆಯನ್ನು ಕಾಪಾಡಿಕೊಂಡು ಹೋಗುವುದೂ ಅವಶ್ಯವಾಗಿರುತ್ತದೆ.

★ **ಜವಾಬ್ದಾರಿ ಹಂಚಿಕೆ :**

ರೋಗಿಯ ಮಾಹಿತಿಗಳು ನಾನಾ ಸಲಹಾಗಾರರಲ್ಲಿ ಮತ್ತು ನಾನಾ ವೈದ್ಯರಲ್ಲಿ ಹಂಚಿಹೋಗಿರುತ್ತವೆ. ಆಕಸ್ಮಿಕವಾಗಿ ರೋಗಿಗೆ ಏನಾದರೂ ತೊಂದರೆ ಆದರೆ ಅಥವಾ ಅಧಿಕಾರ ದುರುಪಯೋಗವಾದರೆ ಯಾರನ್ನು ಹೊಣೆ ಮಾಡಬೇಕೆಂಬುದು ತಿಳಿಯುವುದಿಲ್ಲ.

★ **ಲೈಸೆನ್ಸ್ ಗೊಂದಲ :**

ವೈದ್ಯಕೀಯ ವೃತ್ತಿಯವರಿಗೆ ವಿವಿಧ ರಾಜ್ಯಗಳಲ್ಲಿ ವಿವಿಧ ಕಾನೂನುಗಳಿವೆ. ಇದು ಕಾನೂನಿನ ತೊಡಕನ್ನು ತರಬಹುದು.

★ **ಮಾಹಿತಿಯ ನಂಬಲರ್ಹತೆ :**

ರೋಗಿಗೆ ಸಂಬಂಧಪಟ್ಟ ಮಾಹಿತಿಯು ಎಷ್ಟರ ಮಟ್ಟಿಗೆ ನಂಬಲರ್ಹ ? 'ಡೇಟಾಬೇಸ್' ನಿಂದ ಪಡೆಯಲಾಗುವ ಈ ಮಾಹಿತಿಯ ನಂಬಲರ್ಹತೆಯು ಪ್ರಶ್ನಾರ್ಥಕವಾಗಿರುತ್ತದೆ.

★ **ಅಪಬಳಕೆ :**

ಈ ಸೌಲಭ್ಯವನ್ನು ದುರುದ್ದೇಶಗಳಿಗಾಗಿ ಬಳಸುವ ಸಾಧ್ಯತೆಯೂ ಇದೆ. ಅದಕ್ಕಾಗಿ ಉಪಾಯಗಳನ್ನು ರೂಪಿಸಬೇಕಾಗಿದೆ.

**ತಾತ್ಪರ್ಯ :**

ಇಂದು ಭಾರತದಲ್ಲಿ ಚೆನ್ನೈನ ದೇವಕಿ ಆಸ್ಪತ್ರೆ ಮತ್ತು ದೆಹಲಿಯ ಆಶ್‌ಲೋಕ್ ಆಸ್ಪತ್ರೆಗಳು ದೂರಚಿಕಿತ್ಸಾ ಸೌಲಭ್ಯಗಳನ್ನು ಹೊಂದಿವೆ. ಉತ್ತಮ ಮಟ್ಟದ ಶುಶ್ರೂಷೆಗೆ ಮತ್ತು ಶೀಘ್ರಗತಿಯ ವೈದ್ಯಕೀಯ ಸಲಹೆಗೆ ಇದೊಂದು ಉತ್ತಮ ಮಾರ್ಗ. ❒

● ಸುನಂದಾ ಕಿ. ತಿಗಡಿಮಠ
ಧಾರವಾಡ



# ಮಾನವೀಯತೆಯ ಮೌಲ್ಯ

**ಮಾನವೀಯತೆ ಮನುಷ್ಯ ಸಹಜ ಗುಣ. ಅದು, ನಿಭಾಯಿಸಿ ಕೈ ತೊಳೆದುಕೊಳ್ಳುವ ಜವಾಬ್ದಾರಿಯಲ್ಲ. ಒಂದು ಹಂತಕ್ಕೆ ತಲುಪಿ ನಿಂತು ಹೋಗುವ, ಒಂದು ಅವಧಿಗೆ ಮುಗಿದುಬಿಡುವ ಕರ್ತವ್ಯವಲ್ಲ. ವ್ಯಕ್ತಿಗಾಗಿ ಮಾನವೀಯತೆಯ ಉದಯವಾಗಿರಲಾರದು. ಮಾನವೀಯತೆಯ ಸಾಕಾರಕ್ಕೆ ಮನುಷ್ಯ ನೆಪವಾಗಿರಬಹುದು. ಅಂತೆಯೇ, ಮನುಷ್ಯನಿಗೆ, ಅವನ ದೇಹಕ್ಕೆ ಸಾವಿರುವಂತೆ..... ಆತ ಬಿಟ್ಟು ಹೋಗುವ ಮಾನವೀಯತೆಗೆ, ಅದರ ಮೌಲ್ಯಗಳಿಗೆ ಅಂತ್ಯವೆಂಬುದಿಲ್ಲ. ಅದು ಚಿರಾಯು !**

**ಮಾ**ನವೀಯತೆಯ ಮಾತು ಬಂದಾಕ್ಷಣ ಎಲ್ಲರೂ 'ನಮಗೂ ಮಾನವೀಯತೆ' ಎನ್ನುವುದು ಇದೆ. ಆದರೆ, ಅವರಿಗೆ ಇಲ್ಲ, ಇವರಿಗೆ ಇಲ್ಲ ಎಂದು ಒಬ್ಬರ ಮೇಲೆ ಒಬ್ಬರು ದೂರುವುದು ಸಹಜವಾಗಿ ನಮ್ಮಲ್ಲಿ ಕಂಡು ಬರುತ್ತದೆ. ನಿಜವಾದ ಅರ್ಥದಲ್ಲಿ ಮಾನವೀಯತೆ ಎಂದರೆ ಏನು ? ಅದು ಹೇಗಿರುತ್ತದೆ ? ಇಂದಿನ ಜೀವನದಲ್ಲಿ ಅದು ತನ್ನ ಅರ್ಥ ಕಳದುಕೊಳ್ಳುತ್ತಿದೆಯೇ ಎಂದೆಲ್ಲ ಯೋಚಿಸುವುದು ಮುಖ್ಯವಾಗಿದೆ.

ಒಂದು ಬಸ್ಸಿನಲ್ಲಿ ಹೋಗುವಾಗ ಹೆಣ್ಣು ಮಕ್ಕಳಿಗೆ ಅದರಲ್ಲೂ ಸಣ್ಣ ಮಕ್ಕಳನ್ನು ಎತ್ತಿಕೊಂಡು ನಿಂತಿರುವ ಸ್ತ್ರೀಯರಿಗೆ ಥಟ್ಟನೇ ಎದ್ದು ನಿಂತು ಹೆಣ್ಣೇ ಆಗಲಿ, ಗಂಡೇ ಆಗಲಿ ಜಾಗ ಬಿಟ್ಟು ಕೊಟ್ಟು, ಅವಳಿಗೆ ಕೂಡಲು ಹೇಳಿದರೆ ಅದು ಮಾನವೀಯತೆ. ಇಬ್ಬರು ಜಗಳ ಮಾಡುತ್ತಿದ್ದರೆ ಅದರ ಮಜ ತೆಗೆದುಕೊಳ್ಳುವುದು, 'ನಮಗೇಕೆ?' ಎಂದು ಮುಖ ತಿರುವಿಕೊಂಡು ಹೋಗುವುದು ಮಾನವೀಯತೆಯಲ್ಲ. ಇಬ್ಬರಿಗೂ ಆದಷ್ಟು ಸಮಾಧಾನ ಹೇಳಿ ಜಗಳ ಪರಿಹರಿಸಲು ಮುಂದಾಗಬೇಕು.

ಎಲ್ಲರಲ್ಲೂ ಸಮಾನ ಗುಣಗಳಿರುತ್ತವೆ ಎಂದು ಹೇಳಲಿಕ್ಕಾಗದು. ಒಬ್ಬರದು ಒಂದು ರೀತಿಯ ಜಾಯಮಾನವಾದರೆ, ಇನ್ನೊಬ್ಬರದು ಇನ್ನೊಂದು ರೀತಿಯ ಜಾಯಮಾನವಾಗಿರುತ್ತದೆ. ಮಾನವ ಕುಲದಲ್ಲಿ ಜನಿಸಿದ ಒಂದೇ ಒಂದು ಕಾರಣಕ್ಕಾಗಿ ನಮ್ಮೆಲ್ಲರಲ್ಲಿ ಕೆಲವು ರೀತಿಯವಾದರೂ ಸಹಜ ಹಾಗೂ ಸಮಾನ ಗುಣಗಳಿರುತ್ತವೆ ಮತ್ತು ಇರಲೇಬೇಕಾಗುತ್ತದೆ. ಅಂಥ ಸಹಜ, ಸಮಾನ ಗುಣಲಕ್ಷಣಗಳಲ್ಲಿ ಮಾನವೀಯತೆಯೂ ಒಂದು. ನಮ್ಮಲ್ಲಿರುವ ಸಹಜ ಮಾನವೀಯ ಗುಣಗಳನ್ನು ಇನ್ನೊಬ್ಬರಿಗೆ ತೋರ್ಪಡಿಸಿದಾಗ ನಮ್ಮಿಂದ ಅವರಿಗಾಗುವ ಸಹಾಯಕ್ಕಿಂತ, ಈ ಸಹಾಯದಿಂದ ಒಂದು ರೀತಿಯ ಮಾನಸಿಕ ಸುಖ, ನೆಮ್ಮದಿ, ಸಂತೋಷ ನಮ್ಮಲ್ಲಿ ಮೂಡುತ್ತದೆ. ನಮ್ಮ ದೈಹಿಕ ಆರೋಗ್ಯ ಎಷ್ಟು ಮುಖ್ಯವೋ ಅಷ್ಟೇ ನಮ್ಮ ಮಾನಸಿಕ ಆರೋಗ್ಯವು ಮುಖ್ಯವಾಗಿದೆ. ಮಾನಸಿಕ ಸುಖ, ಸಂತೋಷ ಪಡೆಯಲು ನಮ್ಮ ಮನಸ್ಸನ್ನು ಸದಾ ನವೋಲ್ಲಾಸದಲ್ಲಿ ಇಡಲು ನಮ್ಮಲ್ಲಿರುವ ಮಾನವೀಯ ಗುಣಲಕ್ಷಣಗಳು ಹೆಚ್ಚಿನ ಪಾತ್ರ ನಿರ್ವಹಿಸುತ್ತವೆ.

ಇಚ್ಛೆಯನ್ನು ಲವಲವಿಕೆಯಿಂದ, ಪ್ರೇಮವನ್ನು ತ್ಯಾಗದಿಂದ, ಜ್ಞಾನವನ್ನು ಸಮತೆಯಿಂದ, ತಪಸ್ಸನ್ನು ಸಹನಶೀಲತೆಯಿಂದ, ಪ್ರೀತಿಯನ್ನು ಸೇವೆಯಿಂದ, ಶಕ್ತಿಯನ್ನು ಶ್ರಮದಿಂದ, ಉದಾರತೆಯನ್ನು ದಾನದಿಂದ ಅಳೆದು ನೋಡಬೇಕು. ಇದರಿಂದ ನಮ್ಮನ್ನು, ನಮ್ಮ ಮನಸ್ಸಿನ ದೃಢತೆಯನ್ನು ನಾವೇ ಅಳೆದುಕೊಂಡಂತಾಗುತ್ತದೆ.

ಸುಖ, ಸಂತೋಷವನ್ನು ಇನ್ನೊಬ್ಬರಲ್ಲಿ ಹಂಚಿಕೊಳ್ಳುತ್ತಾ ಹೋದಂತೆ ಹಿಗ್ಗುತ್ತಾ ಹೋಗುತ್ತದೆ. ಅದೇ ರೀತಿ ನಮ್ಮ ಮಾನವೀಯ ಗುಣಗಳನ್ನು ಇನ್ನೊಬ್ಬರಿಗೆ ತೋರ್ಪಡಿಸುತ್ತಾ ಹೋದಂತೆ ನಮ್ಮ ವ್ಯಕ್ತಿತ್ವ , ನಮ್ಮ ಪ್ರತಿಷ್ಠೆ ಇನ್ನೊಬ್ಬರ ದೃಷ್ಟಿಯಲ್ಲಿ ಹೆಚ್ಚುತ್ತಾ ಹೋಗುತ್ತದೆ.

ಇಂದಿನ ದಿನಗಳಲ್ಲಿ ಮಾನವೀಯತೆ ತನ್ನ ನಿಜವಾದ ಅರ್ಥವನ್ನೇ ಕಳೆದುಕೊಳ್ಳುತ್ತಿದೆ. ಇಂದಿನ ನಾಟಕೀಯ ಬದುಕು ಬದುಕಾಗದೇ ಯಂತ್ರದಂತೆ ನಡೆಯುತ್ತಿದೆ. ''ಮಾನವೀಯತೆ ಇಲ್ಲದವರ ಮಧ್ಯ ನಾನು ನಾನಾಗಿರುವುದಕ್ಕಿಂತ ಕಲ್ಲಾಗಬೇಕಿತ್ತು, ಕಲ್ಲು ಗೊಂಬೆಯಾಗಬೇಕಿತ್ತು'' ಎಂದು ನಮ್ಮ ಮನಸ್ಸು ಹಲವಾರು ಸಾರಿ ಹೇಳುತ್ತಲೇ ಇರುತ್ತದೆ.

ತನು, ಮನ, ಧನಗಳು ಭಗವಂತನ ಕೊಡುಗೆಗಳು. ಇವುಗಳತ್ತ ಯಾವಾಗಲೂ ನಾವು ವಿಶೇಷ ಗಮನ ಹರಿಸಿ ಕಾಳಜಿ ವಹಿಸಲೇಬೇಕು. ಯಾವದೇ ಒಂದನ್ನು ನಿರ್ಲಕ್ಷ್ಯ ಮಾಡಿದರೂ ದುಃಖದ ಆಗಮನ ಖಂಡಿತ. ಇವುಗಳಲ್ಲಿ ಯಾವುದೂ ಶಾಶ್ವತವಲ್ಲ. ಆದರೆ, ಭೂಮಿಯ ಮೇಲೆ ಇರುವಷ್ಟು ದಿನವಾದರೂ ಇವುಗಳ ಅವಶ್ಯಕತೆ ನಮಗೆ ತುಂಬಾ ಇರುತ್ತದೆ.

ಹೂವಿಗೆ ಕಂಪಿದ್ದಂತೆ ಮನುಷ್ಯನಿಗೆ ವ್ಯಕ್ತಿತ್ವವಿರುತ್ತದೆ. ಹೂವಿನ ಸುಗಂಧ, ಅದರ ಕಂಪು ಹಬ್ಬಿದಷ್ಟು ವಾತಾವರಣದ ಮಧುರತೆ ಹೆಚ್ಚುತ್ತದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವ, ಅವನ ಗುಣಲಕ್ಷಣಗಳು ಇನ್ನೊಬ್ಬರಿಗೆ ಮಾದರಿಯಾಗುತ್ತವೆ. ಅವರಲ್ಲೂ ಮಧುರತೆ ಹುಟ್ಟುತ್ತದೆ. ಮಾನವೀಯತೆಯಲಿ ಸಾಗು ಮುಂದೆ; ಇದೇ ನನ್ನ ಬಯಕೆ, ಇದೇ ನನ್ನ ಹಾರೈಕೆ ಎಂದಿತೆನ್ನಮನ.

ಸಹಬಾಳ್ವೆಯ ಸಸಿ ನೆಡುವ, ಹೃನ್ಮನಗಳಿಂದ ಬದುಕಿಗೆ ಸ್ಪಂದಿಸುವ ಮನುಜಕುಲವೇ ನಿನಗನ್ನ ಎದೆಯಾಳದ ಕೋಟಿ ನಮನ. ■




# ನೋಬಲ್ - ವಯಾಗ್ರ - ನೈಟ್ರಿಕ್ ಆಕ್ಸೈಡ್

● ನಚಿಕೇತ

*ನಮ್ಮ ಭಾರತೀಯ ದರ್ಶನದಲ್ಲಿ ಅನೇಕ ಪ್ರಮುಖ ಪಾತ್ರಗಳು ಬರುತ್ತವೆ. ಅವುಗಳಲ್ಲಿ ಗಮನೀಯವಾದದ್ದು ಕೃಷ್ಣನ ಪಾತ್ರ. ಕೃಷ್ಣ ಬಹುಮುಖ ಪ್ರತಿಭೆಯುಳ್ಳವನು. ಅವನು ಪಾಲಿಸಬಲ್ಲ. ಕಾಯಬಲ್ಲ. ಸಂಧಾನ ಮಾಡಬಲ್ಲ. ಅವಶ್ಯವಿದ್ದಾಗ ಕೊಲ್ಲಲೂ ಹಿಂದೆಗೆಯುವುದಿಲ್ಲ. ಒಟ್ಟಿನಲ್ಲಿ ವರ್ಣಮಯ ಪಾತ್ರ.*



ಬಹುಶಃ ರಾಸಾಯನಿಕ ಸಂಯುಕ್ತಗಳ ಲೋಕದಲ್ಲಿ, ಕೃಷ್ಣನಂತಹ ಗುಣಸಾಮ್ಯವುಳ್ಳ ಅಣು ನೈಟ್ರಿಕ್ ಆಕ್ಸೈಡ್ ಆಗಿರಬಹುದು. ನೈಟ್ರಿಕ್ ಆಕ್ಸೈಡ್ ನಮಗೆ ತಿಳಿದಿರುವ ಅತ್ಯಂತ ಪುಟ್ಟ ಅಣುಗಳಲ್ಲಿ ಒಂದು. ಇದರ ರಾಸಾಯನಿಕ ರಚನೆ ಸರಳ. ಕೇವಲ ಸಾರಜನಕ ಮತ್ತು ಆಮ್ಲಜನಕಗಳಿಂದಾದ ಈ ನೈಟ್ರಿಕ್ ಆಕ್ಸೈಡ್ ಜೀವವನ್ನು ಉಳಿಸಬಲ್ಲುದು. ಜೀವವನ್ನು ತೆಗೆಯಬಲ್ಲುದು. ಜೀವಾಧಾರಕ ಕೆಲಸಗಳಲ್ಲಿ 'ದೂತ'ನಂತೆ ಕೆಲಸ ಮಾಡಬಲ್ಲುದು. ಕಳೆದ ಒಂದು ದಶಕದಲ್ಲಿ ನೈಟ್ರಿಕ್ ಆಕ್ಸೈಡಿನ ಬಹುಮುಖ ಕಾರ್ಯಗಳು ಬೆಳಕಿಗೆ ಬಂದವು. ಹಾಗಾಗಿ ೧೯೯೨ರಲ್ಲಿ 'ಸೈನ್ಸ್' ಪತ್ರಿಕೆಯು ನೈಟ್ರಿಕ್ ಆಕ್ಸೈಡನ್ನು "೧೯೯೨ರ ಅಣು" (ಮಾಲೆಕ್ಯೂಲ್ ಆಫ್ ೧೯೯೨) ಎಂದು ವರ್ಣಿಸಿತು.

ಇಂತಹ ನೈಟ್ರಿಕ್ ಆಕ್ಸೈಡ್ ಈಗ ಮತ್ತೊಮ್ಮೆ ಸುದ್ದಿಯಲ್ಲಿದೆ. ನೈಟ್ರಿಕ್ ಆಕ್ಸೈಡಿನ ವಿವಿಧ ಕಾರ್ಯಗಳನ್ನು ನಮಗೆ ಪರಿಚಯ ಮಾಡಿಕೊಟ್ಟವರಲ್ಲಿ ರಾಬರ್ಟ್ ಫರ್ಶ್‌ಗಾಟ್, ಲೂಯಿಸ್ ಇಗ್ನಾರೋ ಮತ್ತು ಫೆರಿದ್ ಮುರಾದ್ ಬಹಳ ಮುಖ್ಯವಾದವರು. ಈ ಮೂವರೂ ಔಷಧಶಾಸ್ತ್ರ ಪ್ರಾಧ್ಯಾಪಕರು. ಇವರಿಗೆ ೧೯೯೮ರ ವೈದ್ಯಕೀಯ ಮತ್ತು ಅಂಗಕ್ರಿಯಾ ಶಾಸ್ತ್ರದ ನೋಬಲ್ ಪಾರಿತೋಷಕ ಲಭಿಸಿದೆ. ೯೭೮,೦೦೦ ಮೊತ್ತದ ಈ ಪ್ರಶಸ್ತಿ ಮೂವರಿಗೂ ಸರಿಸರಮನಾಗಿ ದಕ್ಕಿದೆ.

**ನೋಬಲ್ :**

ಆಲ್ಫ್ರೆಡ್ ನೋಬಲ್ ಮತ್ತು ನೋಬಲ್ ಪ್ರಶಸ್ತಿಯ ಬಗ್ಗೆ ನಮಗೆಲ್ಲ ತಿಳಿದಿದೆ. ಟ್ರೈನೈಟ್ರೋಟಾಲಿನನ್ನು ನೋಬಲ್ ಕಂಡುಹಿಡಿದನು. ಡೈನಮಿಟ್ ಉತ್ಪಾದನೆಯಲ್ಲಿ ಟ್ರೈನೈಟ್ರೋಟಾಲೀನನದೆ ಪ್ರಮುಖ ಪಾತ್ರ. ಇದರ ಏಕಸ್ವಾಮ್ಯ (ಪೇಟೆಂಟ್) ನೋಬಲ್‌ನದು. ಹಾಗಾಗಿ ನೋಬಲ್ ಅಪಾರ ಹಣ ಸಂಪಾದಿಸಿದನು. ಡೈನಮೈಟ್ ವಿನಾಶಕಾರಿ ವಸ್ತು. ಲಕ್ಷಾಂತರ ಜನರ ಸಾವಿಗೆ ಕಾರಣವಾಯಿತು.

ಇದನ್ನು ಕಂಡು ನೊಂದ ನೋಬಲ್, ತನಗೆ ಬಂದ ಹಣವನ್ನು ಪುದುವಟ್ಟಾಗಿಟ್ಟು, ಅದರಿಂದ ಬಂದ ಬಡ್ಡಿಯನ್ನು ನೋಬಲ್ ಪಾರಿತೋಷಕವಾಗಿ ಪ್ರತಿವರ್ಷ ಕೊಡುವಂತೆ ಮಾಡಿದ್ದು ನಮಗೆಲ್ಲಾ ತಿಳಿದಿರುವ ವಿಷಯವೇ ಆಗಿದೆ.

ನೋಬಲ್ ಜೀವನದ ಕೊನೆ ಕೊನೆಯಲ್ಲಿ, ಅವನಿಗೆ ಹೃದ್ರೋಗವುಂಟಾದಾಗ, ಅವನ ವೈದ್ಯರು, ಅವನೇ ಕಂಡುಹಿಡಿದ ನೈಟ್ರೋಗ್ಲಿಸರಿನ್‌ನನ್ನು ನುಂಗುವಂತೆ ಹೇಳಿದರು. ನೈಟ್ರೋಗ್ಲಿಸರಿನ್ ಹೃದಯದ ಉಗ್ರಶೂಲೆಯನ್ನು ಕಡಿಮೆ ಮಾಡುತ್ತಿತ್ತು. ಆಗ ನೋಬಲ್, ತಾನು ಎದುರಿಸುತ್ತಿರುವ ವಿಪರ್ಯಾಸವನ್ನು ನೋಡಿ "It sounds like an irony of fate that I should be ordered by my Nitroguyceriw internally" ಎಂದು ಉದ್ಗರಿಸಿದನಂತೆ ! ಈ ನೈಟ್ರೋಗ್ಲಿಸರಿನ್‌ನನ್ನು ಇಂದಿಗೂ ಸಹ ಹೃದಯಶೂಲೆಯ ನಿವಾರಣೆಯಲ್ಲಿ ಬಳಸುತ್ತಿದ್ದೇವೆ.

ನೈಟ್ರೋಗ್ಲಿಸರಿನ್ ಹೇಗೆ ಹೃದಯ ಶೂಲೆಯನ್ನು ನಿವಾರಿಸುತ್ತದೆ ಎಂಬ ವಿವರಣೆ ಅಂದು ತಿಳಿದಿರಲಿಲ್ಲ. ಸುಮಾರು ೧೦೦ ವರ್ಷಗಳ ನಂತರ ನೈಟ್ರೋಗ್ಲಿಸರಿನ್, ನೈಟ್ರಿಕ್ ಆಕ್ಸೈಡನ್ನು ಬಿಡುಗಡೆ ಮಾಡುವುದರ ಮೂಲಕ ಹೃದಯ ಶೂಲೆಯನ್ನು ಕಡಿಮೆ ಮಾಡುತ್ತದೆ ಎಂಬ ಸತ್ಯ ತಿಳಿದು ಬಂದಿದೆ.

ಈ ವಿವರವನ್ನು ನೋಬಲ್ ಪ್ರಶಸ್ತಿ ಪ್ರದಾನ ಸಮಿತಿಯು ಪ್ರಶಸ್ತಿವಾಚನ (ಸೈಟೇಶನ್) ಸಮಯದಲ್ಲಿ ನೀಡಿದೆ. ಜೊತೆಗೆ ಒಂದು ಅನಿಲವು ಸಂದೇಶವಾಹಕದಂತೆ ಕೆಲಸ ಮಾಡಬಲ್ಲದು ಎಂಬುದನ್ನು ಮೊದಲಬಾರಿಗೆ ನೈಟ್ರಿಕ್ ಆಕ್ಸೈಡ್ ತೋರಿಸಿಕೊಟ್ಟಿದೆ ಎಂದೂ ವಿವರಿಸಿದೆ. ಈ ಬಗ್ಗೆ ನಮ್ಮ 'ಜೀವನಾಡಿ' ಪತ್ರಿಕೆಯು ಕಳೆದ ವರ್ಷವೇ ಒಂದು ಲೇಖನವನ್ನು ಪ್ರಕಟಿಸಿತ್ತು. (ಜೀವನಾಡಿ ಮಾರ್ಚ್ ೧೯೯೭ ಪುಟ ೧೪-೧೫) ಆ ಲೇಖನ ಇಂದೂ ಪ್ರಸ್ತುತವಾಗಿರುವ ಕಾರಣ ಅದನ್ನು ಈ ಸಂಚಿಕೆಯಲ್ಲಿ ಮತ್ತೆ ಪುನರ್ ಮುದ್ರಿಸಿದ್ದೇವೆ. ಅದನ್ನು ಓದಿ.

**ಕಾರ್ಯಗಳು :**

ಸರ್ ಹಂಫ್ರಿಡೇವಿ ನೈಟ್ರಸ್ ಆಕ್ಸೈಡ್ ಮತ್ತು ನೈಟ್ರಿಕ್ ಆಕ್ಸೈಡ್‌ಗಳನ್ನು ಕಂಡು ಹಿಡಿದವನು. ನೈಟ್ರಸ್ ಆಕ್ಸೈಡ್ ($N_2o$) ನಗೆ ಅನಿಲವೆಂದು (ಲಾಫಿಂಗ್ ಗ್ಯಾಸ್) ಪ್ರಸಿದ್ಧಿಯಾಗಿರುವುದು ನಿಮಗೆ ನೆನಪಿರಬಹುದು. ಸೀಮಿತ ಪ್ರಮಾಣದಲ್ಲಿ ಇದು ನಗೆಯನ್ನು ತರಿಸಬಲ್ಲುದು.

ನೋವನ್ನು ಮರೆಯಾಗಿಸಬಲ್ಲುದು. ಮೊದಲ ಬಾರಿಗೆ ಈ ಅನಿಲವನ್ನು ಸೇವಿಸಿದ ಹಂಫ್ರಿಡೇವಿ ನಗೆಯನ್ನು ತಡೆಯಲಾಗದೆ ಕುರ್ಚಿ ಮೇಜುಗಳನ್ನು ಹತ್ತಿ ಕುಣಿಯಲಾರಂಭಿಸಿದನಂತೆ! ಹಾಗೆಯೇ ಅಥವಾ ಅದಕ್ಕಿಂತಲೂ ಹೆಚ್ಚಿನ ಮೋಜನ್ನು ನೀಡಬಹುದೇನೋ ಎಂದು ನೈಟ್ರಿಕ್ ಆಕ್ಸೈಡನ್ನು ಸೇವಿಸಿದಾಗ ಹಂಫ್ರಿಡೇವಿಯ ಜೀವವೇ ಹೋಗುವುದರಲ್ಲಿತ್ತು. ಏಕೆಂದರೆ ನೈಟ್ರಿಕ್ ಆಕ್ಸೈಡ್ ವಿಷಕಾರಿಯಾಗಿತ್ತು!

ನೋಬಲ್ಲನ ಹೃದಯಶೂಲೆಯನ್ನು ತಗ್ಗಿಸಿದ ನೈಟ್ರಿಕ್ ಆಕ್ಸೈಡ್ ಹಂಫ್ರಿಡೇವಿಯ ಜೀವವನ್ನು ಏಕೆ ತೆಗೆಯಲಿತ್ತು ?- ಬನ್ನಿ ನೈಟ್ರಿಕ್ ಆಕ್ಸೈಡಿನ ಅದ್ಭುತ ಲೋಕವನ್ನು ಒಮ್ಮೆ ನೋಡೋಣ.

★ **ಮಾಂಸ :**

ಮಾಂಸವನ್ನು ದೀರ್ಘಕಾಲ ಕಾದಿಡಲು, ಹಾಗೂ ಕೆಂಪಗೆ ತಾಜಾ ಹಾಗೆ ಕಾಣುವಂತೆ ಮಾಡಲು ನೈಟ್ರೇಟ್ ಮತ್ತು ನೈಟ್ರೈಟ್‌ಗಳನ್ನು ದೀರ್ಘ ಕಾಲದಿಂದಲೂ ಬಳಸುತ್ತಾ ಬಂದಿದ್ದೇವೆ. ಈ ರಾಸಾಯನಿಕಗಳು ಮಾಂಸಕ್ಕೆ ಈ ಗುಣ ಗಳನ್ನು ಹೇಗೆ ತಂದುಕೊಡುತ್ತವೆ ಎಂಬುದು ಈಗ ತಿಳಿದು ಬಂದಿದೆ. ಇದಕ್ಕೆ ಕಾರಣ ಈ ರಾಸಾಯನಿಕಗಳಿಂದ ಉತ್ಪಾದನೆಯಾಗುವ ನೈಟ್ರಿಕ್ ಆಕ್ಸೈಡ್. ನೈಟ್ರಿಕ್ ''ಬ್ಯಾಟುಲೀ ವಿಷಮತೆ'' (ಬಾಟ್ಯುಲಿಸಂ)ಗೆ ಕಾರಣವಾಗುವ ಬ್ಯಾಕ್ಟೀರಿಯಗಳ ವರ್ಧನೆಯನ್ನು ತಡೆಗಟ್ಟುತ್ತದೆ. NO ಜೈವಿಕ ಕಬ್ಬಿಣದೊಡನೆ ಬೆರೆತು ಮಾಂಸಕ್ಕೆ ಅಚ್ಚ ಕೆಂಪುಬಣ್ಣವನ್ನು ತಂದುಕೊಡುತ್ತದೆ. ಸ್ನಾಯು ಎಳೆಗಳಲ್ಲಿರುವ ಮಯೋಗ್ಲಾಬಿನ್ನಿನ 'ಹೀಂ' (ಕಬ್ಬಿಣ) ನೊಡನೆ NO ಬೆರೆಯುವುದೇ ಇದಕ್ಕೆ ಕಾರಣ. ಇದು ಸ್ನಾಯುವಿನಲ್ಲಿರುವ ಆಮ್ಲಜನಕಧಾರಕ ವಸ್ತು.

★ **ಹೃದಯ :** ಹೃದಯ ಶೂಲೆಯ ರೋಗಿಗಳು ತಮ್ಮ ಬಳಿ ಸದಾ ಒಂದು ಗುಳಿಗೆಯ ಡಬ್ಬಿಯನ್ನು ಇಟ್ಟುಕೊಂಡಿರುತ್ತಾರೆ. ಅದು ಗ್ಲಿಸರಿಲ್ ಟ್ರೈನೈಟ್ರೇಟ್ ಆಗಿರಬಹುದು. ಐಸೋಸಾರ್ಬೈಡ್ ಡೈನೈಟ್ರೇಟ್ ಆಗಿರಬಹುದು. ಇಲ್ಲವೆ ಐಸೋಸಾರ್ಬೈಡ್-೫-ಮಾನೋ ನೈಟ್ರೇಟ್ ಆಗಿರಬಹುದು. ಇದನ್ನು ಕಚ್ಚಿ ನಾಲಿಗೆಯಡಿ ಇಟ್ಟುಕೊಳ್ಳುತ್ತಾರೆ. ಸ್ವಲ್ಪ ಹೊತ್ತಿನಲ್ಲಿ ಉಗ್ರ ಶೂಲೆಯು ನಾಟಕೀಯ ತೆರದಲ್ಲಿ ಕಡಿಮೆಯಾಗಿಬಿಡುತ್ತದೆ. ಈ ನೋವು ಕಡಿಮೆಯಾಗಲು ಕಾರಣ ನೈಟ್ರಿಕ್ ಆಕ್ಸೈಡ್. ಇದು ಬಿಗಿದಿರುವ ಮಕುಟಧಮನಿ (ಕರೋನರಿ ವೆಸಲ್ಸ್) ಗಳನ್ನು ಸಡಿಲಗೊಳಿಸುತ್ತದೆ. ರಕ್ತ ಹರಿಯಲು ಅವಕಾಶ ಮಾಡಿಕೊಡುತ್ತದೆ.

ನೈಟ್ರಿಕ್ ಆಕ್ಸೈಡ್ ನೀರಿನಲ್ಲಿ ಕರಗಬಲ್ಲುದು. ಕೋಶಪೊರೆಗಳ ಮೂಲಕ ಸುಲಭವಾಗಿ ಹಾಯಬಲ್ಲುದು. ಅವಶ್ಯ ಬದಲಾವಣೆಗಳನ್ನು ತರಬಲ್ಲುದು.

GTP ಸೈಕ್ಲಿಕ್ ವಾಗಿ → GMP
ಗ್ಯಾನೈಲೇಟ್
ಸೈಕ್ಲೇಸ್ ಕಿಣ್ವ
↑
NO

೧೯೭೭ರಲ್ಲಿ ಮುರದ್ ಮತ್ತು ಸಹಚರರು, GTP ಎಂಬುದು ಸೈಕ್ಲಿಕ್ GMP ಆಗಿ ಪರಿವರ್ತಿತವಾಗುವುದರಲ್ಲಿ NO ನೆರವಾಗುತ್ತದೆ ಎಂಬುದನ್ನು ಗಮನಿಸಿದರು.

ನಂತರ ಇಗ್ನಾರೋ ಹಾಗೂ ಸಂಗಡಿಗರು ನೈಟ್ರಿಕ್ ಆಕ್ಸೈಡ್ ಗ್ಯಾನೈಲೇಟ್ ಸೈಕ್ಲೇಸ್ ಕಿಣ್ವವನ್ನು ಪ್ರಚೋದಿಸುತ್ತದೆ ಎಂಬುದನ್ನು ತೋರಿಸಿಕೊಟ್ಟರು. ಇದು ಧಮನಿಯಲ್ಲಿರುತ್ತದೆ. ಆಗ ಮಕುಟ ಧಮನಿಯ ವ್ಯಾಸ ಹೆಚ್ಚುತ್ತದೆ.

೧೯೮೦ರಲ್ಲಿ ಫರ್ಶ್‌ಗಾಟ್ ಮತ್ತು ಸಹೋದ್ಯೋಗಿಗಳು ನೈಟ್ರಿಕ್ ಆಕ್ಸೈಡಿನ ಪೂರ್ಣ ಚಿತ್ರಣವನ್ನು ನೀಡಿದರು. ಮಕುಟ ಧಮನಿಯ ನಯ ಸ್ನಾಯು ಸಡಿಲವಾಗಲು EDRF (ಎಂಡೋಥೀಲಿಯಂ ಡಿರೈವಡ್ ರಿಲಾಕ್ಸಿಂಗ್ ಫ್ಯಾಕ್ಟರ್) ಎಂಬುದು ಅವಶ್ಯ ಎಂದರು. ಈ EDRF, ನೈಟ್ರಿಕ್ ಆಕ್ಸೈಡ್ ಎಂಬುದನ್ನು ಋಜುವಾತು ಮಾಡಿದರು. ಧಮನಿ ಒಳಪೊರೆಯ ಮೇಲ್ಭಾಗದಲ್ಲಿರುವ ಜೀವಕೋಶಗಳು NO ಉತ್ಪಾದಿಸುತ್ತವೆ. ಇದು ನಂತರ ಧಮನಿಯ ಒಳಗಿರುವ ನಯ ಸ್ನಾಯುವಿನತ್ತ ಚಲಿಸಿ, ಅದನ್ನು ಸಡಿಲಗೊಳಿಸುತ್ತದೆ. ಆಗ ಬಿಗಿದ ಧಮನಿ ಸಡಿಲವಾಗಿ ವಿಸ್ತಾರಗೊಳ್ಳುತ್ತದೆ. ರಕ್ತ ಸರಾಗವಾಗಿ ಹರಿದು ಹೃದಯ ಶೂಲೆ ತಗ್ಗುತ್ತದೆ.

ಈ ಕ್ರಿಯೆಯ ಕಾರಣದಿಂದಲೇ, ಈ ಮೊದಲು ವಿವರಿಸಿದ ವಿವಿಧ ನೈಟ್ರೇಟುಗಳು ಹೃದಯಶೂಲೆಯನ್ನು ಕಡಿಮೆಮಾಡಲು ಶಕ್ತವಾಗಿವೆ. ಈ ನೈಟ್ರೇಟುಗಳನ್ನು ನಾಲಿಗೆಯಡಿ ಇಟ್ಟುಕೊಂಡಾಗ, ಅವು ನಾಲಿಗೆಯಡಿ ಇರುವ ದಟ್ಟ ಲೋಮನಾಳಗಳ ಮೂಲಕ, ರಕ್ತ ಪ್ರವಾಹದಲ್ಲಿ ಬೆರೆಯುತ್ತವೆ. NOನ್ನು ಉತ್ಪಾದಿಸುತ್ತವೆ. ಇದು ಬಿಗಿದಿರುವ ಮಕುಟ ಧಮನಿಯನ್ನು ಸಡಿಲಗೊಳಿಸುವುದರ ಜೊತೆಗೆ, ಅಧಿಕ ರಕ್ತದೊತ್ತಡವನ್ನೂ ಕಡಿಮೆ ಮಾಡುತ್ತದೆ. NO ಇನ್ನೂ ಒಂದು ಕೆಲಸವನ್ನು ಮಾಡುತ್ತದೆ. ಇದು ಕಿರು ಬಿಲ್ಲೆ (ಪ್ಲೇಟ್‌ಲೆಟ್ಸ್) ಗಳು ಉಂಡೆಗಟ್ಟುವುದನ್ನು ಸೈಕ್ಲಿಕ್ ಮೂಲಕ ತಡೆಗಟ್ಟುತ್ತದೆ. ಆಗ ರಕ್ತ ಸರಾಗವಾಗಿ ಹರಿಯುತ್ತದೆ. ಹೃದಯಾಘಾತ, ಲಕ್ವ ಮುಂತಾದವು ಘಟಿಸದಂತೆ ರಕ್ಷಿಸುತ್ತದೆ.

**ವಯಾಗ್ರ :** ಸಂಭೋಗ ಅಸಾಮರ್ಥ್ಯ, ಲೈಂಗಿಕ ದೌರ್ಬಲ್ಯ ಎಲ್ಲ ಪುರುಷರ ನಿದ್ರೆಯನ್ನು ಕೆಡಿಸುವ ಕೆಟ್ಟ ಕನಸು. ಅನಾದಿ ಕಾಲದಿಂದಲೂ ಈ ಸಮಸ್ಯೆಯಿಂದ ನರಳುತ್ತಿದ್ದ ಮನುಷ್ಯನಿಗೆ ಮೊದಲಬಾರಿಗೆ ನೆಮ್ಮದಿಯನ್ನು ತಂದಿತು, ವಜ್ರಾಕೃತಿಯ ನೀಲಿಗುಳಿಗೆ ವಯಾಗ್ರ!

ಈ ಗುಳಿಗೆಯ ಸೃಜನೆಗೆ ಮೂಲಪ್ರೇರಣೆ NO ! ಸಂಭೋಗಕ್ಕೆ ನಿಮಿರಿನಿಂತ ಶಿಶ್ನ ಅಗತ್ಯ. ನಿಮಿರುವಿಕೆಗೆ ಕಾರಣ ಶಿಶ್ನದೊಳಗೆ ಹರಿಯುವ ಅಧಿಕ ರಕ್ತ ! ಅಧಿಕ ರಕ್ತ ಹರಿಯಬೇಕಾದರೆ, ಶಿಶ್ನದೊಳಗೆ ಇರುವ ರಕ್ತನಾಳಗಳು ಸಡಿಲಗೊಳ್ಳಬೇಕು. ವಿಸ್ತಾರವಾಗಬೇಕು, ಹೆಚ್ಚು ರಕ್ತವನ್ನು ತಡೆದು ಹಿಡಿದಿಟ್ಟುಕೊಳ್ಳಬೇಕು ! ಕೆಲವರಲ್ಲಿ ಈ ಸಾಮರ್ಥ್ಯ ಇರುವುದಿಲ್ಲ!

ಶಿಶ್ನದಲ್ಲಿರುವ ನಿಮಿರು ಊತಕ (ಎರೆಕ್ಟೈಲ್ ಟಿಶ್ಯೂ) ಗಳು ಸಡಿಲವಾಗಿ ರಕ್ತದುಂಬಲು ಸೈಕ್ಲಿಕ್ GMP ಅವಶ್ಯ. ಸೈಕ್ಲಿಕ್ GMP ಉತ್ಪಾದನೆಯಲ್ಲಿ NO ಹೇಗೆ ಪಾತ್ರವಹಿಸುತ್ತದೆ ಎಂಬುದನ್ನು ಈಗಾಗಲೇ ವಿವರಿಸಿದೆ. ವಯಾಗ್ರದಲ್ಲಿರುವ ಸಿಲ್ಡೆನಾಫಿಲ್, ಸೈಕ್ಲಿಕ್ GMP ಯನ್ನು ನಾಶಗೊಳಿಸುವ ಫಾಸ್ಫೊಡೈ ಎಸ್ಟರೇಸ್ ಟೈಪ್ ೫ನ್ನು ತಡೆಗಟ್ಟುತ್ತದೆ. ಹಾಗಾಗಿ ಶಿಶ್ನ ದೀರ್ಘಕಾಲ ನಿಮಿರಿರುತ್ತದೆ. (ವಿವರಗಳಿಗೆ ಓದಿ: ಜೀವನಾಡಿ, ಜೂನ್ ೧೯೯೮ ಪುಟ ೭)

NO ಡಿನ ಪಾತ್ರವನ್ನು ಅಧ್ಯಯನ ಮಾಡಿದ ಮುರಿಯನ್ ಕ್ಯಾಪ್ರನೋ ವಯಾಗ್ರವನ್ನು ಸಿದ್ಧಪಡಿಸಿದರು. ಫೈಜರ್ ಸಂಸ್ಥೆ ಈ ಔಷಧ ಮಾರಾಟದಿಂದ ಅಪಾರ ಲಾಭಗಳಿಸಿದೆ.

**ಗಂತಿ :** ಮಾಂಸ ರಕ್ಷಣೆಯಲ್ಲಿ ನೈಟ್ರೇಟುಗಳನ್ನು ಬಳಸುವ ಬಗೆಗೆ ಈಗಾಗಲೇ ಪ್ರಸ್ತಾಪಿಸಲಾಗಿದೆ. ಇಂತಹ ಮಾಂಸವನ್ನು ಉಪಯೋಗಿಸಿ ಅಡುಗೆ ಮಾಡುವಾಗ, ನೈಟ್ರೋ ಸಮೀನುಗಳೆಂಬ ರಾಸಾಯನಿಕಗಳು ಉತ್ಪಾದನೆಯಾಗುತ್ತಿದ್ದವು. ಇವು ಕ್ಯಾನ್ಸರ್‌ಕಾರಕಗಳು. ಅಂದರೆ ಕ್ಯಾನ್ಸರ್‌ಗಂತಿಯನ್ನು ಬೆಳೆಸುವ ವಸ್ತುಗಳು.

ವಿಜ್ಞಾನಿಗಳು ನೈಟ್ರೋಸಮೀನುಗಳ ಉಪಾಪಚಯ (ಮೆಟಬಾಲಿಸಂ) ವನ್ನು ಅಧ್ಯಯನ ಮಾಡಿದರು. ದೇಹದಲ್ಲಿ ಉತ್ಪಾದನೆಯಾಗಿ, ಬಿಡುಗಡೆ ಹೊಂದುವ ನೈಟ್ರೋಸಮೀನುಗಳ

ಪ್ರಮಾಣ, ಸೇವಿಸಿದ ಪ್ರಮಾಣಕ್ಕಿಂತ ಯಾವಾಗಲೂ ಹೆಚ್ಚಿರುತ್ತಿತ್ತು. ಈ ಹೆಚ್ಚುವರಿ ನೈಟ್ರೇಟುಗಳು ದೇಹದಲ್ಲಿ ಉತ್ಪಾದನೆಯಾಗುತ್ತಿತ್ತು. ಅದರಲ್ಲೂ ನಮ್ಮ ದೇಹದಲ್ಲಿ ಸೋಂಕು ತಲೆದೋರಿದಾಗ ಇದು ಹೆಚ್ಚಾಗುತ್ತಿತ್ತು. ಸೋಂಕು ಹೆಚ್ಚಾದಾಗ ಅದನ್ನು ನಿಯಂತ್ರಿಸಲು ಬರುವ ಬಿಳಿಯ ರಕ್ತಕಣಗಳಲ್ಲಿ ಬೃಹತ್ ಭಕ್ಷಕ (ಮ್ಯಾಕ್ರೋಫೇಜಸ್)ಗಳು ಬಹಳ ಮುಖ್ಯವಾದವು. ಈ ಬೃಹತ್ ಭಕ್ಷಕಗಳ ಚಟುವಟಿಕೆಗೆ ಕಾರಣ ನೈಟ್ರೇಟುಗಳಿಂದ ಉತ್ಪಾದನೆಯಾಗುವ ನೈಟ್ರಿಕ್ ಆಕ್ಸೈಡ್ !

ನೈಟ್ರಿಕ್ ಆಕ್ಸೈಡ್, ಕ್ಯಾನ್ಸರ್ ಗಂತಿ ಬೆಳೆಯದಂತೆ ರಕ್ಷಿಸಬಲ್ಲದು. ಹಾಗಾಗಿ ವಿಜ್ಞಾನಿಗಳು ಕ್ಯಾನ್ಸರ್ ಚಿಕಿತ್ಸೆಯಲ್ಲಿ ನೈಟ್ರಿಕ್ ಆಕ್ಸೈಡನ್ನು ಹೇಗೆ ಬಳಸಿಕೊಳ್ಳಬಹುದು ಎಂಬುದರ ಬಗ್ಗೆ ಯೋಚಿಸುತ್ತಿದ್ದಾರೆ.

**ಮಿದುಳು :**

ಎಂಬತ್ತರ ದಶಕದ ಎರಡನೆಯ ಭಾಗದಲ್ಲಿ ನಡೆದ ಸಂಶೋಧನೆಗಳು ಮಿದುಳಿನಲ್ಲಿ ನೈಟ್ರಿಕ್ ಆಕ್ಸೈಡ್ ನರ ಪ್ರೇಶಕ (ನ್ಯೂರೋ ಟ್ರಾನ್ಸ್‌ಮೀಟರ್)ವಾಗಿ ಕೆಲಸ ಮಾಡುತ್ತದೆ ಎಂಬುದನ್ನು ಶ್ರುತಪಡಿಸಿತು.

ಒಂದು ನರಕೋಶದಿಂದ ಮತ್ತೊಂದು ನರಕೋಶಕ್ಕೆ ನರ ಆವೇಗಗಳು ಚಲಿಸುತ್ತವೆ. ಎರಡು ನರ ತಂತುಗಳು ಸಂಧಿಸುವ ಸ್ಥಳವನ್ನು 'ನರಸಂಧಿ' (ಸಿನಾಪ್ಸ್) ಎಂದು ಕರೆಯುತ್ತೇವೆ. ನರಸಂದೇಶಗಳನ್ನು ಒಂದು ನರದಿಂದ ಮತ್ತೊಂದು ನರಕ್ಕೆ ಸಾಗಿಸುವ ರಾಸಾಯನಿಕಗಳನ್ನು 'ನರಪ್ರೇಷಕ'ಗಳೆಂದು ಕರೆಯುತ್ತಾರೆ. ಇವು ನರಸಂಧಿಯಲ್ಲಿರುತ್ತವೆ. ನಮಗೆ ಸುಮಾರು ೨೦ ನರಪ್ರೇಷಕಗಳು ತಿಳಿದಿವೆ. ಇವುಗಳಲ್ಲಿ ಗ್ಲುಟಾಮೇಟ್ ಒಂದು. ನರಸಂಧಿಯಲ್ಲಿರುವ NMDA(N-ಮೀಥೈಲ್ -D - ಆಸ್ಪರ್ಟೇಟ್) ಗ್ರಾಹಕಕ್ಕೆ ವಿಶಿಷ್ಟವಾಗಿ ಬಂಧಿತವಾಗುವ ಗ್ಲುಟಾಮೇಟ್ ಉತ್ತೇಜಕ(ಎಕ್ಸೈಟೇಟರಿ) ಅಣುವಾಗಿರುತ್ತದೆ.

ನರಸಂಧಿಯಲ್ಲಿ ಗ್ಲುಟಾಮೇಟ್ ಬಿಡುಗಡೆಯಾಗಲು ಸೈಕ್ಲಿಕ್ ಪ್ರಮಾಣ ಹೆಚ್ಚಬೇಕು. ಈ ಹೆಚ್ಚಳವು ಕಬ್ಬಿಣವನ್ನು ಹೊಂದಿರುವ ಕಿಣ್ವ ಗ್ವಾನೈಲೇಟ್ ಸೈಕ್ಲೇಸ್ ಉತ್ಪಾದಿಸುವ ನೈಟ್ರಿಕ್ ಆಕ್ಸೈಡ್‌ನಿಂದ ನಡೆಯುತ್ತದೆ. ಈ ಪ್ರಕ್ರಿಯೆಯು ಕಲಿಯುವಿಕೆ ಮತ್ತು ನೆನಪಿನ ಶಕ್ತಿ ಉಳಿಯುವಲ್ಲಿ ಪ್ರಧಾನಪಾತ್ರ ವಹಿಸುತ್ತದೆ.



ರಾಬರ್ಟ್ ಫರ್ಚ್‌ಗಾಟ್



ಲೂಯಿಸ್ ಇಗ್ನಾರೊ



ಫೆರಿಡ್ ಮುರಾಡ್

ನೈಟ್ರಿಕ್ ಆಕ್ಸೈಡ್ ಮಿದುಳಿನ ಕೆಲವು ಕೋಶಗಳಲ್ಲಿ ಮಾತ್ರ ಉತ್ಪಾದನೆಯಾಗುತ್ತದೆ. ಎಲ್ಲ ನರಕೋಶಗಳಲ್ಲಿ ಈ ಬಗ್ಗೆ ವಿನ್ಸೆಂಟ್ ಮತ್ತು ಸಿಂಡಲ್ ವಿಸ್ತೃತ ಅಧ್ಯಯನ ನಡೆಸಿದ್ದಾರೆ. ಗ್ಲಾಟಾಮೇಟ್ ಭರಿತ ಆಹಾರವನ್ನು ಹೆಚ್ಚು ಸೇವಿಸಿದಾಗ (ಚೀನೀ ಆಹಾರ ಪದಾರ್ಥಗಳಲ್ಲಿ ಮಾನೋಸೋಡಿಯಂ ಗ್ಲುಟಾಮೇಟನ್ನು ಬಳಸುತ್ತಾರೆ. ಇದು ಅಜಿ-ನೋ-ಮೋಟೋ ಎಂಬ ಹೆಸರಿನಲ್ಲಿ ದೊರೆಯುತ್ತದೆ. ಆಹಾರ ಪದಾರ್ಥಗಳಿಗೆ ವಿಶೇಷ ಪರಿಮಳ ನೀಡಲು ಇದನ್ನು ಬಳಸುತ್ತಾರೆ) ಅದು ನರಕೋಶಗಳ ಮೇಲೆ ದುಷ್ಪರಿಣಾಮವನ್ನು ಬೀರಬಲ್ಲುದು. ಹೆಚ್ಚುವರಿ ನೈಟ್ರಿಕ್ ಆಕ್ಸೈಡ್ ಅಕ್ಕ - ಪಕ್ಕದ ನರಕೋಶಗಳಿಗೆ ರಕ್ತಕೊರೆಯನ್ನುಂಟು ಮಾಡಬಲ್ಲುದು. ಇಂತಹ ಪ್ರಕ್ರಿಯೆ ಪಾರ್ಕಿನ್‌ಸನ್ ರೋಗ, ಹಂಟಿಂಗ್‌ಟನ್ ಕೋರಿಯ, ಆಲ್ಜಿಮರ್ ರೋಗ ಮುಂತಾದ ನರಬೇನೆಗಳಲ್ಲಿ ಸಂಭವಿಸುವ ಸಾಧ್ಯತೆಯಿರುತ್ತದೆ. ನೈಟ್ರಿಕ್ ಆಕ್ಸೈಡ್ ಉತ್ಪಾದನೆಯನ್ನು ನಿಯಂತ್ರಿಸುವ N-ಮೀಥೈಲ್- ಆರ್ಜನಿನ್‌ನಂತಹವನ್ನು ಉಪಯೋಗಿಸಿ ದುಷ್ಪರಿಣಾಮವನ್ನು ತಡೆಗಟ್ಟಬಹುದು.

ವೈವಿಧ್ಯಮಯ :

GTP ಸೈಕ್ಲಿಕ್ → GMP
ಗ್ವಾನೈಲೇಟ್
ಸೈಕ್ಲೇಸ್
↑
ನೈಟ್ರಿಕ್ ಆಕ್ಸೈಡ್

ಈ ಕ್ರಿಯೆಯು ನಮ್ಮ ದೇಹದ ಅನೇಕ ಜೈವಿಕ ಕ್ರಿಯೆಗಳ ಮೇಲೆ ಪ್ರಭಾವ ಬೀರುತ್ತದೆ. ವಾತಾವರಣದಲ್ಲಿ ವಾಯು ಮಾಲಿನ್ಯವನ್ನು ಉಂಟು ಮಾಡುವ ಅನಿಲಗಳಲ್ಲಿ ನೈಟ್ರಿಕ್ ಆಕ್ಸೈಡ್ ಮುಖ್ಯವಾದದ್ದು. ವಾತಾವರಣದಲ್ಲಿ NO ಪ್ರಮಾಣ ಹೆಚ್ಚಿದಾಗ, ಅದು ಮಯೋಗ್ಲಾಬಿನ್ ಜೊತೆ ಬಂಧಿತವಾಗಿ ಅನೇಕ ಉಸಿರಾಟದ ರೋಗಗಳಿಗೆ ಕಾರಣವಾಗುತ್ತದೆ.

DNA ನಿರ್ಮಾಣಕ್ಕೆ ಅಗತ್ಯವಾಗಿ ಬೇಕಾಗುವ, ಡಿಆಕ್ಸಿರೈಬೋಸ್ ಉತ್ಪಾದನೆಯಲ್ಲಿ ಪ್ರಮುಖ ಪಾತ್ರವಹಿಸುವ ರೈಬೋನ್ಯೂಕ್ಲಿಯೋಟೈಡ್ ರಿಡಕ್ಟೇಸಿನ್ ಮೇಲೆ ದುಷ್ಪರಿಣಾಮ ಬೀರಬಲ್ಲುದು. ಇದರಿಂದ ಆರೋಗ್ಯಕರ ಜೀವಕೋಶಗಳ ಉತ್ಪಾದನೆ ಕಷ್ಟವಾಗಿಬಿಡುತ್ತದೆ. ಇದು ತೀರಾ ಗಂಭೀರ ಸಮಸ್ಯೆಯಾಗಬಲ್ಲುದು.

ನಮ್ಮ ದೇಹದಲ್ಲಿ ಕಬ್ಬಿಣಾಂಶವು 'ಫೆರೆಟಿನ್' ರೂಪದಲ್ಲಿರುತ್ತದೆ. ನೈಟ್ರಿಕ್ ಈ ಕಬ್ಬಿಣಾಗಾರವನ್ನು ಧ್ವಂಸಮಾಡಿ ಕಬ್ಬಿಣವನ್ನು ಮುಕ್ತ ರೂಪದಲ್ಲಿ ಬಿಡುಗಡೆ ಮಾಡುತ್ತದೆ. ಇದು 'ಲಿಪಿಡ್ ಪೆರಾಕ್ಸಿಡೇಶನ್' ಎಂಬ ಕ್ರಿಯೆಗೆ ಕಾರಣವಾಗುತ್ತದೆ. ಇದರ ಫಲವಾಗಿ ಜೀವಕೋಶ ಪೊರೆಯು ಹಾನಿಗೀಡಾಗುತ್ತದೆ. ಜೀವಕೋಶಗಳು ಅನಾರೋಗ್ಯಕ್ಕೆ ತುತ್ತಾಗುತ್ತವೆ.

ದೇಹದಲ್ಲಿ ಶಕ್ತಿಯ ನಾಣ್ಯವಾಗಿ ಉಪಯೋಗವಾಗುವ ATP ಅಣು ಗ್ಲೈಕಾಲಿಸಿಸ್ ಚಕ್ರದಲ್ಲಿ ಉತ್ಪಾದನೆಯಾಗುತ್ತದೆ. ATP ಉತ್ಪಾದನೆಯಲ್ಲಿ ಪ್ರಮುಖ ಕಿಣ್ವವಾದ ಗ್ಲಿಸರಾಲ್ಡಿಹೈಡ್ - ೩ - ಫಾಸ್ಫೇಟ್ ದಿ ಹೈಡ್ರಾಜಿನೇಸನ್ನು ನೈಟ್ರಿಕ್ ಆಕ್ಸೈಡ್ ಅಚೇತನಗೊಳಿಸಬಲ್ಲುದು.

ಹೀಗೆ ನೈಟ್ರಿಕ್ ಆಕ್ಸೈಡ್ ಅನೇಕ ಜೈವಿಕ ಕ್ರಿಯೆಗಳನ್ನು ಏರುಪೇರು ಮಾಡಿ ನಮ್ಮ ಆರೋಗ್ಯವನ್ನು ಕೆಡಿಸಬಹುದು.

**ವಿಜ್ಞಾನಿಗಳು :**

ರಾಬರ್ಟ್ ಫರ್ಶ್‌ಗಾಟ್ ೮೨ ವರ್ಷಗಳ ವಿಜ್ಞಾನಿ. ಬ್ರೂಕ್‌ಲಿನ್‌ನಲ್ಲಿರುವ ಸ್ಟೇಟ್ ಯೂನಿವರ್ಸಿಟಿ ಆಫ್ ನ್ಯೂಯಾರ್ಕ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ. ಲೂಯಿಸ್ ಇಗ್ನಾರೋ ೫೭ ವರ್ಷಗಳ ವಯಸ್ಸಿನವರು. ಇವರು ಯೂನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯದಲ್ಲಿ ಪ್ರಾಚಾರ್ಯರಾಗಿದ್ದಾರೆ. ಫೆರಿದ್ ಮುರಾದ್ ೬೨ ವರ್ಷಗಳ ವಯಸ್ಸಿನ ಸಂಶೋಧಕ. ಹೌಸ್ಟನ್ನಿನ ಯೂನಿವರ್ಸಿಟಿ ಆಫ್ ಟೆಕ್ಸಾಸ್ ಮೆಡಿಕಲ್ ಸ್ಕೂಲ್‌ನಲ್ಲಿದ್ದಾರೆ.

ಒಂದು ಅಣು ಎಷ್ಟೆಲ್ಲಾ ಕೆಲಸಗಳನ್ನು ಮಾಡುತ್ತಿದೆ! ನಿಜಕ್ಕೂ ನಮ್ಮ ದೇಹದಲ್ಲಿ ಇಂತಹ ಅದೆಷ್ಟು ಅಣುಗಳು ಇವೆಯೋ ? ●

# ಕಿಡ್ನಿ ಕಲ್ಲುಗಳಿಗೆ ಬ್ಯಾಕ್ಟೀರಿಯ ಕಾರಣವೆ ?

● ಅಂಶು ಮಾಲಿ

**ಮಣ್ಣನ್ನು ಅಗೆಯುತ್ತ ಹೋದರೆ ಚಿನ್ನ ಕೈಗೆಟುಕಬಹುದು. ಮೇಲುನೋಟಕ್ಕೆ ಮೃದುವಾಗಿ ಕಾಣುವಂತಹುದು ಒಳಗೆ ವಜ್ರಕ್ಕಿಂತ ಕಠೋರವಾಗಿರಬಹುದು. ಜೀವದೊಳಗೆ ಕಲ್ಲು ಸೇರುವುದು ಸಾಮಾನ್ಯ; ಕಲ್ಲೊಳಗೂ ಜೀವಿಗಳಿರುತ್ತವೆನ್ನುವುದು ಇದೀಗ ಬೆಳಕಿಗೆ ಬಂದಿದೆ.**

ಮೂತ್ರಪಿಂಡದಲ್ಲಿ ಹಾಗೂ ಪಿತ್ತಕೋಶದಲ್ಲಿ ಕಲ್ಲುಗಳು ಬೆಳೆಯುವ ವಿಷಯ ಜನಸಾಮಾನ್ಯರಿಗೆ ಪರಿಚಿತವಾಗಿರುವಂತಹದ್ದೆ. ಈ ಕಲ್ಲುಗಳು ಯಾಕೆ ಬೆಳೆಯುತ್ತವೆ ಎಂಬುದಕ್ಕೆ ನಿಖರವಾದ ಕಾರಣ ನಮಗೆ ಗೊತ್ತಿಲ್ಲ. ಕಲ್ಲುಗಳ ಬೆಳವಣಿಗೆಯನ್ನು ಪ್ರಚೋದಿಸುವ ಹಲವು ಅಂಶಗಳ ಪರಿಚಯ ನಮಗಿದೆ. ನಿಜ, ಆದರೂ ಮೂಲ ಕಾರಣ ಇಂತಹುದೇ ಎಂಬ ಅಂಶ ಇದುವರೆಗೂ ನಿಗೂಢವಾಗಿದೆ.

ಈಗ ಈ ದಿಶೆಯಲ್ಲಿ ಹೆಚ್ಚಿನ ಬೆಳಕನ್ನು ಚೆಲ್ಲಬಹುದಾದಂತಹ ಲೇಖನ ಇತ್ತೀಚಿನ ''ಪ್ರೊಸೀಡಿಂಗ್ಸ್ ಆಫ್ ದಿ ನ್ಯಾಶನಲ್ ಅಕಾಡೆಮಿ ಆಫ್ ಸೈನ್ಸಸ್''ನಲ್ಲಿ ಪ್ರಕಟವಾಗಿದೆ.

ಫಿನ್‌ಲ್ಯಾಂಡ್‌ನಲ್ಲಿರುವ ಕುಪಿಯೋ ವಿಶ್ವವಿದ್ಯಾಲಯದ ಇ-ಒಲಾವಿ ಕಜಾಂಡರ್ ಮತ್ತು ನೇವ ಸಿಫ್ಸ್ಟಿಯೋಗ್ಲು ಕೆಲವು ಹೊಸ ಬ್ಯಾಕ್ಟೀರಿಯಗಳನ್ನು ಕಂಡು ಹಿಡಿದಿದ್ದಾರೆ. ಇವು ಅತ್ಯಂತ ಚಿಕ್ಕ ಬ್ಯಾಕ್ಟೀರಿಯಗಳು. ಹಾಗಾಗಿ ಇವನ್ನು ''ನಾನೋ ಬ್ಯಾಕ್ಟೀರಿಯ''ಗಳೆಂದು ಕರೆಯುತ್ತಾರೆ. ಇವು ನಮ್ಮ ದೇಹದ ಮೂಳೆಯಂತೆ, ಹಲ್ಲಿನ ಎನಾಮೆಲ್‌ನಂತೆ, ತಮ್ಮ ದೇಹದ ಸುತ್ತ ಕ್ಯಾಲ್ಸಿಯಂ ಫಾಸ್ಪೇಟಿನ ಕೋಟೆಯನ್ನು ಕಟ್ಟಿಕೊಳ್ಳುತ್ತವೆಯಂತೆ ! ಹಾಗಾಗಿ ಈ ಬ್ಯಾಕ್ಟೀರಿಯಗಳೇ ಕಲ್ಲುಗಳ ಬೆಳವಣಿಗೆಗೆ ಹಾಗೂ ದೇಹದ ವಿವಿಧ ಊತಕಗಳಲ್ಲಿ ಕಂಡು ಬರುವ ಅಸಹಜ ಕ್ಯಾಲ್ಸೀಕರಣ (ಅಬ್‌ನಾರ್ಮಲ್ ಕ್ಯಾಲ್ಸಿಫಿಕೇಶನ್) ಕ್ಕೆ ಕಾರಣವಾಗಿರಬಹುದು




ಎಂದು ತರ್ಕಿಸಿದ್ದಾರೆ!

ಈ ನಾನೋ ಬ್ಯಾಕ್ಟೀರಿಯಗಳು 'ಅಪಟೈಟ್'ನ್ನು ಉತ್ಪಾದಿಸಬಲ್ಲವು. ಇದೊಂದು ಕ್ಯಾಲ್ಸಿಯಂ ಫಾಸ್ಪೇಟ್‌ಯುಕ್ತ ಖನಿಜ. ತಾನು ಬೆಳೆಯುತ್ತಿರುವ ಪರಿಸರಕ್ಕೆ ಅನುಗುಣವಾಗಿ ಈ ಬ್ಯಾಕ್ಟೀರಿಯ ಭಿನ್ನ ಭಿನ್ನವಾಗಿ ವರ್ತಿಸಬಹುದು. ಒಂದು ಜೈವಪೊರೆ (ಬಯೋಫಿಲಂ) ಯನ್ನು ರೂಪಿಸಬಲ್ಲುದು. ಒಂದು ಮರಳು ಕಣವನ್ನು ಸೃಜಿಸಬಹುದು. ಇಲ್ಲವೆ ಗಂತಿಯಂತಹ ರಚನೆಯನ್ನು ರೂಪಿಸಬಲ್ಲುದು. ಅತ್ಯಂತ ಅನುಕೂಲಕರ ಪರಿಸರದಲ್ಲಿ ಈ ಬ್ಯಾಕ್ಟೀರಿಯಗಳ ವಸಾಹತು ತಮ್ಮ ಸುತ್ತಲು ಕ್ಯಾಲ್ಸಿಯಂ ಫಾಸ್ಪೇಟ್ ಕೋಟೆಯನ್ನು ಲೀಲಾಜಾಲವಾಗಿ ಕಟ್ಟಿಕೊಳ್ಳುತ್ತವೆ. ಕೆಲವು ವಾರಗಳಲ್ಲಿ ಸುಮಾರು ಅರ್ಧ ಸೆಂಟಿಮೀಟರ್ ವ್ಯಾಸದ 'ಕಲ್ಲನ್ನು' ಬೆಳೆಸಬಲ್ಲವು.

ಸಂಶೋಧಕರು ಬ್ಯಾಕ್ಟೀರಿಯಗಳ ಸುಣ್ಣದ ಕೋಟೆಯನ್ನು ರಾಸಾಯನಿಕವಾಗಿ ವಿಶ್ಲೇಷಿಸಿದರು. ಇವು ಹೆಚ್ಚೂ ಕಡಿಮೆ ಮೂಳೆಯಂತೆ ಇದ್ದವು. ಮೂಳೆಯಲ್ಲಿ ಸಾಮಾನ್ಯವಾಗಿ 'ಹೈಡ್ರಾಕ್ಸಿ ಅಪಟೈಟ್' ಇರುತ್ತದೆ. ಈ ಬ್ಯಾಕ್ಟೀರಿಯ ರಚಿತ ಕೋಟೆಯಲ್ಲಿ 'ಕಾರ್ಬೋನೇಟ್ ಅಪಟೈಟ್' ಇದೆ. ಅಷ್ಟೇ ವ್ಯತ್ಯಾಸ! ಆದರೆ ನಮ್ಮ ದೇಹದಲ್ಲಿ ಮೂಡುವ ಕಲ್ಲುಗಳು ಹಾಗೂ ಅಸಹಜ ಕ್ಯಾಲ್ಸೀಕರಣಗಳು, ಈ ಕೋಟೆಯನ್ನು ಬಹುವಾಗಿ ಹೋಲುತ್ತವೆ. ಜೊತೆಗೆ ಈ ಕೋಟೆಗಳ ಗಾತ್ರ ಹಾಗೂ ಆಕೃತಿಗಳು ಮೂತ್ರಪಿಂಡ ಕಲ್ಲುಗಳನ್ನು ಬಹುವಾಗಿ ಹೋಲುತ್ತವೆ.

ಸಂಶೋಧಕರು ಬ್ಯಾಕ್ಟೀರಿಯಗಳ ಕೋಟೆಯನ್ನು ಸೀಳಿದರು. ಪರೀಕ್ಷಿಸಿದರು. ಕೋಟೆಯ ಮಧ್ಯೆ ಬ್ಯಾಕ್ಟೀರಿಯಗಳು ಬದುಕಿದ್ದವು. ಅವುಗಳ ಸುತ್ತಲು ಸುಣ್ಣದ ಪದರುಗಳು ಬೆಳೆದಿದ್ದವು. ವಿಜ್ಞಾನಿಗಳು ಮನುಷ್ಯರ ದೇಹದಲ್ಲಿ ಬೆಳೆದಿದ್ದ ಸುಮಾರು ೩೦ ಕಲ್ಲುಗಳನ್ನು ಆಯ್ಕೆ ಮಾಡಿಕೊಂಡರು. ಅವುಗಳನ್ನು ಛೇದಿಸಿದರು. ಪರೀಕ್ಷಿಸಿದರು. ಈ ಎಲ್ಲ ೩೦ ಕಲ್ಲುಗಳ ಮಧ್ಯದಲ್ಲೂ ಬ್ಯಾಕ್ಟೀರಿಯಗಳಿದ್ದವು.

ಈಗ ಸಂಶೋಧಕರ ಅಭಿಪ್ರಾಯ ಹೀಗಿದೆ. ಮೂತ್ರಪಿಂಡ ಕಲ್ಲುಗಳು ಬೆಳೆಯಲು ಈ ಬ್ಯಾಕ್ಟೀರಿಯಗಳೇ 'ಬೀಜ' ಬಿತ್ತುತ್ತಿರಬಹುದು. ನಮ್ಮ ಕೀಲುಗಳಲ್ಲಿ ಮತ್ತು ಕಂಡರ (ಟೆಂಡನ್ಸ್) ಗಳಲ್ಲಿ ಕಂಡು ಬರುವ ಖನಿಜೀಕರಣಕ್ಕೆ ಇವೇ ಕಾರಣವಾಗಿರಬಹುದು. ಕೆಲವು ರೀತಿಯ ಕೀಲುರಿಯೂತಕ್ಕೆ ಹುಸಿ ಕೀಲುವಾತಕಿ (ಸ್ಯೂಡೋ ಗೌಟ್) ಹಾಗೂ ಕೀಲು ತೊಂದರೆಗಳಿಗೆ ಈ ಬ್ಯಾಕ್ಟೀರಿಯಗಳೇ ಕಾರಣವಾಗಿರಬಹುದು. ರಕ್ತನಾಳಗಳಲ್ಲಿ ಕೆಲವು ಸಲ ಕೊಬ್ಬಿನ ಅಂಶ ಹೆಪ್ಪುಗಟ್ಟಿ ರಕ್ತನಾಳದ ವ್ಯಾಸ ಕಿರಿದಾಗುತ್ತದೆ. ಈ ಕೊಬ್ಬಿನ ಹೆಪ್ಪಿನಲ್ಲಿ ಕೆಲವು ಸಹ ಕ್ಯಾಲ್ಸಿಯಂ ಸಂಚಯಗೊಂಡು ಕಲ್ಲಿನಂತಾಗಬಹುದು. ಈ ಪ್ರಕ್ರಿಯೆಗೂ ಬ್ಯಾಕ್ಟೀರಿಯಗಳೇ ಕಾರಣವಾಗಿರಬಹುದು. ಗಂತಿಗಳಲ್ಲಿ ಖನಿಜೀಕರಣಕ್ಕೂ ಇವೇ ಕಾರಣವಾಗಿರಬಹುದು - ಹೀಗೆಂದು ವಿಸ್ತೃತವಾಗಿ ನಾನೋಬ್ಯಾಕ್ಟೀರಿಯಗಳಿಂದ ಸಂಭವಿಸುವ ತೊಂದರೆಗಳನ್ನು ಸಂಶೋಧಕರು ಪಟ್ಟಿ ಮಾಡಿದ್ದಾರೆ. ●

# ಚೀನಾ ದೇಶದ ಪ್ರಾಚೀನ ಚಿಕಿತ್ಸಾಪದ್ಧತಿ - ಆಕ್ಯುಪಂಕ್ಚರ್

● ಅನಿಕೇತನ

ಭಾಗ - ೨

ಒಂದು ರೋಗ ಹಲವು ಸಂದರ್ಭಗಳಲ್ಲಿ ಹಲವು ರೀತಿ ವರ್ತಿಸಬಹುದು. ಜ್ವರ ಬಂದಾಗ ಯಾಂಗ್ ಪ್ರಧಾನವಾಗಿರುತ್ತದೆ. ಜ್ವರ ಅಧಿಕ ವಾಗಿ ವ್ಯಕ್ತಿ ಕುಸಿದನೆಂದರೆ ಆಗ 'ಯಿನ್ ಶಕ್ತಿ ಅದಕ್ಕೆ ಕಾರಣವಾಗುತ್ತದೆ. ರಕ್ತಹೀನತೆಗೆ (ಅನೀಮಿಯ) ಯಿನ್ ಕಾರಣ. ರಕ್ತಹೀನತೆ ತೀವ್ರವಾದಾಗ ಉಸಿರಾಟ ಕಷ್ಟ ವಾಗುತ್ತದೆ. ಎದೆ ಬಡಿತದಲ್ಲಿ ಹೆಚ್ಚಳ ಕಂಡುಬರುತ್ತದೆ. ರಕ್ತದೊತ್ತಡ ಏರಬಹುದು. ಇದಕ್ಕೆಲ್ಲ ಯಾಂಗ್ ಕಾರಣವಾಗುತ್ತದೆ. ಹಾಗಾಗಿ ಯಾವ ಶಕ್ತಿ ಪ್ರಧಾನವಾಗಿದೆಯೋ ಅದನ್ನು ಸಮಸ್ಥಿತಿಗೆ ತರಲು ಸೂಕ್ತ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ.

ಒಂದು ರೋಗ ಗುಣಮುಖವಾಗುತ್ತಿರುವಾಗ ಯಿನ್‌ಸ್ಥಿತಿ ಕಡಿಮೆಯಾಗಿ ಯಾಂಗ್ ಸ್ಥಿತಿ ಹೆಚ್ಚುತ್ತಾ ಹೋಗುತ್ತದೆ. ಇದು ಸಾಮಾನ್ಯ ನಿಯಮ. ಇದು ತಿರುಗ ಮುರುಗವಾದಾಗ ರೋಗ ಪ್ರಬಲವಾಗುತ್ತಿದೆ ಎಂದು ತಿಳಿಯಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಈ ನಿಯಮಕ್ಕೆ ಅಪವಾದಗಳುಂಟು. ಉದಾ: ಮೇಲೆ ವಿವರಿಸಿದ ರಕ್ತಹೀನತೆ ಉಸಿರಾಟ ಕಷ್ಟವಾದಾಗ, ಎದೆಬಡಿತ ತೀವ್ರವಾದಾಗ ರೋಗ ಪ್ರಗತಿ ತೀವ್ರವಾಗಿದೆ ಎಂದರ್ಥ. ಆದರೆ ಇವಕ್ಕೆ ಯಾಂಗ್ ಕಾರಣ ! ಹಾಗಾಗಿ ವೈದ್ಯ ಬಹುಸೂಕ್ಷ್ಮ ಅಧ್ಯಯನವನ್ನು ಸದಾ ನಡೆಸುತ್ತಿರಬೇಕಾಗುತ್ತದೆ.

## ಆಧುನಿಕ :

ಆಧುನಿಕ ವೈದ್ಯಶಾಸ್ತ್ರದ ಸಿದ್ಧಾಂತಗಳು ಸಂಪೂರ್ಣ ಭಿನ್ನ. ರೋಗಕಾರಕ, ರೋಗಲಕ್ಷಣ, ರೋಗಚಿಹ್ನೆ, ರೋಗ ತಪಾಸಣೆ, ರೋಗ ಪ್ರಗತಿಯ ಕಾರಣ ಅಂಗಾಂಗಗಳಲ್ಲಿ ಸಂಭವಿಸುವ ಬದಲಾವಣೆಗಳು, ಇತ್ಯಾದಿಗಳು ಕರಾರುವಾಕ್ಕಾಗಿರುತ್ತವೆ. ಕೊಡುವ ಚಿಕಿತ್ಸೆಯ ಕಾರಣ ಲಕ್ಷಣ - ಚಿಹ್ನೆಗಳಲ್ಲಿ ಕಂಡುಬರುವ ಬದಲಾವಣೆಗಳನ್ನು ನೇರವಾಗಿ ನೋಡಲು ಸಾಧ್ಯವಿರುತ್ತದೆ.

ಇದು ಆಕ್ಯುಪಂಕ್ಚರಿನಲ್ಲಿ ಸಾಧ್ಯವಿಲ್ಲ. ಹಾಗಾಗಿ ಆಧುನಿಕ ಶಾಸ್ತ್ರ ಹಿನ್ನೆಲೆಯನ್ನು ಹೊಂದಿರುವವರಿಗೆ ಆಕ್ಯುಪಂಕ್ಚರ್ ಒಂದು ಅರ್ಥಹೀನ, ಅವೈಜ್ಞಾನಿಕ ಪದ್ಧತಿ ಎಂದು ಮೇಲುನೋಟಕ್ಕೆ ಕಂಡು ಬರಬಹುದು. ಆದರೆ ಬಹಳಷ್ಟು ರೋಗಗಳು ಸ್ಪಷ್ಟ ಯಿನ್ - ಯಾಂಗ್ ಲಕ್ಷಣ - ಚಿಹ್ನೆಗಳನ್ನು ತೋರುತ್ತವೆ ಎಂಬುದು ಸುಳ್ಳಲ್ಲ. ಇವುಗಳಲ್ಲಿ ಕಂಡುಬರುವ ಅಪವಾದಗಳನ್ನು ತಿಳಿಯಲು ಅನುಭವ ಹಾಗೂ ಅಂತಃಪ್ರಜ್ಞೆ ಎರಡೂ ಅವಶ್ಯ.

## ವಾಹಿನಿ :

ಸಾಂಪ್ರದಾಯಿಕ ಚೀನೀ ವೈದ್ಯ ಸಿದ್ಧಾಂತದನ್ವಯ, ಪ್ರತಿಯೋರ್ವ ಮನುಷ್ಯನ ದೇಹದ ಮೇಲೆ ೧ ಜೊತೆ ವಾಹಿನಿಗಳು (ಮೆರಿಡಿಯನ್ಸ್ ಆರ್‌ಚಾನಲ್ಸ್) ಹಾಗೂ ಎರಡು ದೇಹಮಧ್ಯ ವಾಹಿನಿಗಳು ಇರುತ್ತವೆ.

ಪ್ರತಿಯೊಂದು ತೋಳಿನಲ್ಲಿ ೩. ಯಿನ್ ವಾಹಿನಿಗಳಿರುತ್ತವೆ. (ಹೃದಯ, ಹೃದಯ ಸುತ್ತೊಪ್ಪರೆ - ಪೆರಿಕಾರ್ಡಿಯಂ - ಮತ್ತು ಶ್ವಾಸಕೋಶ ವಾಹಿನಿಗಳು ) ಇವು ತೋಳಿನ ಒಳಪಾರ್ಶ್ವದ ಕಡೆಗಿರುತ್ತವೆ. ಹೊರಪಾರ್ಶ್ವದಲ್ಲಿ ಮೂರು ಯಾಂಗ್ ವಾಹಿನಿಗಳಿರುತ್ತವೆ. (ಚಿಕ್ಕ ಕರುಳು, ಟ್ರಿಪಲ್ ಹೀಟರ್, ದೊಡ್ಡ ಕರುಳು )

ಕಾಲಿನಲ್ಲೂ ಅಷ್ಟೆ. ಮೂರು ಯಿನ್ ಮತ್ತು ಮೂರು ಯಾಂಗ್, ಒಟ್ಟು ೬ ವಾಹಿನಿಗಳಿರುತ್ತವೆ. ಯಿನ್ ವಾಹಿನಿಗಳು ಗುಲ್ಮ, ಮೂತ್ರಪಿಂಡ ಮತ್ತು ಯಕೃತ್ತಿಗೆ ಸಂಬಂಧಪಟ್ಟಿದ್ದರೆ, ಕಾಲಿನ ಹೊರಪಾರ್ಶ್ವದಲ್ಲಿರುವ ಯಾಂಗ್ ವಾಹಿನಿಗಳು ಜಠರ, ಮೂತ್ರಾಶಯ ಮತ್ತು ಪಿತ್ತಕೋಶಗಳಿಗೆ ಸಂಬಂಧವನ್ನು ಹೊಂದಿರುತ್ತವೆ.

ದೇಹ ಮಧ್ಯ ವಾಹಿನಿಗಳು ಎರಡು. ಒಂದು ಮುಂಭಾಗದಲ್ಲಿ ಎದೆಯ ಮಧ್ಯೆ ಹಾದು ಹೋದರೆ ಮತ್ತೊಂದು ಹಿಂಭಾಗದಲ್ಲಿ ಬೆನ್ನ ಮಧ್ಯೆಯಿರುತ್ತದೆ.

### ಆಕ್ಯುಪಂಕ್ಚರ್ ಅರಿವಳಿಕೆ

ದೇಹದ ನಿರ್ದಿಷ್ಟ ಬಿಂದುಗಳಲ್ಲಿ ಸೂಜಿಯನ್ನು ಚುಚ್ಚುವುದರ ಮೂಲಕ ಅರಿವಳಿಕೆಯನ್ನುಂಟು ಮಾಡಲು ಸಾಧ್ಯವಿದೆ. ೧೯೮೪ರಲ್ಲಿ ಚೀನದ ಬೀಜಿಂಗ್‌ನಲ್ಲಿ ಒಂದು ಅಂತಾರಾಷ್ಟ್ರೀಯ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ, ೧,೬೫೦,೦೦೦ ಜನರು ಆಕ್ಯುಪಂಕ್ಚರ್ ಅರಿವಳಿಕೆಯಲ್ಲಿ ವಿವಿಧ ರೀತಿಯ ಶಸ್ತ್ರಚಿಕಿತ್ಸೆಗಳನ್ನು ಯಶಸ್ವಿಯಾಗಿ ಮಾಡಿಸಿ ಕೊಂಡ ಬಗ್ಗೆ ಒಂದು ವಿಶೇಷ ಪ್ರಬಂಧವನ್ನು ಮಂಡಿಸಲಾಯಿತು. ಇವರಲ್ಲಿ ಮಕ್ಕಳೂ ಇದ್ದರು. ೮೦ ವರ್ಷಗಳನ್ನು ಮೀರಿದ ವೃದ್ಧರೂ ಇದ್ದರು. ಇಡೀ ಶ್ವಾಸಕೋಶವನ್ನು ಛೇದಿಸುವಂತಹ ಪ್ರಧಾನ ಶಸ್ತ್ರಚಿಕಿತ್ಸೆ ಗಳೂ ಆಕ್ಯುಪಂಕ್ಚರ್ ಅರಿವಳಿಕೆಯಲ್ಲಿ ನಡೆದಿದ್ದವು.

ಆಕ್ಯುಪಂಕ್ಚರ್ ಅರಿವಳಿಕೆ ಅನೇಕ ರೀತಿಯಲ್ಲಿ ಉಪಯುಕ್ತ. ನಿರ್ದಿಷ್ಟ ಅಂಗ ಮಾತ್ರ ಜಡವಾಗಿರುತ್ತದೆ. ಪ್ರಜ್ಞೆ ಸಂಪೂರ್ಣವಾಗಿ ಹೋಗಿರು ವುದಿಲ್ಲ. ರೋಗಿಯ ನಾಡಿ, ರಕ್ತ ದೊತ್ತಡ, ಉಸಿರಾಟಗತಿ ಎಲ್ಲವೂ ಸಹಜ ವಾಗಿರುತ್ತದೆ. ಶಸ್ತ್ರಚಿಕಿತ್ಸಾ ಅವಧಿಯಲ್ಲಿ ಬದಲಾವಣೆಗೆ ಒಳಗಾಗುವುದಿಲ್ಲ. ಸಾಂಪ್ರ ದಾಯಿಕ ಅರಿವಳಿಕೆಯಲ್ಲಿ ಕಂಡುಬರುವ ತೊಡಕುಗಳು (ಕಾಂಪ್ಲಿಕೇಶನ್ಸ್) ಇರು ವುದಿಲ್ಲ. ಜೊತೆಗೆ ರೋಗಿಯ ರೋಗ ನಿರೋಧಕ ಶಕ್ತಿಯನ್ನು ಬಲಪಡಿಸುತ್ತದೆ. ಬೇಗ ಗುಣವಾಗಲು ನೆರವಾಗುತ್ತದೆ.

ಈ ಎಲ್ಲ ವಾಹಿನಿಗಳಲ್ಲಿ 'ಷೈ' ಎಂಬ ಚೇತನವು ಸದಾಕಾಲ ನಿರಂತವರಾಗಿ ಹರಿಯುವುದು

**ಪಂಚಭೂತ :**

ಪ್ರಾಚೀನ ಆಕ್ಯುಪಂಕ್ಚರಿಗರು ಮಾನವನ ಬದುಕು (ಆರೋಗ್ಯ ಮತ್ತು ರೋಗಗಳನ್ನು ಒಳಗೊಂಡಂತೆ) ಪಂಚಭೂತಗಳ ಪ್ರಭಾವದಲ್ಲಿ ನಡೆಯುತ್ತದೆ ಎಂದು ತಿಳಿದಿದ್ದರು. ಮರ, ಬೆಂಕಿ, ಭೂಮಿ, ಲೋಹ ಮತ್ತು ನೀರು - ಇವೇ ಆ ಪಂಚಭೂತಗಳು. ಇವನ್ನೂ ಸಹ ಅಕ್ಷರಶಃ ಅರ್ಥೈಸಬಾರದು. ಇವು ಪ್ರಾಕೃತಿಕ ವ್ಯಾಪಾರಗಳನ್ನು ಹಾಗು ಅವುಗಳ ನಡುವೆಯಿರುವ ಸಂಬಂಧಗಳನ್ನು ತೋರುತ್ತವೆ. ಹಾಗೆಂದು ಅಂದಿನವರು ಭಾವಿಸಿದ್ದರು. ಚೀನೀಯರು ಯಾವತ್ತೂ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆಯೇ ಹೊರತು ನಿಕೃಷ್ಟ ವಸ್ತುಗಳನ್ನಲ್ಲ. ಹಾಗಾಗಿ ಪಂಚಭೂತಗಳು ಮನುಷ್ಯನಿಗೆ ಮಾತ್ರವಲ್ಲ ಇಡೀ ಜಗತ್ತಿನ ವ್ಯಾಪಾರ ಚಕ್ರಗಳನ್ನು ಪ್ರತಿನಿಧಿಸುತ್ತವೆ ಎಂದು ಭಾವಿಸುತ್ತಿದ್ದರು.

**''ಅಹಂ ಬ್ರಹ್ಮಾಸ್ಮಿ''**

ಚೀನೀಯರು ''ಅಹಂ ಬ್ರಹ್ಮಾಸ್ಮಿ''ಎಂಬ ತತ್ವವನ್ನು, ಅಂದರೆ ಇಡೀ ಬ್ರಹ್ಮಾಂಡವೇ ನನ್ನಲ್ಲಿದೆ; ಇಡೀ ಬ್ರಹ್ಮಾಂಡದಲ್ಲಿರುವ ಎಲ್ಲವನ್ನೂ ನಾನು ಒಳಗೊಂಡಿದ್ದೇನೆ; ಇಡೀ ಬ್ರಹ್ಮಾಂಡವನ್ನು ಸೂಕ್ಷ್ಮರೂಪದಲ್ಲಿ ಪ್ರತಿನಿಧಿಸುತ್ತಿದ್ದೇನೆ ಎಂದು ತಿಳಿದಿದ್ದರು. ಹಾಗಾಗಿ ಬ್ರಹ್ಮಾಂಡವನ್ನು ಆಳುವ ತತ್ವಗಳೇ ಮನುಷ್ಯನ ಬದುಕನ್ನೂ ಆಳುತ್ತವೆ ಎಂದು ಭಾವಿಸಿದ್ದರು.

ಬಾಹ್ಯಾ ಕಾರಣಗಳಿಂದ ದೇಹದಲ್ಲಿ ಹರಿಯುತ್ತಿರುವ ಚೇತನದ ಗತಿಗೆ ತೊಂದರೆಯಾದಾಗ ರೋಗಗಳು ಬರುತ್ತವೆ. ಆಕ್ಯುಪಂಕ್ಚರ್ ಬಿಂದುಗಳಲ್ಲಿ ಈ ವಾಹಿನಿಗಳು ಅತ್ಯಂತ ಮೇಲ್‌ಸ್ತರದಲ್ಲಿ ಹರಿಯುತ್ತವೆ. ಹಾಗಾಗಿ ಅವನ್ನು ಸೂಜಿಯ ಮೂಲಕ ತಲುಪಬಹುದು. ಸೂಜಿಗಳನ್ನು ನಿರ್ದಿಷ್ಟ ಬಿಂದುಗಳಲ್ಲಿ, ನಿರ್ದಿಷ್ಟ ವಿಧಾನದಲ್ಲಿ ಚುಚ್ಚಿ, ಹರಿಯುತ್ತಿರುವ ಚೇತನದಲ್ಲಿ ಬದಲಾವಣೆಗಳನ್ನು ತರಬಹುದು. ಯಿನ್-ಯಾಂಗ್ ಸಮತೋಲನೆಯನ್ನು ಕಾಯ್ದುಕೊಳ್ಳಬಹುದು. ಆಗ ರೋಗ ಗುಣವಾಗುತ್ತದೆ - ಇದು ಆಕ್ಯುಪಂಕ್ಚರ್ ಹಿಂದಿನ ಸಿದ್ಧಾಂತ.

ವಿಶ್ವ ಆರೋಗ್ಯ ಸಂಸ್ಥೆಯು ಆಕ್ಯುಪಂಕ್ಚರ್ ಪದ್ಧತಿಯನ್ನು ೧೯೮೧ ರಲ್ಲಿ ಅಧಿಕೃತವಾಗಿ ಮಾನ್ಯಮಾಡಿದೆ. ಆಕ್ಯುಪಂಕ್ಚರಿನಿಂದ ಗುಣಪಡಿಸಲು ಸಾಧ್ಯವಾಗುವ್‌ರೋಗಗಳ ಪಟ್ಟಿಯನ್ನು ಸಹ ತಾತ್ಕಾಲಿಕವಾಗಿ ರೂಪಿಸಿದೆ. (ಪಟ್ಟಿ೬) ಹಾಗಾಗಿ ಅರ್ಹ ತಜ್ಞರ ಉಸ್ತುವಾರಿಯಲ್ಲಿ ಆಕ್ಯುಪಂಕ್ಚರ್ ಪರಿಣಾಮಕಾರಿಯಾಗಿ ಫಲಿತಾಂಶವನ್ನು ನೀಡಬಲ್ಲದು.

(ಮುಗಿಯಿತು)

**ಪಟ್ಟಿ - ೫ ಯಿನ್ - ಯಾಂಗ್ ಪ್ರಧಾನ ರೋಗಗಳು**

| ವ್ಯವಸ್ಥೆ | ಯಿನ್ | ಯಾಂಗ್ |
|---|---|---|
| ಚಲನ | ಸ್ನಾಯುಬೇನೆ | ನೋವು ತುಂಬಿದ ರೋಗ |
| ನರ | ಪಾರ್ಶ್ವವಾಯು | ನಡುಕ |
| | ಪೋಲಿಯೋ | ಪಾರ್ಕಿನ್‌ಸೋಸಿಸಂ |
| | ನರಬೇನೆ | ನರನೋವು |
| ಉಸಿರಾಟ | ಎಂಫೀಸೀಮ | ಅಸ್ತಮ |
| | ಧ್ವನಿನಾಳ ಉರಿಯೂತ | ಕೆಮ್ಮು |
| | ಪ್ಲೂರೈಟಿಸ್ | ಬ್ರಾಂಕೈಟಿಸ್ |
| ರಕ್ತಪರಿಚಲನಾ | ಇಳಿರಕ್ತದೊತ್ತಡ | ಅತಿರಕ್ತದೊತ್ತಡ |
| | ಎದೆ ಬಡಿತದಿಳಿತ | ಎದೆಬಡಿತದೇರುವಿಕೆ |
| ಕರುಳು | ಭೇದಿ | ಮಲಬದ್ಧತೆ |
| ಮೂತ್ರ | ಅನಿಯಂತ್ರಮೂತ್ರ | ಮೂತ್ರನಾಳ ಉರಿಯೂತ |
| ರಕ್ತ | ರಕ್ತಹೀನತೆ | ರಕ್ತಾರ್ಬುದ |
| ಕಣ್ಣು | ಕಣ್ಣುಪೊರೆ | ಕೆಂಗಣ್ಣು |
| ಕಿವಿ | ಕಿವುಡುತನ | ಕಿವಿ ಉರಿಯೂತ |
| ನಿರ್ನಾಳ | ಬೊಜ್ಜುತನ | ಸೊರಗುವಿಕೆ |
| ಚರ್ಮ | ಸೋರಿಯಾಸಿಸ್ | ಇಸಬು |
| | ತೊನ್ನು | ಗಂಧೆ |

**ಪಟ್ಟಿ -೬ : ಆಕ್ಯುಪಂಕ್ಚರಿನಿಂದ ಗುಣಪಡಿಸಲು ಸಾಧ್ಯವಾಗ ಬಹುದು ಎಂದು ನೀಡಿರುವ ಪಟ್ಟಿ. ಇದನ್ನು ಅನುಭವದಿಂದ ಮಾತ್ರ ಸಂಗ್ರಹಿಸಿದೆ. ಯಾವುದೇ ವೈಜ್ಞಾನಿಕ ಅಧ್ಯಯನವನ್ನು ಆಧರಿಸಿರುವಂತಹದಲ್ಲ.**

I. ಉಸಿರುನಾಳ ಮೇಲ್ಭಾಗದ ಸೋಂಕುಗಳು

೧. ಅಕ್ಯೂಟ್ ಸೈನುಸೈಟಿಸ್
೨. ಅಕ್ಯೂಟ್ ರೈನೈಟಿಸ್
೩. ಕಾಮನ್ ಕೋಲ್ಡ್
೪. ಅಕ್ಯೂಟ್ ಟಾನ್ಸಿಲೈಟಿಸ್

II. ಉಸಿರು ನಾಳ ವ್ಯವಸ್ಥೆ

೧. ಅಕ್ಯೂಟ್ ಬ್ರಾಂಕೈಟಿಸ್
೨. ಬ್ರಾಂಕಿಯಲ್ ಅಸ್ತಮ

III. ಕಣ್ಣು ರೋಗಗಳು

೧. ಕಂಜಂಕ್ಟಿವೈಟಿಸ್
೨. ಸೆಂಟ್ರಲ್ ರೈಟಿನೈಟಿಸ್
೩. ಕ್ಯಾಟರಾಕ್ಟ್

IV. ಬಾಯಿ ರೋಗಗಳು

೧. ಹಲ್ಲು ನೋವು
೨. ವಸಡು ನೋವು
೩. ಗಂಟಲು ನೋವು

V. ಜಠರ- ಕರುಳು ರೋಗಗಳು

೧. ಬಿಕ್ಕಳಿಕೆ
೨. ಜಠರ ಉರಿಯೂತ
೩. ಹೈಪರ್ ಅಸಿಡಿಟಿ
೪. ಡುಯೋಡಿನಲ್ ಅಲ್ಸರ್
೫. ಕೋಲೈಟಿಸ್
೬. ಅಕ್ಯೂಟ್ ಬ್ಯಾಸಿಲರಿ ಡೀಸೆಂಟ್ರಿ
೭. ಮಲಬದ್ಧತೆ
೮. ಭೇದಿ
೯. ಪೆರಾಲಿಟಿಕ್ ಐಲಿಯಸ್

VI. ನರ, ಸ್ನಾಯು, ಹಾಗೂ ಕೀಲು ರೋಗಗಳು

೧. ತಲೆನೋವು
೨. ಮೈಗ್ರೇನ್
೩. ಟ್ರೈಜೆಮೈನಲ್ ನ್ಯೂರಾಲ್ಜಿಯ
೪. ಫೇಶಿಯಲ್ ಪಾಲ್ಸಿ
೫. ನ್ಯೂರೋಪತಿ
೬. ಪೋಲಿಯೋ
೭. ಹಾಸಿಗೆ ಮೂತ್ರ
೮. ಟೆನ್ನಿಸ್ ಎಲ್ಬೋ
೯. ಸಯೊಟಿಕ್
೧೦. ಕೆಳ ಬೆನ್ನು ನೋವು
೧೧. ಆಸ್ಟಿಯೋ ಆರ್ಥೈಟಿಸ್
೧೨. ನ್ಯೂರಾಲ್ಜಿಯ

# ಹೆಂಡತಿಗೂ ಚಿಕಿತ್ಸೆ

ಡಾ। ಎನ್. ಶಿವಮೂರ್ತಿ

ವಿಜಯ್ ಮುನ್ಸಿಪಾಲಿಟಿ ಆಫೀಸಿನಲ್ಲಿ ಕ್ಲರ್ಕ್ ಆಗಿ ಕೆಲಸ ಮಾಡುತ್ತಾನೆ. ಒಳ್ಳೆಯ ಸಂಬಳವಿದೆ. ಅದೇ ರೀತಿ ಸುಖ ಸಂಸಾರವನ್ನೂ ಹೊಂದಿದ್ದಾನೆ. ಅವನ ಹೆಂಡತಿ ಅನುರಾಧ ಸುಂದರಿ. ಬೆಳ್ಳನೆ ಮೈಛಾಯೆಯ ಆಕೆ ದಂತದ ಗೊಂಬೆಯಂತಿದ್ದಾಳೆ. ಅವರಿಬ್ಬರಿಗೆ ಒಂದು ಗಂಡು, ಒಂದು ಹೆಣ್ಣು, ವಿನಿತ್ ಮತ್ತು ಅಕ್ಷತ. ನಾನಿದುವರೆಗೆ ಇಂತಹ ಸಂಸಾರವನ್ನು ನೋಡೇ ಇಲ್ಲ. ಅನುರಾಧಳಂತೂ ಮನೆಯ ಪ್ರತಿಯೊಂದು ಕೆಲಸವನ್ನೂ ಚೊಕ್ಕಟವಾಗಿ ಮಾಡುತ್ತಾಳೆ. ಮಕ್ಕಳ ಲಾಲನೆ ಪೋಷಣೆಗೆ ಮೊದಲ ಆದ್ಯತೆ. ವಿಜಯ್‌ನ ಮಾವನೂ ಹಣದಲ್ಲೂ, ನಡತೆಯಲ್ಲೂ, ಬಹಳ ಶ್ರೀಮಂತ. ವಿಜಯ್ ಸಹ ಒಳ್ಳೆಯವನೆ.

ಮೊನ್ನೆ ಅನುರಾಧ ಯಾವುದೋ ಕೆಲಸದ ನಿಮಿತ್ತ ತವರು ಮನೆಗೆ ಹೋಗಿದ್ದಳು. ಒಂದು ತಿಂಗಳಾದರೂ ವಾಪಾಸು ಬರಲಿಲ್ಲ. ಮಕ್ಕಳನ್ನೂ ಕರೆದೊಯ್ದಿದ್ದಳು. ಪಾಪ ವಿಜಯ್, ಹೆಂಡತಿಯ ಸಿರಿ ಸೌಷ್ಟವವನ್ನು ದಿನವೂ ಸವಿಯುತ್ತಿದ್ದವನು ತಿಂಗಳುಗಳ ಕಾಲ ಲೈಂಗಿಕ ಉಪವಾಸ ತಾಳ



ಲಾರದಾದನು. ಆತನು ಮುನ್ಸಿಪಾಲಿಟಿಯಲ್ಲಿ ಉದ್ಯೋಗಸ್ಥ ಬೇರೆ. ಕೇಳಬೇಕೆ! ಊರೆಲ್ಲ ಜೀಪಲ್ಲಿ ಸಾಹೇಬರ ಜೊತೆ ಸುತ್ತೋದೇ ಕೆಲಸ. ಅಲ್ಲಿ ಏನಾಯ್ತು, ಇಲ್ಲಿ ಏನಾಯ್ತು ರಿಪೋರ್ಟು ಬರೆಯೋದು. ಕೆಲಸಗಾರರು ಸರಿಯಾಗಿ ಕಾರ್ಯ ನಿರ್ವಹಿಸುತ್ತಾರೆಯೇ ಮೇಲ್ವಿಚಾರಣೆ ಮಾಡೋದು, ಇತರೆ ಫೀಲ್ಡ್‌ವರ್ಕ್ ಜಾಸ್ತಿ. ಹಾಗೇನೇ ಹಲವಾರು ಜನರ ಪರಿಚಯ ಜಾಸ್ತಿ. ತಿಂಗಳುಗಳ ಕಾಲ ಲೈಂಗಿಕ ಉಪವಾಸ ಕಂಡಿದ್ದಾತ ತರಂಗಿಣಿ ಎನ್ನೋ ಸ್ಫುರದ್ರೂಪಿ ಹೆಣ್ಣನ್ನು ನೋಡಿದನು. ಅಂದವಾಗಿ, ಚಂದವಾಗಿ ಮೈತುಂಬಿಕೊಂಡಿದ್ದಳು. ತರಂಗಿಣಿಯದು ವೇಶ್ಯಾವೃತ್ತಿ. ಪಾಪ ವಿಜಯ್‌ಗೆ ತಿಳಿಯಲೇ ಇಲ್ಲ, ಅವಳ ಅಂದಕ್ಕೆ ಮಾರು ಹೋದ. ತಡೆಯಲಾರದೆ ಒಮ್ಮೆ ಅವಳೊಡನೆ ಲೈಂಗಿಕ ಸಂಪರ್ಕ ಬೆಳೆಸಿಬಿಟ್ಟ. ಯಾವಾಗಲೂ ನಿರೋಧ್ ಬಳಸುತ್ತಿದ್ದ ವಿಜಯ್ ತರಂಗಿಣಿಯನ್ನು ಅನುಭವಿಸೋ ಆತುರದಲ್ಲಿ ಅದನ್ನು ಮರೆತುಬಿಟ್ಟ, ಕೆಸರಲ್ಲಿ ಕಾಲಿಟ್ಟ.

ನಾನಂದು ಕ್ಲಿನಿಕ್ಕಿನಲ್ಲಿ ಕುಳಿತು ರೋಗಿಗಳನ್ನು ನೋಡುತ್ತಿದ್ದೆ. ವಿಜಯ್ ಬಂದ ತಕ್ಷಣ ''ಕುಳಿತುಕೊಳ್ಳಿ'' ಎಂದೆ. ವಿಜಯ್ ಕುಳಿತ. ವಿಜಯ್‌ನ ಸರದಿ ಬಂತು. ನಾನು ''ಏನು ವಿಜಯ್‌ರವರೆ ಇಷ್ಟು ದಿನ ಕಾಣಲೇ ಇಲ್ಲ'' ಎಂದೆ. ವಿಜಯ್ ''ಫೀಲ್ಡ್‌ವರ್ಕ್ ಜಾಸ್ತಿ ಸಾರ್, ಊರುಬಿಟ್ಟು ಹದಿನೈದು ದಿನ ಆಯಿತು.'' ಎಂದ. ನಾನು ''ಏನು? ಕ್ಲಿನಿಕ್ ಕಡೆ ಬಂದಿರಿ'' ಮುಖ ಸಪ್ಪಗಿದ್ದುದನ್ನು ನೋಡಿ ''ಏನಾದರೂ ತೊಂದರೆ ಇದೆಯೇ ? ನಮ್ಮಿಂದೇನಾದರೂ ಸಹಾಯ ಬೇಕೆ?'' ಎಂದೆ. ವಿಜಯ್ ''ಸಾರ್ ಮೊನ್ನೆ ನಮ್ಮ ಹಳೇ ವೈದ್ಯರ ಬಳಿ ಹೋಗಿದ್ದೆ. ಯಾಕೋ ನನ್ನ ಮರ್ಮಾಂಗದಲ್ಲಿ ಬಿಳುಪು ಹೋಗುತ್ತಿದೆ. ರೀಸಸ್‌ಗೆ ಹೋದರೆ ಉರಿಯುತ್ತಿದೆ. ರೀಸಸ್ ಮೊದಲು ಬರುವಾಗ ಸ್ವಲ್ಪ ಹಾಲಿನಂತೆ ಬಿಳಿಯಾಗಿರುತ್ತದೆ. ಅನೇಕ ಮಾತ್ರೆ ತೆಗೆದುಕೊಂಡೆ. ಆ RMP ಡಾಕ್ಟರು ಇಂಜಕ್ಷನ್. ಹಾಕಿದರು. ಏನೂ ಪ್ರಯೋಜನ ಆಗಲಿಲ್ಲ. ಕಡೆಗೆ ನ್ಯೂರಾಲಜಿಸ್ಟ್ ಹತ್ತಿರ ಹೋಗಿ. ಅವರು ದುರ್ಗ, ಇಲ್ಲವೆ ದಾವಣಗೆರೆ ಯಲ್ಲಿ ಸಿಗುತ್ತಾರೆ ಎಂದು ಹೇಳಿದರು'' ಎಂದ. ನಾನು ''ಏನಾದರೂ ತಪ್ಪು ಮಾಡಿದಿರೇನು ?'' ಎಂದೆ. ವಿಜಯ್ ''ಇಲ್ಲ ಸಾರ್ ಅಂಥದ್ದೇನೂ ಇಲ್ಲ'' ಎಂದು ನಾಚಿಕೊಳ್ಳುತ್ತ ಜಾರಿಕೊಳ್ಳುತ್ತಿದ್ದ. ನಾನು ''ನೋಡಿ, ನೀವು ಯಾವ ಸಂಕೋಚಾನೂ ಇಟ್ಟುಕೊಳ್ಳದೆ ಹೇಳಿ, ನಾನು ಯಾರಿಗೂ ಹೇಳೋಲ್ಲ. ಇಂಥ ತೊಂದರೆ ಸುಮ್ಮನೆ ಬರೋಲ್ಲ'' ಎಂದೆ. ವಿಜಯ್ ''ಹೌದು ಸಾರ್'' ಎಂದು ತನ್ನ ಸಂಸಾರ ದೂರ ಇದ್ದುದನ್ನು, ಹೊರಗಿನ ಹೆಂಗಸಿನ ಸುಖ ಪಡೆದಿದ್ದನ್ನೂ, ಸುಖ ಪಡೆಯಲು ಹೋಗಿ ವ್ಯಥೆಪಡುತ್ತಿರುವುದನ್ನೂ ಹೇಳಿದ.

ನಾನು ''ವಿಜಯ್ ಒಳಗೆ ಬನ್ನಿ, ಸ್ವಲ್ಪ ಪರೀಕ್ಷೆ ಮಾಡಿ ನೋಡೋಣ'' ಎಂದು ಒಳಗೆ ಕರೆದು ಮರ್ಮಾಂಗ ಪರೀಕ್ಷಿಸಿದೆ. ಒಂದು ಪರೀಕ್ಷೆ ಮಾಡಿಸಬೇಕಾಗುತ್ತೆ'' ಎಂದು ಚೀಟಿಯಲ್ಲಿ ಬರೆದು ಲ್ಯಾಬೋರೇಟರಿಗೆ ಕಳುಹಿಸಿದೆ.

ಎರಡು ಗಂಟೆಯ ನಂತರ ರಿಪೋರ್ಟ್ ಬಂತು. HIV, HBAG, VPRL ಎಲ್ಲಾ ನೆಗೆಟಿವ್ ಇದೆ ಎಂದು. ರೀಸಸ್ ಪರೀಕ್ಷೆ, ಅನೇಕ ಪಸ್ ಜೀವಕೋಶಗಳಿವೆ ಎಂದು ಮತ್ತು ಬಣ್ಣಲೇಪಿಸಿ ಸೂಕ್ಷ್ಮದರ್ಶಕದಲ್ಲಿ ವೀಕ್ಷಿಸಿದಾಗ ಹುರುಳಿಕಾಳಿನಾಕಾರದ ಬ್ಯಾಕ್ಟೀರಿಯಾಗಳು ಕಾಣುತ್ತಿವೆ ಎಂದು ರಿಪೋರ್ಟ್ ಬರೆಯಲಾಗಿತ್ತು.

ನಾನು ಅಂದುಕೊಂಡ ಹಾಗೆ ಇದು ಗೊನೋರಿಯಾನೆ ಎಂದು ತಿಳಿಯಿತು. ರೋಗ ಯಾವುದೆಂದು ತಿಳಿದನಂತರ ಚಿಕಿತ್ಸೋದು ಕಷ್ಟವೇನಲ್ಲ. ಆದರೆ ಚಿಕಿತ್ಸೆಯ ವಿಧಾನಕ್ಕೆ ಪ್ರಾಮುಖ್ಯತೆ ಇದೆ.

ವಿಜಯ್‌ನನ್ನು ಕರೆದು ''ನೋಡಿ ವಿಜಯ್, ಅದೃಷ್ಟವಶಾತ್ ನಿಮಗೆ ಭಯಾನಕ ರೋಗವೇನೂ ಅಂಟಿಲ್ಲ. ಈ ರೀತಿಯ ಅನೈತಿಕ ಸಂಬಂಧಗಳನ್ನು ಮಾಡಬಾರದು. ನೀವು ಎಂಥ ನಿರೋಧ್ ಬಳಸಿದರೂ ತೊಂದರೆ ತಪ್ಪಿದ್ದಲ್ಲ. ಈ HIV, HBV ವೈರಸ್‌ಗಳು ಜೊಲ್ಲುರಸದಲ್ಲೂ, ಕಣ್ಣೀರಿನಲ್ಲೂ, ಯೋನಿರಸದಲ್ಲೂ, ರಕ್ತದಲ್ಲೂ, ಮೂಗಿನಿಂದ ಬಂದ ರಸದಲ್ಲೂ ಇನ್ನೂ ಇತರೆ ದೇಹವು ಸ್ರವಿಸುವ ರಸಗಳಲ್ಲಿ ಇರುವ ಸಾಧ್ಯತೆ ಇದೆ. ನೀವು ನಿರೋಧ್ ಹಾಕಿದೊಡನೆ ಮುತ್ತಿಕ್ಕದೆ, ಚೀಪದೆ ಸಂಭೋಗ ನಡೆಸುವಿರೆ ? ಹಾಗೇನೂ ಇಲ್ಲವಲ್ಲ! ಇರಲಿ ಆ ವಿಚಾರ ಬಿಡಿ. ಮಾಡಿದ ತಪ್ಪನ್ನೇ ಮತ್ತೆ ಮಾಡಬಾರದು'' ಎಂದೆ.

ಮತ್ತೆ ಹೇಳಿದೆ ''ಈಗ ನಿಮಗಿರುವ ರೋಗದ ನಿವಾರಣೆ ಆಗಬೇಕಾದರೆ ನೀವು ಮತ್ತು ನಿಮ್ಮ ಹೆಂಡತಿ ಇಬ್ಬರೂ ಒಮ್ಮೆಯೇ ಚಿಕಿತ್ಸೆಗೆ ಒಳಪಡಬೇಕು. ಆಗಲೇ ಈ ರೋಗ ನಿರ್ಮೂಲನೆ ಆಗಲಿಕ್ಕೆ ಸಾಧ್ಯ'' ವಿಜಯ್ ''ಆಗಲಿ ಸಾರ್, ಈಗ ನನಗೆ ಇಂಜಕ್ಷನ್, ಮಾತ್ರೆ ಬರೆದು ಕೊಡಿ. ತಂದು ಹಾಕಿಸಿಕೊಂಡು ಹೋಗುತ್ತೇನೆ. ನಂತರ ನನ್ನ ಹೆಂಡತಿಯನ್ನು ಕರೆದು ತರುತ್ತೇನೆ.'' ಎಂದು ಹೇಳಿದ. ನಾನು

''ಆಯಿತು'' ಎಂದು ಎಲ್ಲವನ್ನೂ ಬರೆದು ಕೊಟ್ಟು ಇಂಜಕ್ಷನ್ ಹಾಕಿ ''ನಿಮ್ಮ ಹೆಂಡತಿಗೂ ಚಿಕಿತ್ಸೆ ಕೊಡಿಸೋದು ಮರೆಯಬೇಡಿ'' ಎಂದು ಹೇಳಿ ಕಳುಹಿಸಿದೆ.

ವಿಜಯ್ ಬರುತ್ತೇನೆಂದು ಹೋದವನು ಈ ಕಡೆ ತಿರುಗಲೇ ಇಲ್ಲ. ಒಂದು ವಾರವಾಯಿತು. ಈತನಿಗೆ ನಾನು ಕೊಟ್ಟ ಚಿಕಿತ್ಸೆ ಫಲಿಸಿತೋ ಇಲ್ಲವೋ ಎಂಬ ಅನುಮಾನ ನನಗೆ ಬಂತು.

ಒಂದು ದಿನ ವಿಜಯ್ ಇದ್ದಕ್ಕಿದ್ದಂತೆ ಪ್ರತ್ಯಕ್ಷನಾದ. ''ತುಂಬಾ ಥ್ಯಾಂಕ್ಸ್ ಸಾರ್ ಆ ವೇದನೆ , ಆ ಉರಿತ ನನ್ನನ್ನು ಕಂಗೆಡಿಸಿತ್ತು. ಮುಂದೇನು ಮಾಡುವುದೆಂದು ದಾರಿ ತೋರದಾಗಿತ್ತು. ನೀವು ಈ ಊರಿಗೆ ಬಂದು ಕ್ಲಿನಿಕ್ ತೆಗೆದದ್ದು ತುಂಬಾ ಸಹಾಯವಾಯಿತು. ದಾವಣಗೆರೆಗೋ, ದುರ್ಗಕ್ಕೋ ಹೋಗೋದು ತಪ್ಪಿತು. ನೀವು ತುಂಬ ಒಳ್ಳೆಯ ಚಿಕಿತ್ಸೆ ಕೊಟ್ಟಿರಿ'' ಎಂದು ಕೃತಜ್ಞತಾಭಾವದಿಂದ ತನ್ನ ವಂದನೆಗಳನ್ನು ಸೂಚಿಸಿದ. ನನಗೂ ಸಂತೋಷವಾಯಿತು. ಆದರೆ ನಿಮ್ಮ ಹೆಂಡತಿಯನ್ನು ಕರೆದು ತರೋದನ್ನ ಮರೆತಿರಲ್ಲ, ನೀವು ಮಾಡಿದ್ದು ತಪ್ಪು'' ಎಂದೆ. ವಿಜಯ್ ''ನನ್ನವಳು ಮನೆಬಿಟ್ಟು ಹೊರಗೆ ಬರೋದೇ ಇಲ್ಲ ಸಾರ್. ಈ ಆಸ್ಪತ್ರೆ ಕಡೆಗೆ ಅಂದ್ರೆ ತಿರುಗಿ ಸಹ ನೋಡೋದಿಲ್ಲ. ಈ ಮಾತ್ರೆ ಇಂಜಕ್ಷನ್ ಅಂದರೆ ಹೆದರಿಕೆ. ಏನು ಮಾಡಲಿ?'' ಎಂದ. ನಾನು 'ಈ ಸಾಮಾನ್ಯ ಜನರ ತಿಳುವಳಿಕೆಯೇ ಇಷ್ಟು ; ಈ ಗೊನೋರಿಯಾದ ಬಗ್ಗೆ ಇವರಿಗೇನು ಗೊತ್ತು ? ಈ ಅಂಟುಜಾಡ್ಯ ಅವನ ಹೆಂಡತಿಗೂ ತಗುಲಿರದೆ ಇರದು' ಎಂದು ಮನಸ್ಸಿನಲ್ಲಿ ಅಂದುಕೊಂಡು ಹೇಳಿದೆ ''ನೋಡಿ ವಿಜಯ್ ನಾವು ಹೇಳೋದನ್ನ ಹೇಳುತ್ತೇವೆ. ನಿಮ್ಮ ಒಳ್ಳೆಯದಕ್ಕಾಗಿ ನಿಜವನ್ನೇ ಹೇಳುತ್ತೇವೆ. ಸರಿಯಾಗಿ ಚಿಕಿತ್ಸೆ ಪಡೆಯದ ಹೊರತು ಈ ಗೊನೋರಿಯಾ ನಿಮ್ಮನ್ನು ಬಿಡೋದಿಲ್ಲ'' ಎಂದೆ. ಆದರೂ ವಿಜಯ್ ಈಗ ನಾನು ಹಳಿದ ಮಾತು ಕೇಳೋ ಸ್ಥಿತಿಯಲ್ಲಿ ಇರಲಿಲ್ಲ. ಏಕೆಂದರೆ ಅವನಿಗೆ ಈಗಾಗಲೇ ಈ ರೋಗ ಸಂಪೂರ್ಣ ವಾಸಿ ಆಗಿತ್ತು.

ಒಂದು ತಿಂಗಳಾಯಿತು. ಇದ್ದಕ್ಕಿದ್ದಂತೆ ನಮ್ಮ ಕ್ಲಿನಿಕ್ಕಿನ ಎದುರು ವಿಜಯ್‌ನ ಸ್ಕೂಟರ್ ಬಂದು ನಿಂತಿತು. ನಾನು ಅಂದುಕೊಂಡಿದ್ದ ಹಾಗೇನೆ ಆಯಿತು. ಏಕೆಂದರೆ ಆತ ಹೆಂಡತಿಗೆ ಚಿಕಿತ್ಸೆ ಕೊಡಿಸಿರಲಿಲ್ಲವಲ್ಲ.

ನಾನು ವಿಜಯ್‌ಗೆ ಕುಳಿತುಕೊಳ್ಳಲು ಹೇಳಿ ''ಏನು ವಿಜಯ್‌ರವರೆ ಮತ್ತೆ ನಿಮ್ಮ ಮುಖ ಸಪ್ಪಗಿದೆ. ಮತ್ತೆ ಏನಾದರೂ ತೊಂದರೆ ಮಾಡಿಕೊಂಡಿರಾ ? ಮತ್ತೆಲ್ಲಾದರೂ ದುಷ್ಟರ ಬಲೆಗೆ ಬಿದ್ದಿರಾ ?'' ಎಂದೆ. ವಿಜಯ್ ಹೇಳಿದ ''ಇಲ್ಲ ಸಾರ್ ನಿಜವಾಗಿಯೂ ಆ ಸಹವಾಸ ಮತ್ತೆ ಮಾಡಿಲ್ಲ. ಆದರೂ ಈ ರೋಗ ಮತ್ತೆ ಕಾಣಿಸಿಕೊಂಡಿದೆ. ಏನು ಮಾಡಲಿ?'' ನಾನು ಹೇಳಿದೆ ''ನೋಡಿ ವಿಜಯ್, ಡಾಕ್ಟರು ಏನು ಹೇಳಿದರೂ ನಿಮ್ಮ ಒಳ್ಳೆಯದಕ್ಕಾಗಿಯೇ ಹೇಳೋದು. ನೀವು ನಿಮ್ಮ ಹೆಂಡತಿಗೂ ಕರೆತಂದು ಇಂಜಕ್ಷನ್ ಹಾಕಿಸಿ ಎಂದು ನಾನು ಹೇಳಿದರೂ ಕರೆತರಲಿಲ್ಲ. ನೋಡಿ, ಅಂದು ನಿಮ್ಮ ಮರ್ಮಾಂಗ ಪರೀಕ್ಷೆ ಮಾಡುವಾಗ ನೀವು ನಿಮ್ಮ ಮರ್ಮಾಂಗ ಮುಟ್ಟಿದಿರಿ. ಅದನ್ನ ಮುಟ್ಟಿದಾಗಿನಿಂದ ನೀವು ಸಂಪೂರ್ಣ ಸೋಪಿನಲ್ಲಿ ಕೈ ತೊಳೆಯುವವರೆಗೂ ನನ್ನ ಟೇಬಲ್ ಅನ್ನೂ ಮುಟ್ಟಬೇಡಿ ಎಂದೆ. ಏಕೆ ಗೊತ್ತೆ? ಈ ಗೊನೋರಿಯಾ ಗೋನೋಕಾಕೈ ಎಂಬ ಸೂಕ್ಷ್ಮಜೀವಿಯ ಸೋಂಕಿನಿಂದ ಬರುತ್ತದೆ. ಅದು ಲೈಂಗಿಕವಾಗಿ ಪ್ರಸಾರವಾಗುತ್ತದೆ. ಆದರೆ ಈ ರೋಗಾಣು ನಿಮ್ಮ ಶಿಶ್ನಮಣಿಯಿಂದ ಬರೋ ಬಿಳಿದ್ರವದಲ್ಲಿ ಇರುತ್ತವೆ. ಈ ಬಿಳಿದ್ರವವನ್ನು ನೀವು ಮುಟ್ಟಿದರೆ ನಿಮ್ಮ ಕೈಗೆ ಈ ಗೋನೋಕಾಕೈ ಅಂಟಿಕೊಳ್ಳುತ್ತವೆ. ಹೀಗೆ ಅಂಟಿಕೊಂಡಿದ್ದಾಗ, ನಿಮ್ಮ ಕೈಯನ್ನ ನೀವು ಆಕಸ್ಮಾತ್ ಕಣ್ಣಿಗೆ ತಾಗಿಸಿದರೆ ಈ ರೋಗಾಣು ಕಣ್ಣಿಗೆ ವರ್ಗಾಯಿಸಲ್ಪಡುತ್ತವೆ. ಅಲ್ಲಿಯೂ ನಿಮಗೆ ಹಾನಿಯುಂಟು ಮಾಡಬಲ್ಲವು. ಹಾಗೆ ಮೂಗಿಗೆ, ಬಾಯಿಗೆ ಇಲ್ಲವೆ ಯಾವುದೇ ಗಾಯಕ್ಕೆ ತಗುಲಿದರೆ ಅಲ್ಲಿಯೂ ವಂಶಾಭಿವೃದ್ಧಿ ಮಾಡಿ ರೋಗವನ್ನು ತೀವ್ರಗೊಳಿಸಬಲ್ಲವು. ಅಲ್ಲದೆ ರಕ್ತವನ್ನು ಸೇರಿದರೆ ಕೀಲು, ಮೂಳೆ, ಮೆದುಳು ಹೀಗೆ ಪ್ರಸರಣ ಹೊಂದಿ ಅನೇಕ ಅಂಗಗಳನ್ನು ಪ್ರವೇಶಿಸಬಲ್ಲವು. ತೊಂದರೆಯನ್ನು ಉಂಟುಮಾಡಬಲ್ಲವು. ಅದು ಹೋಗಲಿಬಿಡಿ, ನೀವು ಪ್ರತಿಸಲವೂ ನಿಮ್ಮ ಹೆಂಡತಿಯನ್ನು ಸೇರುವಾಗ ನಿರೋಧ್ ಬಳಸುತ್ತೀರಿ. ನೀವು ಈ ನಿರೋಧ್ ನಿಮ್ಮ ಶಿಶ್ನಕ್ಕೆ ತೊಡಿಸುವಾಗ ಈ ರೋಗಾಣುಯುಕ್ತ ರಸ ನಿಮ್ಮ ಕೈಗೆ ತಗುಲುತ್ತದೆ. ಹಾಗೆ ತಗುಲಿದ್ದುದು ನಿರೋಧ್ ಮೇಲೆಯೂ ಈ ರೋಗಾಣುಗಳನ್ನು ಹರಡುತ್ತದೆ. ಆಗ ನೀವು ನಿಮ್ಮ ಹೆಂಡತಿಯನ್ನು ನಿರ್ಭೀತಿಯಿಂದ ಕೂಡುತ್ತೀರಿ. ಆದ್ದರಿಂದ ಈ ರೋಗಾಣು ನಿಮ್ಮ ಹೆಂಡತಿಯ ಯೋನಿಗೆ ವರ್ಗಾವಣೆಯಾಗುತ್ತವೆ. ಹೀಗೆ ವರ್ಗಾವಣೆಯಾದಾಗ ಅಲ್ಲಿ ಮನೆ ಮಾಡಿ ಈ ರೋಗಾಣು ವಂಶಾಭಿವೃದ್ಧಿ ಮಾಡುತ್ತವೆ. ಒಂದು ವಿಷಯ ಗೊತ್ತೆ? ಈ ರೋಗಾಣು ಯೋನಿಗೆ ಯಾವ ತೊಂದರೆಯನ್ನೂ ಮಾಡಲಾರದು. ಆದುದರಿಂದ ಈ ಗಂಡಸರು ಅಂದವಾಗಿ, ಚಂದವಾಗಿ, ಮೇಲ್ನೋಟಕ್ಕೆ ಶುಚಿಯಾಗಿ ಕಾಣೋ ವೇಶ್ಯೆಯರನ್ನು ಸೇರಿದಾಗ ಈ ರೋಗಾಣು ಗಂಡಸಿಗೆ ಹರಡುತ್ತದೆ. ಪಡಬಾರದ ಕಷ್ಟಪಡುತ್ತಾರೆ. ಅದಿರಲಿ, ಈ ಗಂಡಸರು ಮಾಡೋ ತಪ್ಪಿಗೆ ಹೆಂಡತಿಯರೂ ಈ ರೋಗಾಣುವನ್ನು ಪಡೆಯುತ್ತಾರೆ. ಈ ರೀತಿ ಮಾಡೋದರಿಂದ ನಿಮ್ಮ ಕುಟುಂಬಕ್ಕೊಂದು ಅಂಟುಜಾಡ್ಯ ಅಂಟಿಕೊಳ್ಳುತ್ತದೆ. ಹೀಗಿರುವಾಗ ಆಕೆ ಏನಾದರೂ ಗರ್ಭಿಣಿ ಆದರೆ ಹೆರಿಗೆ ಆಗುವಾಗ ಹುಟ್ಟುವ ಶಿಶುವಿನ ಕಣ್ಣಿಗೆ ಈ ರೋಗಾಣು ಹರಡುತ್ತದೆ. ಇದರಿಂದ ಮಗು ಕುರುಡಾಗುವ ಸಂಭವವಿರುತ್ತದೆ. ಈ ರೀತಿ ಬರುವ ಕುರುಡುತನವನ್ನು ಬಹಳ ಸುಲಭವಾಗಿ ತಡೆಗಟ್ಟಬಹುದು. ಅದಕ್ಕೆ ರೇಡಿಯೋ, ಟೀವಿಯಲ್ಲಿ ಆಗಾಗ ಹೇಳೋದು; ಎಲ್ಲಾ ಹೆರಿಗೆಗಳನ್ನೂ ವೈದ್ಯರಿಂದಲೋ ಇಲ್ಲವೆ ತರಬೇತಿ ಪಡೆದ ದಾದಿಯರಿಂದಲೋ ಮಾಡಿಸಿ ಆಗ, ಹುಟ್ಟುವ ಎಲ್ಲಾ ಮಕ್ಕಳಿಗೂ ಪ್ರಥಮ ಚಿಕಿತ್ಸೆ ಮಾಡಿ ಸಿಲ್ವರ್ ನೈಟ್ರೇಟ್ ದ್ರಾವಣದಿಂದ ಕಣ್ಣನ್ನು ತೊಳೆದು, ಕಣ್ಣಿಗೆ ಪೆನ್ಸಿಲಿನ್ ಯುಕ್ತ ದ್ರಾವಣ ಹಾಕಿ ಶಿಶು ಕಣ್ ಗೊನೋರಿಯಾ (ಆಪ್ತಾಲ್ಮಿಯಾ ನಿಯೋನ್ಯಾಟೋರಮ್) ಬರದಂತೆ ಮಾಡುತ್ತಾರೆ. ಕುರುಡುತನವನ್ನು ತಡೆ ಗಟ್ಟುತ್ತಾರೆ. ಸೂಜಿಯಲ್ಲಿ ಆಗೋ ಕೆಲಸ ಇದು. ಈಗ ನಿರ್ಲಕ್ಷಿಸಿದರೆ ಕೊಡಲಿ (ಆಪರೇಷನ್) ಇತ್ಯಾದಿ ಬೇಕಾದೀತು. ಹೋಗಲಿ ಬಿಡಿ ವಿಜಯ್ ಈಗಲಾದರೂ ಅರ್ಥವಾಯಿತೇ, ಡಾಕ್ಟರ್ ಹೇಳೋ ಒಂದೊಂದು ಮಾತಿಗೂ ಅದೆಷ್ಟು ಬೆಲೆ ಇದೆ ಎಂದು ? ಎಲ್ಲದಕ್ಕೂ ಒಂದು ಕ್ರಮವಿದೆ. ಈ ಕ್ರಮದಂತೆ ಹೋದರೆ ರೋಗಗಳನ್ನು ವಾಸಿಮಾಡೋದು ಅಥವಾ ತಡೆಯೋದು ಬಹಳ ಸುಲಭ'' ಎಂದೆ.

ವಿಜಯ್ ಈ ಬಾರಿ ನಾನು ಹೇಳಿದಂತೆಯೇ ಕೇಳಿದ. ತನ್ನ ಹೆಂಡತಿಯನ್ನು ಕರೆತಂದು ಇಬ್ಬರಿಗೂ ಒಟ್ಟಿಗೆ ಇಂಜಕ್ಷನ್ ಹಾಕಿಸಿಕೊಂಡು ಹೋದ. ಮತ್ತೆ ಆತನ ಮುಖ ನೋಡುವ ಅವಕಾಶ ಸಿಗಲಿಲ್ಲ. ಒಂದು ಕುಟುಂಬವನ್ನು ಅಂಟುಜಾಡ್ಯದಿಂದ ದೂರಮಾಡಿದ ಸಂತೋಷ ನನ್ನದಾಗಿತ್ತು.

**ಲೈಂಗಿಕ ರೋಗಗಳು ದಂಪತಿಗಳಲ್ಲಿ ಯಾರೊಬ್ಬರಿಗೆ ಅಂಟಿದರೂ ಇಬ್ಬರೂ ಚಿಕಿತ್ಸೆ ಪಡೆಯೋದು ಅತ್ಯಗತ್ಯ.**

ಬೇಜವಾಬ್ದಾರಿತನ

# ಪೋಲಿಯೊ ನಿರ್ಮೂಲನ ನಮ್ಮಿಂದಾಗದೆ?

ಕುಂದನ್

'ಪೋಲಿಯೊ' ಎಂಬ ಮಹಾಮಾರಿ ಸೋಂಕು ರೋಗವು ಇಂದಿಗೂ ಭಾರತದ ಮಕ್ಕಳನ್ನು ಕಾಡುತ್ತಿದೆ. ಮೌಖಿಕವಾಗಿ 'ಪೋಲಿಯೊ ಡ್ರಾಪ್' ಔಷಧಿಗಳ ಮೂಲಕ ವ್ಯಾಪಕವಾಗಿ ಸರಕಾರವು ಮಕ್ಕಳಿಗೆ ಪರಿಹಾರ ನೀಡಿ ಮುಂಜಾಗ್ರತೆಯ ಕ್ರಮಗಳನ್ನು ಕೈಕೊಂಡಿದ್ದರೂ ಅದನ್ನು ತಡೆಯಲು ಆಗಿಲ್ಲ. ಇದಕ್ಕೆ ಕಾರಣಗಳು ಪೋಲಿಯೊ ಔಷಧಿಯ ಶೇಖರಣೆಯ ನ್ಯೂನತೆಗಳು, ಸರಕಾರ ಮತ್ತು ಅಧಿಕಾರಿಗಳ ಅಸಡ್ಡೆ ಎಂದು ಈಗ ಬಯಲಾಗಿದೆ.

ವಿಶ್ವ ಆರೋಗ್ಯ ಸಂಘಟನೆ (World Health Organisation - WHO) ಯು ೨,೦೦೦ನೇ ಇಸವಿಯ ವೇಳೆಗೆ ವಿಶ್ವದಿಂದ ಪೋಲಿಯೊ ರೋಗವನ್ನು ಸಂಪೂರ್ಣವಾಗಿ ನಿರ್ಮೂಲ ಮಾಡಲು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಜಗತ್ತಿನ ಪೋಲಿಯೊ ಪ್ರಕರಣಗಳಲ್ಲಿ ಮೂರನೆಯ ಒಂದು ಭಾಗ ಭಾರತದಲ್ಲಿ ಕಾಣಿಸುತ್ತವೆ. ವಿಶ್ವ ಆರೋಗ್ಯ ಸಂಘಟನೆಯ ಪ್ರಯತ್ನಗಳು ಭಾರತದಲ್ಲಿ ವಿಫಲವಾಗಿವೆ. ಈ ವೈಫಲ್ಯಗಳಿಗೆ ಕಾರಣಗಳನ್ನು ತಿಳಿಯುವ ಮೊದಲು ಪೋಲಿಯೊ ವ್ಯಾಧಿಯ ಹಿನ್ನೆಲೆಯನ್ನು ತಿಳಿಯೋಣ.

ಪೋಲಿಯೊ ರೋಗವು ಒಂದು ಸೂಕ್ಷ್ಮ ಸೋಂಕು ಜೀವಾಣುಗಳಿಂದ ಬರುತ್ತದೆ. ಈ ಬ್ಯಾಕ್ಟೀರಿಯಾಗಳ ಗಾತ್ರ ಸುಮಾರು ೨೮ ಮಿಲಿ ಮೈಕ್ರಾನ್(ಒಂದು ಮಿಲಿಮೀಟರಿನ ಸಾವಿರದ ಒಂದು ಭಾಗ)ಗಳಷ್ಟು. ವಾತಾವರಣದ ವಿಷಮತೆ, ಕೆಮ್ಮು, ನೆಗಡಿ, ಕರುಳುರೋಗ, ಅನೈರ್ಮಲ್ಯತೆ, ನೊಣಗಳ ಹಾವಳಿ ಇತ್ಯಾದಿಗಳು ಈ ರೋಗ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಆರು ತಿಂಗಳಿಂದ ೧೫ ವರ್ಷದೊಳಗಿನ ವಯಸ್ಸಿನಲ್ಲಿ ರೋಗದ



ಆಕ್ರಮಣಶೀಲತೆ ಹೆಚ್ಚು.

ರೋಗಾಣುಗಳು ಕೇಂದ್ರ ನರಮಂಡಲದಲ್ಲಿ ಅದರಲ್ಲೂ ಮಿದುಳುಬಳ್ಳಿಯ ಮುಂದಿನ ಕೊಂಬು ಮತ್ತು ಮಿದುಳುಕಾಂಡದ ಚಲನ ಕೇಂದ್ರಗಳಲ್ಲಿ ಬೆಳೆಯುತ್ತವೆ. ಅಲ್ಲದೆ ಮೂಗು, ಗಂಟಲು ಲೋಳ್ಪರೆ, ಕರುಳಿನ ಲೋಳ್ಪರೆಗಳಿಂದ ರೋಗಾಣುಗಳು ವಿಸರ್ಜನೆಗೊಳ್ಳುತ್ತವೆ.

ಕೆಮ್ಮುವುದು, ಸೀನುವುದು, ಉಗುಳುವುದು, ಮಾತನಾಡುವುದು ಶ್ವಾಸ ಬಿಡುವುದು ಮತ್ತು ಆಕಳಿಕೆಯಿಂದ ಕೂಡ ಪೋಲಿಯೊ ವಿಷಕಣಗಳು ಹೊರಗಿನ ಪರಿಸರವನ್ನು ಸೇರುತ್ತವೆ.

ಈ ರೋಗದ ಹುದುಗುವ ಕಾಲ ಹದಿನಾಲ್ಕು ದಿನಗಳು. ಒಮ್ಮೆಲೇ ಕಾಣಿಸಿಕೊಳ್ಳುವ ಜ್ವರದ ಮೂಲಕ ಈ ರೋಗವು ತನ್ನ ಮೊದಲಿನ ಸುಳಿವನ್ನು ಹೊರಗೆಡಹುವುದು. ಜ್ವರದ ಮಟ್ಟ ಸುಮಾರು ೩೯° ಸೆ.ನಿಂದ ೪೦° ಸೆ.ವರೆಗೆ ಇರಬಹುದು. ಅದರ ಜೊತೆಗೆ ಮೈಕೈನೋವು, ತಲೆಸಿಡಿತ, ಓಕರಿಕೆ, ವಾಂತಿ ಮತ್ತು ಗಂಟಲುಬೇನೆಗಳು ತಲೆದೋರುವುವು. ೨೪ ಗಂಟೆಗಳ ಬಳಿಕ ಕೈಕಾಲು, ಸ್ನಾಯುಗಳ ಸೆಳೆತ - ಬಿಗಿತಗಳಿಗೆ ವ್ಯಕ್ತಿಯು ತುತ್ತಾಗಬಹುದು. ಕೆಲವು ದಿನಗಳ ನಂತರ ಮಗು ಮತ್ತೆ ಮೊದಲಿನಂತೆ ಓಡಾಡಬಲ್ಲದು. ರೋಗಿಯಲ್ಲಿ ರೋಗದ ಅವಶೇಷಗಳು ಯಾವುವೂ ಉಳಿಯುವುದಿಲ್ಲ. ಏಕೆಂದರೆ ಈ ರೋಗಾಣುಗಳು ಮಲವಿಸರ್ಜನೆಯ ಮೂಲಕ ಹೊರಸಾಗುತ್ತಲೇ ಇರುತ್ತವೆ.

ರೋಗವು ಉಗ್ರಸ್ವರೂಪ ತಲುಪಿದಾಗಲೇ ಅಪಾಯ. ಆಗ ತಲೆನೋವು, ಓಕರಿಕೆ, ವಾಂತಿಗಳು ಸಹಿಸಲಸಾಧ್ಯವಾಗುತ್ತವೆ. ಕತ್ತು, ಬೆನ್ನುಹುರಿ ಮತ್ತು ಅಂಗಾಂಗಗಳ ಸ್ನಾಯುಗಳು ಬಿಗಿಯುವುದರಿಂದ ಕುತ್ತಿಗೆ, ಬೆನ್ನು ಸೆಟೆದಂತೆ ತೋರಬಹುದು. ಅದರಿಂದಾಗಿ ಬೆನ್ನು ಬಾಗಿಸಲು ಆಗುವುದಿಲ್ಲ. ಈ ಹಂತದಲ್ಲಿ ರೋಗಿಯು ಮನದ ಸಹನೆ ಕಳೆದುಕೊಂಡು ತಳಮಳಗೊಳ್ಳುತ್ತಾನೆ. ರೋಗಿಯ ತೋಳು ಇಲ್ಲವೆ ಕಾಲುಗಳ ಸ್ನಾಯುಗಳು ನಿಸ್ಸತ್ವಗೊಂಡು ಆ ಭಾಗದ ಮೇಲಿನ ಸ್ವಯಂಹಿಡಿತ ತಪ್ಪುತ್ತದೆ.

ಇದರ ಇನ್ನಷ್ಟು ದುಷ್ಪರಿಣಾಮಗಳೆಂದರೆ : ಮೂತ್ರಕೋಶದ ಮೇಲಿನ ಹತೋಟಿ ತಪ್ಪುವುದು, ಮಲಬದ್ಧತೆ, ಬುದ್ಧಿಮಾಂದ್ಯ,

ದೃಷ್ಟಿಮಾಂದ್ಯ, ಉಸಿರಾಟದ ತೊಂದರೆ, ರಕ್ತದೊತ್ತಡ ಏರಿಕೆ, ಧ್ವನಿಪೆಟ್ಟಿಗೆಯ ಸ್ನಾಯುಗಳ ನಿಶ್ಯಕ್ತಿಯಿಂದ ಧ್ವನಿಕ್ಷೀಣವಾಗಿ ಕೊನೆಗೆ ಧ್ವನಿ ಉಡುಗುವುದು ಮತ್ತು ಕರುಳಿನಲ್ಲಿ ರಕ್ತಸ್ರಾವ.

ಈ ರೋಗ ಒಮ್ಮೆ ತಗುಲಿದರೆ ಅದರ ನಿವಾರಣೆಗಾಗಿ ಔಷಧಿಗಳಿಲ್ಲ. ಆದರೆ ರೋಗ ತಗುಲದಂತೆ ಪ್ರತಿಬಂಧಕ ಉಪಾಯಗಳಿವೆ. ಅವುಗಳಲ್ಲಿ ಒಂದು ಎಂದರೆ ಮಗುವಿಗೆ ಮೊದಲೇ ಪೋಲಿಯೋ ಹನಿಗಳನ್ನು ಕೊಟ್ಟು ಅದರ ಶರೀರದಲ್ಲಿ ರೋಗ ನಿರೋಧಕ ಶಕ್ತಿಯನ್ನು ಬೆಳೆಸುವುದು.

ಈಗ ನಮ್ಮ ವೈಫಲ್ಯಗಳಿಗೆ ಮರಳೋಣ. ಈ ವೈಫಲ್ಯಗಳು ಖ್ಯಾತ 'ನ್ಯೂಸೈಂಟಿಸ್ಟ್' ನಿಯತಕಾಲಿಕದಲ್ಲಿ ವರದಿಯಾಗಿವೆ.

ಉತ್ತರ ಪ್ರದೇಶದ ಆರೋಗ್ಯ ಇಲಾಖೆಯ ಜಂಟಿ ನಿರ್ದೇಶಕರಾದ ಅಶೋಕ್ ತ್ಯಾಗಿ ಅವರು ಕಳೆದ ಜೂನ್ ತಿಂಗಳಲ್ಲಿ ಪೋಲಿಯೊ ಲಸಿಕೆಯ ಒಂದು ಶೀಶೆಯ ಮೇಲಿನ ಚೀಟಿಯನ್ನು ಗಮನಿಸುತ್ತಿದ್ದಾಗ ಏನೋ ನ್ಯೂನತೆ ಕಂಡು ಬಂದಿತು. ಅದರ ಬಣ್ಣವು ಭಾಗಶಃ ಬದಲಾಗಿತ್ತು. ಶೀಶೆಯನ್ನು ಹೆಚ್ಚಿನ ಉಷ್ಣತಾಮಾನದಲ್ಲಿ ಶೇಖರಣೆ ಮಾಡಿದರೆ ಹೀಗಾಗುತ್ತದೆ. ಆಗ ಲಸಿಕೆಯು ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಇಂಥ ನಿರುಪಯುಕ್ತ ಲಸಿಕೆಯನ್ನು ದೆಹಲಿಯ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ೪೦,೦೦೦ ಮಕ್ಕಳಿಗೆ ನೀಡಲಾಗಿದೆಯೆಂದು ಗೊತ್ತಾಯಿತು.

ಭಾರತದ ಆರೋಗ್ಯ ಮಂತ್ರಿಗಳು ನಿರುಪಯುಕ್ತ ಪೋಲಿಯೋ ಲಸಿಕೆಯ ಉಳಿದ ಶೀಶೆಗಳನ್ನು ಮುಟ್ಟುಗೋಲು ಹಾಕಿ ಈ ಲಸಿಕೆ ಪಡೆದ ಮಕ್ಕಳಿಗೆ ಮರುರೋಗನಿರೋಧಕ ಲಸಿಕೆಯನ್ನು ನೀಡಲು ಆದೇಶ ಹೊರಡಿಸಿದ್ದಾರೆ. ಶೀಶೆಗಳ ಮೇಲಿನ ಚೀಟಿಗಳನ್ನು ಓದುವ ತರಬೇತಿಯನ್ನು ಸಿಬ್ಬಂದಿಗಳಿಗೆ ಏಕೆ ಕೊಟ್ಟಿಲ್ಲವೆಂಬುದನ್ನು ತನಿಖೆ ಮಾಡಲಾಗುತ್ತದೆ.

ಪರಿಣಾಮಕಾರಿಯಲ್ಲದ ಲಸಿಕೆಯ ಬಳಕೆ ಭಾರತದಲ್ಲಿ ವ್ಯಾಪಕವಾಗಿದೆಯೆಂಬ ಅನುಮಾನವೂ ಇದೆ. ಏಕೆಂದರೆ ಈ ಲಸಿಕೆಯನ್ನು ಸೇವಿಸಿದ ನಂತರವೂ ಅನೇಕ ಮಕ್ಕಳು ಪೋಲಿಯೊ ರೋಗಕ್ಕೆ ತುತ್ತಾಗಿರುವ ಸಾಕ್ಷ್ಯಗಳು ದೊರೆತಿವೆ.

ಪರಿಣತರ ಪ್ರಕಾರ ಪೋಲಿಯೊ ಲಸಿಕೆಯ ಗುಣಮಟ್ಟವನ್ನು ನಿರ್ಧರಿಸಲು ಸರಿಯಾಗಿ ಉಪಕರಣಗಳಿಲ್ಲ. ಲಭ್ಯವಿರುವ ಕೆಲವೇ ಉಪಕರಣಗಳನ್ನು ಬಳಸುವಲ್ಲೂ ಅಸಡ್ಡೆಯನ್ನು ತೋರಲಾಗತ್ತದೆ.

ಲಸಿಕೆಯನ್ನು ಸದಾ ಶೀತಲ ಸ್ಥಿತಿಯಲ್ಲೇ ಶೇಖರಣೆ ಮಾಡಿ ಇಡಬೇಕು. ಆದರೆ ಶೈತ್ಯಾಗಾರಗಳು ಮತ್ತು ಇತರ ಹವಾನಿಯಂತ್ರಣ ಉಪಕರಣಗಳು ಸದಾ ಕಾರ್ಯಾಚರಣೆಯಲ್ಲಿರಬೇಕು. ಅಂದರೆ ಇವುಗಳಿಗೆ ಸದಾ ವಿದ್ಯುತ್ ಪೂರೈಕೆ ಇರಬೇಕು. ಭಾರತದಲ್ಲಿ ಇಂತಹ ನಿರಂತರ ವಿದ್ಯುತ್ ಪೂರೈಕೆಯು ಎಲ್ಲಿದೆ ? ಗಂಟೆಗಳ ಕಾಲ ಇಲ್ಲವೆ ಕೆಲವೊಮ್ಮೆ ದಿನಗಟ್ಟಲೆ ಇರುವ ವಿದ್ಯುತ್ ನಿಲುಗಡೆಯಿಂದಾಗಿ ಶೇಖರಣಾ ಕೊಠಡಿಯ ಉಷ್ಣತಾಮಾನವು ಹೆಚ್ಚಿ ಲಸಿಕೆಯು ಒಡೆದು ಹಾಳಾಗಿಬಿಡುತ್ತದೆ. ಅದು ತನ್ನ ಗುಣಮಟ್ಟವನ್ನು ಕಾಯ್ದುಕೊಳ್ಳಬೇಕಾದರೆ ಅದನ್ನು ೨° ಸೆ.ನಿಂದ ೮° ಸೆ. ಉಷ್ಣತಾಮಾನದಲ್ಲೇ ಇಡಬೇಕು. ಇಂಥ ಅನೇಕ ಔಷಧಿ, ಲಸಿಕೆಗಳನ್ನು ಭಾರತದ ಅನೇಕ ಔಷಧ ಅಂಗಡಿಗಳಲ್ಲಿ ಮುಕ್ತವಾಗಿ ಹೊರಗಿಟ್ಟು ಮಾರುವುದನ್ನು ನೀವು ಗಮನಿಸಿರಬೇಕು.

ವಿಶ್ವ ಆರೋಗ್ಯ ಸಂಘಟನೆಯ ತಾಂತ್ರಿಕ ಅಧಿಕಾರಿಗಳಾದ ಜಾನ್ ಲೈಡ್ ಅವರು ಭಾರತದ ಉಷ್ಣತೆ ಮತ್ತು ವೈಶಾಲ್ಯದ ದೃಷ್ಟಿಯಿಂದ ಲಸಿಕೆಗಳನ್ನು ಆಯಾತ ಮಾಡಿದ ಸಮಯದಿಂದ ಲಸಿಕೆ ನೀಡುವ ಸಮಯದವರೆಗೂ ತಂಪಾಗಿ ಇಡುವುದು ಸಾಧ್ಯವೇ ಇಲ್ಲವೆಂದು ಹೇಳುತ್ತಾರೆ.




ಎಲ್ಲಾ ಲಸಿಕೆಗಳಲ್ಲಿ ಪೋಲಿಯೊ ಲಸಿಕೆಯು ಅತ್ಯಂತ ಅಸ್ಥಿರವಾದುದು.

ಇದೇ ಕಾರಣಕ್ಕಾಗಿ ಪೋಲಿಯೋ ಲಸಿಕೆಯ ಶೀಶೆಯ ಮೇಲಿನ ಚೀಟಿಯು ಬಹಳ ಮಹತ್ವದ್ದು. ಲಸಿಕೆಯು ಉಷ್ಣತೆಗೆ ಎದುರಾಗಿರುವ ಪರಿಣಾಮದ ಒಟ್ಟು ಪ್ರಮಾಣವನ್ನು ಚೀಟಿಯು ತೋರಿಸುತ್ತದೆ. ಲಸಿಕೆಯು ಗುಣನಷ್ಟಕ್ಕೆ ಒಳಗಾದರೆ ಚೀಟಿಯು ಬಣ್ಣವನ್ನು ಬದಲಾಯಿಸಬೇಕು.

ಮುನಿಸೆಫ್, ಡಬ್ಲ್ಯುಎಚ್‌ಓ ಮತ್ತು ಅನೇಕ ಅಂತಾರಾಷ್ಟ್ರೀಯ ಸಂಘಟನೆಗಳು ಜಗತ್ತಿನಿಂದ ಪೋಲಿಯೊ ವ್ಯಾಧಿಯನ್ನು ನಿರ್ಮೂಲ ಮಾಡಲು ವಿವಿಧ ಕಾರ್ಯಾಕ್ರಮಗಳನ್ನು ಹಮ್ಮಿಕೊಂಡಿವೆ. ಆದಾಗ್ಯೂ ಅದು ಬಾಂಗ್ಲಾದೇಶ, ನೇಪಾಳ ಮತ್ತು ಪಾಕಿಸ್ತಾನಗಳಲ್ಲೂ ವ್ಯಾಪಕವಾಗಿದೆ. ನೈಜೀರಿಯಾ, ಇಥಿಯೋಪಿಯಾ, ಸೋಮಾನಿಯಾ ಮತ್ತು ಸುಡಾನ್‌ಗಳಂತಹ ಆಫ್ರಿಕಾ ದೇಶಗಳಲ್ಲೂ ವ್ಯಾಪಕವಾಗಿದೆ. ಯುನಿಸೆಫ್‌ನ 'ಚಿಲ್ಡ್ರನ್ ವ್ಯಾಕ್ಸಿನ್ ಇನಿಷಿಯೇಟಿವ್ ಕಾರ್ಯಕ್ರಮದ ವರದಿಯ ಪ್ರಕಾರ ಪ್ರತಿವರ್ಷ ಪೋಲಿಯೋನಿಂದ ೫೦,೦೦೦ ಜನರು ಅಂಗವಿಕಲರಾಗುತ್ತಾರೆ.

'ಡಬ್ಲ್ಯುಎಚ್‌ಓ' ತನ್ನ ಪ್ರಯತ್ನಗಳನ್ನು ತೀವ್ರಗೊಳಿಸಿದೆ. ಅದಕ್ಕಾಗಿ ಅದು ಇನ್ನೂ ೨.೭ ಬಿಲಿಯನ್ ಡಾಲರ್‌ಗಳಷ್ಟು ಹಣವನ್ನು ಖರ್ಚು ಮಾಡಲಿದೆ. ೨,೦೦೦ ನೇ ಇಸವಿಯ ವೇಳೆಗೆ ಪೋಲಿಯೋ ವ್ಯಾಧಿಯನ್ನು ಸಂಪೂರ್ಣವಾಗಿ ನಿರ್ಮೂಲ ಮಾಡುವಲ್ಲಿ ಅದು ಆಶಾವಾದಿಯಾಗಿದೆ.

❐

೧೯೯೭ರಲ್ಲಿ ವರದಿಯಾದ ಪೋಲಿಯೋ ಪ್ರಕರಣಗಳು



■ ಪ್ರಮಾಣಿಕತೆ ಪೋಲಿಯೊ ಮುಕ್ತ ■ ವರದಿ ರಹಿತ ▒ ೧-೧೦ ಪ್ರಕರಣಗಳು □ ೧೦ಕ್ಕಿಂತ ಹೆಚ್ಚು ಪ್ರಕರಣಗಳು

# ದೇಹಕ್ಕಾಗುವ ಆಪತ್ತುಗಳು

**ದೇಹ ಗಟ್ಟಿಮುಟ್ಟಾಗಿದ್ದರೆ ಮನಸ್ಸೂ ಆರೋಗ್ಯಕರವಾಗಿರುತ್ತದೆ. ಮನಸ್ಸಿನ ಮೇಲಾಗುವ ಕೆಟ್ಟ ಪರಿಣಾಮಗಳಲ್ಲಿ ದೇಹದ ಸ್ಥಿತಿಯೂ ಮುಖ್ಯ ಪಾತ್ರವಹಿಸುತ್ತದೆ. ಅದಕ್ಕೆ ಬರುವ ಆಪತ್ತುಗಳ ಅರಿವು ನಮಗಿರಬೇಕು.**



*- ಡಾ|| ಸಿ. ಅಶ್ವತ್*

''ಖ್ಯಾತ ಚಿತ್ರನಟಿ ಪದ್ಮ ಆತ್ಮಹತ್ಯೆಗೆ ಯತ್ನ. ವೈದ್ಯರ ತುರ್ತು ಚಿಕಿತ್ಸೆಯಿಂದಾಗಿ ಪ್ರಾಣಾಪಾಯದಿಂದ ಪಾರು...''

ಈ ಸುದ್ದಿ ಬೆಳಗಿನ ಪತ್ರಿಕೆಗಳಲ್ಲಿ ಪ್ರಕಟಗೊಂಡಾಗ ಅನೇಕರಿಗೆ ದಿಗ್ಭ್ರಮೆ, ಕುತೂಹಲ. ಕೆಲವರು ಆಕೆ ದಾಖಲಾಗಿದ್ದ ಆಸ್ಪತ್ರೆಗೂ ಭೇಟಿ ನೀಡಿ ತಮ್ಮ ನೆಚ್ಚಿನ ತಾರೆಯ ದರ್ಶನ ಪಡೆದು ಆನಂದಿಸಿದರು. ದಿನ ಕಳೆದಂತೆ ಆತ್ಮಹತ್ಯೆಯ ಕಾರಣಗಳೂ ಸಹ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಕುಟುಂಬದ ಸದಸ್ಯರ ಸಮಸ್ಯೆ, ಮಾಜಿ ಪ್ರೇಮಿಯ ಕಿರುಕುಳ, ಸಾಲಗಾರರ ಕಾಟ ಹಾಗೂ ಇನ್ನಿತರ ಬಗೆಯ ಹಣದ ಬಿಕ್ಕಟ್ಟು, ಸಹ ಕಲಾವಿದರ ಅಸೂಯೆ, ಅಸಹಕಾರ, ಅನಾರೋಗ್ಯ...... ಹೀಗೆ ಹತ್ತು ಹಲವು ಸಮಸ್ಯೆಗಳು ಪದ್ಮಳನ್ನು ಭೂತಾಕಾರವಾಗಿ ಕಾಡುತ್ತಿದ್ದವು. ಇಷ್ಟೊಂದು ಸಮಸ್ಯೆಗಳ ಮಧ್ಯೆ ಧೃತಿಗೆಟ್ಟ ಕಲಾವಿದೆ ಆತ್ಮಹತ್ಯೆಯ ಹಾದಿ ಹಿಡಿದಳು.

ವೈದ್ಯರು ಆಕೆಯನ್ನು ಬದುಕುಳಿಸಿದ್ದು ಮಾತ್ರವೇ ಅಲ್ಲದೆ, ಆಕೆಯ ಪ್ರಸಕ್ತ ಪ್ರೇಮಿಗೆ ಸೂಕ್ತ ತಿಳುವಳಿಕೆ ಹೇಳಿ, ಅವರಿಬ್ಬರ ಜೀವನಕ್ಕೂ ಸರಿಯಾದ ಮಾರ್ಗದರ್ಶನ ನೀಡಿದರು. ಇದರಿಂದ ಮಣ್ಣಲ್ಲಿ ಮಣ್ಣಾಗುತ್ತಿದ್ದ ಕಲಾವಿದೆ ಹೊಸ ಜನ್ಮ ಪಡೆದು ಅನೇಕರ ಕಣ್ಮಣಿಯಾಗಿ ಕಂಗೊಳಿಸಿದಳು.

ಮೇಲ್ಕಂಡ ಘಟನೆಯಂತೆಯೇ ಮನುಷ್ಯನ ದೇಹಕ್ಕೂ ಸಹ ಹಲವಾರು ಬಗೆಯ ಸಮಸ್ಯೆಗಳು ಬರಬಹುದು. ಧೃತಿಗೆಡದೆ ಎದುರಿಸಿ, ಅವಶ್ಯವಾದರೆ ವೈದ್ಯರ ಸಲಹೆ, ಚಿಕಿತ್ಸೆಗಳನ್ನು ಪಡೆದರೆ, ಬೆಟ್ಟದಂತಹ ಸಮಸ್ಯೆಗಳೂ ಮಂಜಿನಂತೆ ಕರಗಿಹೋಗುತ್ತವೆ.

ಗರ್ಭದಿಂದ ಗೋರಿಯವರೆಗೆ ದೇಹ ತನ್ನ ದೈನಂದಿನ ಕಾರ್ಯ ಚಟುವಟಿಕೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಹೋಗುತ್ತಿರುತ್ತದೆ. ಈ ಚಟುವಟಿಕೆಗಳಿಗೆ ಅಡಚಣೆಯನ್ನುಂಟು ಮಾಡಬಹುದಾದ ಸಮಸ್ಯೆಗಳು ದೇಹದಲ್ಲೇ ಉದ್ಭವಿಸಬಹುದು ಅಥವಾ ಹೊರಗಿನ ಆಕ್ರಮಣಕಾರಿಗಳಾಗಬಹುದು. ಕೆಲವೊಮ್ಮೆ ಎರಡೂ ಸೇರಿ ದೇಹದ ಕಾರ್ಯ ಏರುಪೇರಾಗಬಹುದು.

**ಆಂತರಿಕ ಬದಲಾವಣೆಗಳು**

**ಹುಟ್ಟುವಾಗಿನ ಅಂಗವಿಕಲತೆ :**

ಮಗು ಹುಟ್ಟುವಾಗಲೇ ನ್ಯೂನತೆಯಿಂದ (ಅಂಗವಿಕಲತೆಯಿಂದ) ಹುಟ್ಟಬಹುದು ಅಥವಾ ಆಂತರಿಕ ಬದಲಾವಣೆಗಳಿಂದ ಅಂಗವಿಕಲರಾಗಬಹುದು. ಉದಾಹರಣೆಗೆ: ಹೃದಯದಲ್ಲಿನ ದೋಷ, ಸೀಳು ತುಟಿ, ಸೀಳು ಮೇಲ್ದವಡೆ, ಕೈಕಾಲುಗಳ ಊನ ..... ಇತ್ಯಾದಿ. ಇವುಗಳು ಚಿಕಿತ್ಸೆಯಿಂದ ಬಹಳ ಮಟ್ಟಿಗೆ ಸರಿಪಡಿಸುವಂತಹವು.

**ಜೀವರಸ ವ್ಯತ್ಯಯ :**

ಮಗು ಬೆಳೆಯುತ್ತಿದ್ದಂತೆ ಜೀವರಸಗಳ ವ್ಯತ್ಯಯದಿಂದ ದೇಹದಲ್ಲಿನ ಅವಯವಗಳಲ್ಲಿ ನ್ಯೂನತೆಗಳು ಉಂಟಾಗಬಹುದು. ಜೀವರಸ (ಹಾರ್ಮೋನ್)ಗಳಿಂದ ಥೈರಾಯಿಡ್, ಅಡ್ರಿನಲ್, ಪಿಟ್ಯುಟರಿ, ಲೈಂಗಿಕ ಗ್ರಂಥಿ ..... ಮುಂತಾದವುಗಳ ಏರುಪೇರಿನಿಂದ ದೇಹವು ಕೆಲವು ಬಗೆಯ ಸಮಸ್ಯೆಗಳಿಗೆ ಗುರಿಯಾಗಬಹುದು. ಡಯಾಬಿಟಿಸ್, ಗಾಯಿಟರ್, ರೀನಲ್ ಇನ್‌ಸಫಿಷಿಯನ್ಸಿ, ಬೆಳವಣಿಗೆಯ ದೋಷಗಳು .... ಮುಂತಾದವುಗಳು ಸರ್ವೇಸಾಮಾನ್ಯವಾಗಿ ಕಂಡು ಬರುವ ಸಮಸ್ಯೆಗಳು.

ಸೂಕ್ತ ಪರೀಕ್ಷೆ ಮತ್ತು ಚಿಕಿತ್ಸೆಗಳಿಂದ ಇವುಗಳನ್ನು ಬಹಳ ಮಟ್ಟಿಗೆ ನಿಯಂತ್ರಿಸಬಹುದು. ಸ್ವಲ್ಪಮಟ್ಟಿಗೆ ಪೂರ್ಣವಾಗಿ ಗುಣಪಡಿಸಬಹುದು.

**ಜಗ್ಗದಿರುವಿಕೆ :**

ಮನುಷ್ಯನ ದೇಹ ಕೆಲವು ಬಗೆಯ ವಸ್ತುಗಳಿಗೆ ಒಗ್ಗುವುದಿಲ್ಲ. ಈ ಸಮಸ್ಯೆ ಹುಟ್ಟಿದಾರಭ್ಯ ಇರಬಹುದು ಅಥವಾ ಜೀವಮಾನದಲ್ಲಿ ಯಾವಾಗ ಬೇಕಾದರೂ ಕಾಣಿಸಿಕೊಳ್ಳಬಹುದು. ಈ ಬಗೆಯ ಒಗ್ಗದಿರುವಿಕೆಯು ಆಹಾರ ಪದಾರ್ಥಗಳಾದ ಹಾಲು, ಮೊಟ್ಟೆ, ಮಾಂಸ, ಸೊಪ್ಪು, ತರಕಾರಿ..... ಮುಂತಾದವುಗಳಿಗೆ ಆಗಬಹುದು. ಕೆಲವು ಬಗೆಯ ಔಷಧಿಗಳಾದ ಪೆನ್ಸಿಲಿನ್, ಸ್ಟ್ರೆಪ್ಟೋಮೈಸಿನ್ ಇತ್ಯಾದಿ ಅಥವಾ ಮಾತ್ರೆಗಳಾದ ಆಸ್ಪಿರಿನ್, ಐರನ್, ಸಲ್ಫಾ ಡ್ರಗ್ಸ್...... ಮುಂತಾದವುಗಳಿಗಾಗಬಹುದು. ಅಷ್ಟೇ ಅಲ್ಲದೆ, ಧೂಳು, ಹೊಗೆ, ಕೆಲವು ಬಗೆಯ ಹೂಗಳ ಪರಾಗಗಳು...... ಮುಂತಾದವುಗಳಾದರೂ ಆಗಬಹುದು.

ಯಾವ ಬಗೆಯ ವಸ್ತುಗಳಿಗೆ ಒಗ್ಗುವುದಿಲ್ಲವೆಂಬುದನ್ನು ಪತ್ತೆಹಚ್ಚಿ, ಅವುಗಳನ್ನು ತ್ಯಜಿಸುವುದು ಸುಲಭವಾದ ಪರಿಹಾರ. ಆಕಸ್ಮಿಕವಾಗಿ ಆಗುವ ಒಗ್ಗದಿರುವಿಕೆಯ ದುಷ್ಪರಿಣಾಮಗಳಿಗೆ ಸೂಕ್ತ ಚಿಕಿತ್ಸೆ ಪಡೆಯಬೇಕಾಗುತ್ತದೆ.

**ಪೌಷ್ಟಿಕಾಂಶಗಳ ಕೊರತೆ :**

ಅನ್ನಾಂಗಗಳು, ಕಬ್ಬಿಣದಂಶಗಳು, ಪಿಷ್ಟ ಪದಾರ್ಥಗಳು..... ಮುಂತಾದ ಪೌಷ್ಟಿಕಾಂಶಗಳ ಕೊರತೆಯಿಂದಲೂ ಸಹ ಸಮಸ್ಯೆ ಉಂಟಾಗುತ್ತದೆ. ರಕ್ತಹೀನತೆ, ಬೆರಿಬೆರಿ, ಕ್ವಾಷಿಯೋರ್‌ಕರ್..... ಮುಂತಾದ ಕಾಯಿಲೆಗಳು ಉಂಟಾಗಬಹುದು. ಅತಿಯಾದ ಆಹಾರ ಸೇವನೆಯಿಂದ ಬೊಜ್ಜು ಉಂಟಾಗಿ ದೇಹಕ್ಕೆ

ಹಾನಿಯಾಗಬಹುದು.

ಪೌಷ್ಠಿಕ ಹಾಗೂ ಸಮತೋಲನವಾದ ಆಹಾರ ಸೇವನೆಯಿಂದ ಇಂತಹ ಪೌಷ್ಠಿಕಾಂಶಗಳ ಕೊರತೆಯನ್ನು ತಡೆಗಟ್ಟಗಬಹುದು. ಆಕಸ್ಮಾತ್ ಕೊರತೆಯುಂಟಾದರೆ ಸೂಕ್ತ ರೀತಿಯ ಪರೀಕ್ಷೆ, ಚಿಕಿತ್ಸೆಯಿಂದ ಸಮಸ್ಯೆ ಪರಿಹರಿಸಬಹುದು.

**ರಕ್ತದ ಸಮಸ್ಯೆಗಳು :**

ಮನುಷ್ಯರಲ್ಲಿ ರಕ್ತ 'ಜೀವವಾಹಿನಿ' ರಕ್ತದ ಪ್ರಮಾಣ ಕಡಿಮೆಯಾದರೆ ದೇಹವು ಸುಮಾರು ೨೪ ಗಂಟೆಗಳೊಳಗಾಗಿ ಅದನ್ನು ಸರಿದೂಗಿಸಲು ಪ್ರಯತ್ನಿಸುತ್ತದೆ. ರಕ್ತಸ್ರಾವದ ಪ್ರಮಾಣವು ಬಹಳ ಅಧಿಕವಾಗಿದ್ದು, ಅದನ್ನು ಸರಿದೂಗಿಸ ಲಾಗದಿದ್ದರೆ ಸಮಸ್ಯೆಗಳುಂಟಾಗುತ್ತವೆ. ರಕ್ತದಲ್ಲಿನ ಕಬ್ಬಿಣಾಂಶವಾದ 'ಹೀಮೋಗ್ಲೋಬಿನ್' ಎಂಬುದು ಕಡಿಮೆಯಾದರೆ ದೇಹಕ್ಕೆ ತೀವ್ರ ಹಾನಿಯಾಗುತ್ತದೆ. ಅಂತೆಯೇ ರಕ್ತ ಹೆಪ್ಪುಗಟ್ಟುವ ಅಂಶದ ಕೊರತೆಯಾದರೆ ರಕ್ತಸ್ರಾವದ ಕಾಯಿಲೆಗಳಾಗಿ ಪ್ರಾಣಹಾನಿಯ ಮಟ್ಟ ತಲುಪಬಹುದು.

ರಕ್ತನಾಳಗಳ ಸಮಸ್ಯೆಗಳಾದ ಗಡುಸಾಗುವುದು, ಹರಿಯುವುದು..... ಮುಂತಾದವುಗಳಾಗಬಹುದು. ರಕ್ತದೊತ್ತಡದಲ್ಲಿನ ಏರುಪೇರು, ರಕ್ತಸ್ರಾವ, ರಕ್ತ ಚಲನಾಸ್ಥಬ್ದತೆ..... ಮುಂತಾದ ದುಷ್ಪರಿಣಾಮಗಳಾಗಬಹುದು. ಕಾಲಕ್ರಮವಾಗಿ ವೈದ್ಯಕೀಯ ಪರೀಕ್ಷೆ ಮತ್ತು ಸಲಹೆಗಳಿಂದ ಇಂತಹ ದುಷ್ಪರಿಣಾಮಗಳನ್ನು ಬಹಳಮಟ್ಟಿಗೆ ನಿಯಂತ್ರಿಸಬಹುದು.

### ಹೊರಗಿನ ಆಕ್ರಮಣಕಾರಿಗಳು

**ಸೂಕ್ಷ್ಮಾಣು ಜೀವಿಗಳು (ಬ್ಯಾಕ್ಟೀರಿಯಾ) :**

ಜ್ವರ, ಭೇದಿ, ಕ್ಷಯ, ಕುಷ್ಠ..... ಮುಂತಾದ ಕಾಯಿಲೆಗಳನ್ನು ಕಂಡು ಹಿಡಿಯುವಲ್ಲಿ ವೈದ್ಯರ ಪರೀಕ್ಷೆಗಳ ಜೊತೆಗೆ ಪ್ರಯೋಗಾಲಯಗಳೂ ಸಹ ಬಹಳ ಪ್ರಮುಖ ಪಾತ್ರವಹಿಸುತ್ತವೆ. ಕಾಯಿಲೆಗೆ ಸಂಬಂಧಪಟ್ಟ ಭಾಗವನ್ನು, ಉದಾಹರಣೆಗೆ ರಕ್ತ, ಕಫ, ಮಲ, ಮೂತ್ರ, ಕೀವು...... ಮುಂತಾದವುಗಳನ್ನು ಪ್ರಯೋಗಾಲಯದಲ್ಲಿ ಪರೀಕ್ಷಿಸಿದಾಗ ಆ ಕಾಯಿಲೆಗೆ ಕಾರಣವಾದ ಸೂಕ್ಷ್ಮಾಣು ಜೀವಿಗಳು (ಬ್ಯಾಕ್ಟೀರಿಯಾ) ಯಾವುವೆಂಬುದು ತಿಳಿಯುತ್ತದೆ. ಇವು ಕಣ್ಣಿಗೆ ಕಾಣುವುದಿಲ್ಲ. ಆದರೆ ಸೂಕ್ಷ್ಮದರ್ಶಕ ಯಂತ್ರದ ಮೂಲಕ ಪತ್ತೆ ಹಚ್ಚಬಹುದು. ಒಂದೊಂದು ಬಗೆಯ ಸೂಕ್ಷ್ಮಾಣು ಜೀವಿಯಿಂದ ಒಂದೊಂದು ವಿಧವಾದ ಸಮಸ್ಯೆ ಆಗಿದೆ ಎಂಬುದನ್ನು ಪತ್ತೆ ಹಚ್ಚಿದರೆ ನಿಖರವಾದ ಚಿಕಿತ್ಸೆ ನೀಡಬಹುದು.

ವೈಯಕ್ತಿಕ ಶುಚಿತ್ವ, ಶುದ್ಧ ಆಹಾರ, ಉತ್ತಮ ಪರಿಸರಗಳಿಂದ ಬಹುತೇಕ ಸಮಸ್ಯೆಗಳನ್ನು ತಡೆಗಟ್ಟಬಹುದು.

**ಮಿಣಿ ಜೀವಿಗಳು (ವೈರಸ್) :**

ದಡಾರ, ಸರ್ಪಗಂಧಿ (ಹರ್ಪಿಸ್), ಸಾಮಾನ್ಯ ಶೀತ (ಕಾಮನ್ ಕೋಲ್ಡ್)..... ಮುಂತಾದ ಕಾಯಿಲೆಗಳಿಗೆ ಕಾರಣಗಳಾದ ಜೀವಿಗಳನ್ನು ಸಾಮಾನ್ಯ ಸೂಕ್ಷ್ಮದರ್ಶಕ ಯಂತ್ರದಿಂದ ಕಂಡುಹಿಡಿಯಲಾಗುವುದಿಲ್ಲ. ಎಲೆಕ್ಟ್ರಾನಿಕ್ ಮೈಕ್ರೋಸ್ಕೋಪ್ ಎಂಬ ಅತ್ಯಾಧುನಿಕ ಉಪಕರಣದ ಸಹಾಯದಿಂದ ಗುರ್ತಿಸಲ್ಪಡಬಲ್ಲ ಈ ಮಿಣಿ ಜೀವಿಗಳು ಇಂಗ್ಲಿಷ್‌ನಲ್ಲಿ 'ವೈರಸ್' ಎಂದು ಕರೆಯಲ್ಪಡುತ್ತವೆ. ಈ ಜೀವಿಗಳ ಆಕ್ರಮಣದಿಂದ ಉದ್ಭವಿಸುವ ಸಮಸ್ಯೆಗಳು ಸಾಮಾನ್ಯವಾಗಿ ಸ್ವಯಂ ನಿಯಂತ್ರಿತವಾಗಿರುತ್ತವೆ. ಅಂದರೆ ಯಾವ ಬಗೆಯ ಚಿಕಿತ್ಸೆಯನ್ನೂ ಸಹ ನೀಡದಿದ್ದರೂ ಅದು ವಾಸಿಯಾಗುತ್ತದೆ. ಇದು ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ಅಂಟುಜಾಡ್ಯ. ಈ ಕಾಯಿಲೆಯ ಚಿಹ್ನೆಗಳು ಕಾಣಿಸಿಕೊಳ್ಳುವುದಕ್ಕೆ ಮುಂಚೆ ಮುನ್ಸೂಚನೆಯಾಗಿ ಜ್ವರ, ತಲೆನೋವು..... ಮುಂತಾದವುಗಳು ಕಾಣಿಸಿಕೊಳ್ಳುವುದು ಸರ್ವೇಸಾಮಾನ್ಯ. 'ಫೋರ್ತ್ ಕಮಿಂಗ್ ಈವೆಂಟ್ಸ್ ಕ್ಯಾಸ್ಟ್ ದೇರ್ ಶ್ಯಾಡೋ' ಎಂಬುದೊಂದು ಇಂಗ್ಲಿಷ್ ಗಾದೆ. ಅಂದರೆ 'ಮುಂದೆ ಸಂಭವಿಸುವ ಘಟನೆಗಳು ತಮ್ಮ ಛಾಯೆಯನ್ನು ಬೀರುತ್ತವೆ' ಎಂಬುದಕ್ಕೆ ವೈರಸ್ ಕಾಯಿಲೆಗಳು ಒಂದು ಉತ್ತಮ ನಿದರ್ಶನ.

ಏಡ್ಸ್ ಕಾಯಿಲೆಯೂ ಸಹ ಒಂದು ಬಗೆಯ ವಿಚಿತ್ರ ವೈರಸ್‌ನಿಂದ ಬರುವಂತಹುದು. ದುರಾದೃಷ್ಟವೆಂದರೆ ಇದು ಸ್ವಯಂ ನಿಯಂತ್ರಕವಲ್ಲ. ಇದಕ್ಕೆ ಸಮರ್ಪಕ ಚಿಕಿತ್ಸೆಯೂ ಇಲ್ಲ. ಮರಣದಲ್ಲಿ ಮುಕ್ತಾಯವಾಗುವ ಕ್ರೂರ ಕಾಯಿಲೆ.

ವೈರಸ್‌ನಿಂದಾಗುವ ಕಾಯಿಲೆಗಳು ಸಾಮಾನ್ಯವಾಗಿ ಸ್ವಯಂ ನಿಯಂತ್ರಿತವಾದವುಗಳಾದರೂ ಸಹ ಅದರಿಂದಾಗುವ ದೈಹಿಕ ದೌರ್ಬಲ್ಯಗಳು ಇತರ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಿರುತ್ತವೆ. ಆದುದರಿಂದ ವೈದ್ಯರ ಸಲಹೆ, ಚಿಕಿತ್ಸೆಗಳು ಅವಶ್ಯಕ.

**ಬೂಸ್ಟು (ಫಂಗಸ್) :**

ಕಂಕುಳು, ತೊಡೆಗಳ ಸಂದು, ಬೆರಳುಗಳ ಕೊನೆಯಲ್ಲಿ, ಉಗುರುಗಳ ಬಳಿ..... ಮುಂತಾದ ಕಡೆ ಆಗುವ ಒಂದು ಬಗೆಯ ನಂಜು. ಇದು ಸಾಮಾನ್ಯವಾಗಿ ನವೆಯಿಂದ ಕೂಡಿದ್ದು, ಆ ಭಾಗದ ಚರ್ಮದ ಬಣ್ಣ ಬದಲಾಗುತ್ತದೆ. ಉಗುರುಗಳಲ್ಲಾದರೆ ಗುಳಿ ಬೀಳುತ್ತದೆ. ಇದು ಪ್ರಾರಂಭದ ಸ್ವಲ್ಪ ಸಮಯದವರೆಗೆ ಆ ವ್ಯಕ್ತಿಯ ಗಮನ ಸೆಳೆಯದಿರಬಹುದು. ಸ್ಪಷ್ಟ ಚಿಹ್ನೆಗಳು ಗೋಚರಿಸಿದಾಗ ವೈದ್ಯರ ನೆರವನ್ನು ಬಯಸಿ ಬರುವುದು ಸರ್ವಸಾಮಾನ್ಯ. ತಜ್ಞರು ಮೇಲ್ನೋಟಕ್ಕೆ ಇಂತಹುದೇ ಸಮಸ್ಯೆಯೆಂದು ನಿರ್ಧರಿಸುತ್ತಾರೆ. ಅನಿವಾರ್ಯವಾದರೆ ಪ್ರಯೋಗಾಲಯದ ಪರೀಕ್ಷೆಗೆ ಒಳಪಡಿಸುತ್ತಾರೆ.

ಚಿಕಿತ್ಸೆಯು ಬಹಳ ಸರಳ. ಮೇಲೆ ಹಚ್ಚುವ ಔಷಧಿ (ಮುಲಾಮು) ಯಿಂದಲೇ ವಾಸಿಯಾಗುತ್ತದೆ. ನಂಜು ಒಳಭಾಗಕ್ಕೆ ಇಳಿದಿದ್ದರೆ ಗುಳಿಗೆಗಳನ್ನು ನೀಡಬೇಕಾಗುತ್ತದೆ. ಸಾಮಾನ್ಯವಾಗಿ ಸುಮಾರು ೪-೬ ವಾರಗಳ ಚಿಕಿತ್ಸೆಯ ಅವಶ್ಯಕತೆ ಇರುತ್ತದೆ. ಅಪರೂಪಕ್ಕೊಮ್ಮೆ ಅತಿ ಬೇಗ ಅಥವಾ ಅತಿ ದೀರ್ಘಕಾಲದ ಚಿಕಿತ್ಸೆಯ ಅವಶ್ಯಕತೆ ಬೀಳಬಹುದು.

**ಪರಾವಲಂಬಿಗಳು :**

ಹೇನು, ಸೀರು, ಜಂತು ಹುಳು, ಕೊಕ್ಕೆ ಹುಳು, ಲಾಡಿ ಹುಳು..... ಹೀಗೆ ಹತ್ತು ಹಲವಾರು ಜೀವ ಜಂತುಗಳು ಮನುಷ್ಯನ ದೇಹವನ್ನು ಪ್ರವೇಶಿಸಿ, ಅಲ್ಲೇ ಮನೆ ಮಾಡಿ ಜೀವಿಸುವ ಸಾಧ್ಯತೆಗಳಿವೆ. ಮನುಷ್ಯನ ದೇಹ ಇವುಗಳಿಗೆ ಊಟ, ವಸತಿ ಕಲ್ಪಿಸುವ ತಾಣವಾಗುತ್ತದೆ. ಇವು ಮನುಷ್ಯನನ್ನು ಅವಲಂಬಿಸುವುದರಿಂದ 'ಪರಾವಲಂಬಿಗಳು' ಎನ್ನುತ್ತೇವೆ. ಅನೇಕ ವೇಳೆ ಇವುಗಳ ಇರುವಿಕೆಯೂ ಆ ವ್ಯಕ್ತಿಗೆ ತಿಳಿದಿರುವುದೇ ಇಲ್ಲ. ಕೆಲವು ಪರಾವಲಂಬಿಗಳು ಮನುಷ್ಯನ ದೈನಂದಿಕ ಜೀವನಕ್ಕೆ ಸಮಸ್ಯೆ ಉಂಟುಮಾಡುವ ಮೂಲಕ ಗಮನ ಸೆಳೆಯುತ್ತವೆ. ಮತ್ತೆ ಕೆಲವನ್ನು ವೈದ್ಯಕೀಯ ಪರೀಕ್ಷೆಗಳಿಂದ ಗುರ್ತಿಸಲಾಗುತ್ತದೆ. ಉದಾಹರಣೆಗೆ : ಹೇನು, ಸೀರುಗಳಿಂದ ತಲೆಯಲ್ಲಿ ನವೆಯಾಗುತ್ತದೆ. ವಿವರವಾಗಿ ನೋಡಿದಾಗ ಇವುಗಳ ಇರುವಿಕೆ ತಿಳಿಯುತ್ತದೆ. ಜಂತು ಹುಳುವಿನಿಂದ ಹೊಟ್ಟೆನೋವು ಬರಬಹುದು. ಎಷ್ಟು ಆಹಾರ ಸೇವಿಸಿದರೂ ಮೈಗೆ ಹತ್ತದಿರಬಹುದು. ಒಮ್ಮೊಮ್ಮೆ ಬಾಯಿ

ಅಥವಾ ಗುದದ್ವಾರಗಳ ಮೂಲಕ ಇವು ಬೀಳಬಹುದು. ಕೊಕ್ಕೆಹುಳುವಿನ ಇರುವಿಕೆಯೂ ರಕ್ತಹೀನತೆ, ಗುದದ್ವಾರದ ಬಳಿ ಕಡಿತ, ನಿದ್ರಿಸುವಾಗ ಹಲ್ಲು ಕಡಿಯುವುದು..... ಮುಂತಾದ ರೀತಿಯಲ್ಲಿ ತೋರ್ಪಡಿಸಬಹುದು. ಮಲ ಪರೀಕ್ಷೆ, ಅನೇಕ ಸಂದರ್ಭಗಳಲ್ಲಿ ಹೊಟ್ಟೆಯಲ್ಲಿನ ಪರಾವಲಂಬಿಗಳನ್ನು ಖಚಿತಪಡಿಸುತ್ತದೆ.

ಸರಳ ಚಿಕಿತ್ಸೆಯಿಂದ ಇವುಗಳನ್ನು ಬಹಳ ಮಟ್ಟಿಗೆ ತೊಡೆದು ಹಾಕಬಹುದು. ಕೆಲವು ಪರಾವಲಂಬಿಗಳ ಮೊಟ್ಟೆ (ಸಿಸ್ಟ್) ಗಡುಸಾಗಿರುವುದರಿಂದ ಚಿಕಿತ್ಸೆ ಪೂರ್ಣಗೊಳ್ಳುವುದಿಲ್ಲ. ಮೊದಲ ಬಾರಿಯ ಚಿಕಿತ್ಸೆಯಿಂದ ಪರಾವಲಂಬಿಗಳು ಸತ್ತು ದೇಹದಿಂದ ಹೊರ ಬಿದ್ದರೆ, ಅವುಗಳ ಮೊಟ್ಟೆಗಳು ಚಿಕಿತ್ಸೆಯಿಂದ ತಪ್ಪಿಸಿಕೊಳ್ಳಬಹುದು. ಸುಮಾರು ೧೫ ದಿನಗಳಲ್ಲಿ ಆ ಮೊಟ್ಟೆಗಳು ಒಡೆದು ಹುಳುಗಳು ಹೊರಬಂದಿರುತ್ತವೆ. ಅಂತಹ ಸಮಯದಲ್ಲಿ ಎರಡನೆಯ ಬಾರಿ ಚಿಕಿತ್ಸೆ ನೀಡಿದರೆ ಅವೆಲ್ಲಾ ಸಂಪೂರ್ಣವಾಗಿ ನಿರ್ನಾಮವಾಗುತ್ತವೆ. ಈ ರೀತಿಯ ಎರಡು ಬಾರಿಯ ಚಿಕಿತ್ಸೆಯಿಂದ ಅನೇಕ ಪರಾವಲಂಬಿಗಳು ಬುಡಸಮೇತ ಕಿತ್ತೆಸೆದಂತೆ ನಿರ್ಗಮಿಸುತ್ತವೆ.

ವೈಯಕ್ತಿಕ ಶುಚಿತ್ವ, ಕೈಬೆರಳುಗಳಲ್ಲಿನ ಉಗುರುಗಳನ್ನು ಸರಿಯಾಗಿ ತೆಗೆದುಹಾಕುವುದು, ನೊಣ, ಜಿರಳೆ..... ಮುಂತಾದವುಗಳಿಂದ ಆಹಾರವನ್ನು ರಕ್ಷಿಸುವುದು, ಮೊದಲಾದ ಮುಂಜಾಗ್ರತಾ ಕ್ರಮಗಳಿಂದ ಈ ಬಗೆಯ ಪರಾವಲಂಬಿಗಳನ್ನು ದೂರವಿರಿಸಬಹುದು. ಮಲ-ಮೂತ್ರ ವಿಸರ್ಜನೆಗೆ ಸಮರ್ಪಕ ವ್ಯವಸ್ಥೆಯಿಂದಲೂ ಸಹ ಈ ಬಗೆಯ ಪರಾವಲಂಬಿಗಳ ಆಕ್ರಮಣಕ್ಕೆ ನಿಯಂತ್ರಣ ದೊರೆಯುತ್ತದೆ.

**ರಾಸಾಯನಿಕ ಪದಾರ್ಥಗಳು :**

ಆಹಾರದಲ್ಲಿನ ಕೆಲವು ವಸ್ತುಗಳು ಹಾಗೂ ರಾಸಾಯನಿಕ ಪದಾರ್ಥಗಳಿಂದ ದೇಹದ ವಿವಿಧ ಭಾಗಗಳಲ್ಲಿ ಹರಳನ್ನುಂಟು ಮಾಡುವ ಸಾಧ್ಯತೆಗಳಿರುತ್ತವೆ. ಮೂತ್ರಪಿಂಡ, ಮೂತ್ರಕೋಶ, ಪಿತ್ತಜನಕಾಂಗ..... ಮುಂತಾದ ಸ್ಥಳಗಳಲ್ಲಿ ಹರಳಿನ ನಿರ್ಮಾಣವಾಗಬಹುದು. ಕೆಲವೊಮ್ಮೆ ಅದರ ಗಾತ್ರವು ಹೆಚ್ಚುತ್ತಾ ಹೋಗಿ, ಆ ಅಂಗದ ಕಾರ್ಯ ಚಟುವಟಿಕೆಗೆ ಮಾರಕವಾಗುತ್ತದೆ. ಅದನ್ನು ತೆಗೆದುಹಾಕಲು ಅನೇಕ ಸಂದರ್ಭಗಳಲ್ಲಿ ಶಸ್ತ್ರಚಿಕಿತ್ಸೆ ನಡೆಸಬೇಕಾಗುತ್ತದೆ.

ಕೆಲವು ಬಗೆಯ ರಾಸಾಯನಿಕ ಪದಾರ್ಥಗಳ ಸ್ಪರ್ಶದಿಂದ ಆ ಸ್ಥಳಕ್ಕೆ ಹಾನಿಯುಂಟು ಮಾಡುತ್ತವೆ. ಸೇವಿಸುವ ಆಹಾರ ಪದಾರ್ಥದಲ್ಲಿನ ರಾಸಾಯನಿಕದ ಅಂಶಗಳು ಜೀರ್ಣಾಂಗಗಳ ಮೇಲೆ ದುಷ್ಪರಿಣಾಮ ಬೀರುತ್ತವೆ.

**ಔಷಧಿಗಳು :**

ಔಷಧಿಗಳು ಎರಡು ಕಡೆ ಹರಿತವಿರುವ ಬ್ಲೇಡಿನಂತೆ. ಅವುಗಳನ್ನು ಬಹಳ ಎಚ್ಚರಿಕೆಯಿಂದ ವೈದ್ಯರ ಸಲಹೆಯಂತೆ ಬಳಸಿದರೆ ಉಪಯುಕ್ತ. ಎಚ್ಚರ ತಪ್ಪಿದರೆ ಅವುಗಳಿಂದ ಅಪಾರ ಹಾನಿಯೂ ಆಗುತ್ತದೆ. ಕರುಳನ್ನು ಚುಚ್ಚುವಂತಹ ಔಷಧಿಗಳು, ನಿದ್ರೆ ಗುಳಿಗೆಗಳು, ಕೆಲವು ಬಗೆಯ ಇಂಜೆಕ್ಷನ್‌ಗಳು..... ಮುಂತಾದವುಗಳಿಂದ ತೀವ್ರತರವಾದ ದುಷ್ಪರಿಣಾಮಗಳಾಗುವ ಸಾಧ್ಯತೆಗಳಿವೆ.

ಸ್ವಯಂ ಚಿಕಿತ್ಸೆ, ಹೆಸರಿಲ್ಲದ ಔಷಧಿಗಳ ಬಳಕೆ, ಇತರರ ಚಿಕಿತ್ಸೆಯ ಅಂಧಾನುಕರಣೆ..... ಮುಂತಾದವುಗಳು ಬಹಳ ಅಪಾಯಕಾರಿ.

**ಪ್ರಕೃತಿ ವಿಕೋಪಗಳು :**

ಗುಡುಗು, ಸಿಡಿಲು, ಚಂಡಮಾರುತ, ಭೂಕಂಪ, ಅತಿಯಾದ ಬಿಸಿಲು ಅಥವಾ ಚಳಿ, ನೀರಿನಲ್ಲಿ ಮುಳುಗುವುದು, ಬೆಂಕಿ ತಗಲುವುದು..... ಮುಂತಾದವುಗಳು ದೇಹಕ್ಕೆ ಅಪಾಯಕಾರಿ. ಕೆಲವೊಮ್ಮೆ ಸಾವಿನ ದವಡೆಯವರೆಗೂ ಕೊಂಡೊಯ್ಯಬಹುದು. ಇವುಗಳಿಂದ ರಕ್ಷಣೆ ಪಡೆಯುವುದೇ ಸೂಕ್ತ ಪರಿಹಾರ. ಆಕಸ್ಮಾತ್ ಇವುಗಳ ವಿಕೋಪಕ್ಕೆ ತುತ್ತಾದರೆ ಸರಿಯಾದ ಸಲಹೆ, ಚಿಕಿತ್ಸೆ ಪಡೆಯಬೇಕಾಗುತ್ತದೆ.

**ಮನೋ-ದೈಹಿಕ ಕಾಯಿಲೆಗಳು :**

ಮಧುಮೇಹ, ರಕ್ತದೊತ್ತಡ, ಹೊಟ್ಟೆಯಲ್ಲಿ ಹುಣ್ಣಾಗುವುದು..... ಮುಂತಾದ ಕಾಯಿಲೆಗಳಿಗೆ ಹಲವಾರು ಕಾರಣಗಳಿರುತ್ತವೆ. ವಂಶಪಾರಂಪರ್ಯವಾಗಿಯೂ ಬರಬಹುದು. ಆದರೆ ಅನೇಕರಿಗೆ ಈ ಕಾಯಿಲೆಗಳ ಹಿಂದೆ ಮಾನಸಿಕ ಸಮಸ್ಯೆಗಳು ಅಡಗಿರುವ ಸಾಧ್ಯತೆಗಳಿವೆ.

ಮಾನಸಿಕ ಒತ್ತಡದಿಂದ ಉದ್ಭವಿಸುವ ದೈಹಿಕ ಕಾಯಿಲೆಗಳನ್ನು 'ಮನೋ-ದೈಹಿಕ ಕಾಯಿಲೆ'ಗಳು ಎನ್ನುತ್ತೇವೆ.

ಈ ಕಾಯಿಲೆಗಳ ಮೂಲವನ್ನು ಕಂಡು ಹಿಡಿಯುವುದು ಸ್ವಲ್ಪ ಕಷ್ಟ. ಮಾನಸಿಕ ಸಮಸ್ಯೆಗಳಿಗೆ ಗಮನ ಹರಿಸಿದರೆ ಅಥವಾ ಮನಃಶಾಂತಿ ದೊರಕಿಸಿದರೆ ಇವುಗಳನ್ನು ಬಹಳ ಮಟ್ಟಿಗೆ ನಿಯಂತ್ರಿಸಬಹುದು.

ದ್ವೇಷ, ಅಸೂಯೆಗಳಿಂದ ಏನನ್ನೂ ಸಾಧಿಸಲಾಗುವುದಿಲ್ಲ. ಅದರ ಬದಲು ಆ ವ್ಯಕ್ತಿಯ ಆರೋಗ್ಯ ಖಂಡಿತ ಹಾಳಾಗುತ್ತದೆ.

ನಿಯಮಿತವಾದ ಯೋಗಾಭ್ಯಾಸ, ಧ್ಯಾನಗಳಿಂದ ಮನಸ್ಸು ತನ್ಮೂಲಕ ದೇಹವನ್ನು ಆರೋಗ್ಯವಾಗಿಟ್ಟುಕೊಳ್ಳಬಹುದು. ಸದಾ ಒಳ್ಳೆಯದನ್ನೇ ಚಿಂತಿಸುವುದು, ಉತ್ತಮ ವಾತಾವರಣ..... ಮುಂತಾದವುಗಳು ಆರೋಗ್ಯ ರಕ್ಷಣೆಯ ಸಾಧನಗಳು. ❒



**ಸಾಹಿತಿ**

ಓರ್ವ ವ್ಯಕ್ತಿ - "ಡಾಕ್ಟರೇ, ನನ್ನ ಈ ಮಿತ್ರ ತನ್ನನ್ನು ತಾನು ಸಾಹಿತಿ ಎಂದು ಹೇಳಿಕೊಳ್ಳುತ್ತಾನೆ. ಇವನ ಪ್ರಕಾರ ಐದು ನೂರು ಪುಟಗಳ ಕಾದಂಬರಿ ಯನ್ನಿವನು ಬರೆದಿದ್ದಾನೆ. ಆದರೆ, ಸತ್ಯಾಂಶವೇನೆಂದರೆ ಇತನೊಬ್ಬ ಹುಚ್ಚ.

ಡಾಕ್ಟರ್ - ನಾನು ನಿಮ್ಮ ಮಾತನ್ನು ಒಪ್ಪುವುದಿಲ್ಲ. ಛೆ ಛೆ ಸಾಹಿತಿಗಳನ್ನು ಯಾರಾದರೂ ಹುಚ್ಚರೆಂದು ಹೇಳುತ್ತಾರಾ?

ವ್ಯಕ್ತಿ - ಡಾಕ್ಟ್ರೇ ಆ ಕಾದಂಬರಿ ಇದ್ದರಲ್ಲವೇ? ಮೊದಲ ಪುಟದಲ್ಲಿ "ಕುದುರೆ ಓಡುತ್ತಿದೆ" ಎಂದು ಬರೆದು, ಉಳಿದ ಪುಟಗಳಲ್ಲಿ "ಟಕ್ಕು ಬುಕ್ಕು.... ಟಕ್ಕು ಬುಕ್ಕು...." ಎಂದು ಬರೆದು ತುಂಬಿಸಿದ್ದಾನೆ!

+ ರೂತಿ

# ಕೆನ್ನೆಗೆ ಹೊಡೆತ ! ಕಿವಿ ತಮಟೆ ಹರಿತ !!

**ನಾ**ವೆಲ್ಲರೂ ಚಿಕ್ಕವರಿರುವಾಗ ಮನೆಯಲ್ಲಿ ಹಿರಿಯರಿಂದಲೋ, ಶಾಲೆಯಲ್ಲಿ ಮಾಸ್ತರರಿಂದಲೋ ಅಥವಾ ಬಹಳ ಉಡಾಳರಿದ್ದರೆ ಜಗಳದಲ್ಲಿ ಮತ್ತೊಬ್ಬರಿಂದಲೋ ಕೆನ್ನೆಗೆ ಹೊಡೆಸಿಕೊಂಡಿರಬಹುದು. ಆದರೆ ಅನೇಕರು ಕಿವಿಗೆ ಹೊಡೆಸಿಕೊಂಡಿರಲಿಕ್ಕಿಲ್ಲ. ಅವರೆಲ್ಲರೂ ಸುದೈವಿಗಳು. ಏಕೆಂದರೆ ಕೆನ್ನೆಗೆ ಬೀಳುವ ಹೊಡೆತ ಆಯ ತಪ್ಪಿ ಕಿವಿಯ ಮೇಲೆ ಬಿದ್ದರೆ ಅದು ಬಹು ಅನಾಹುತವನ್ನೆ ಮಾಡಬಹುದು. ಇಂತಹ ಹೊಡೆತ ಕಿವಿಯ ತಮಟೆಗೆ ಬಲು ಹಾನಿ ಮಾಡುತ್ತದೆ. ಈಗ ಇಂತಹ ಹೊಡೆತ ಯಾವ ರೀತಿಯಿಂದ ಅಪಾಯಕಾರಿ ಎಂದು ನೋಡೋಣ. ಕೈಯಿಂದ ಯಾವಾಗ ಕಿವಿಯ ಮೇಲೆ ಹೊಡೆತ ಬೀಳುತ್ತದೋ ಆಗ ಹೊರಗಿವಿಯ ತೂತು ಕೈಯಿಂದ ಸಂಪೂರ್ಣ ವಾಗಿ ಮುಚ್ಚಲ್ಪಡುತ್ತದೆ, ಹಾಗೂ ಅಮಕಲ್ಪಡು ತ್ತದೆ. ಆಗ ಹೊರಗಿವಿಯ ನಾಲೆ (External auditory cannal) ಯಲ್ಲಿನ ವಾಯು ಒತ್ತಡ ಬೀಳುತ್ತದೆ. ಇದನ್ನು ತಡೆದುಕೊಳ್ಳುತ್ತದೆ. ಆದರೆ ಹಲವು ಸಾರೆ ಕಿವಿಗೆ ಬೀಳುವ ಹೊಡೆತ ಜೋರಾಗಿದ್ದರೆ ಈ ವಾಯು ಒತ್ತಡದಿಂದ ಕಿವಿ ತಮಟೆ ಹರಿದು ಹೋಗುತ್ತದೆ. ಹೊಡೆತ ಇದಕ್ಕಿಂತ ಜೋರಾಗಿದ್ದರೆ ಈ 'ಒತ್ತಡ' ತಮಟೆಯನ್ನು ಹರಿದು, ಒಳಗಿವಿಯನ್ನು ತಲುಪಿ, ಅಲ್ಲಿರುವ ಅತೀ ಸೂಕ್ಷ್ಮವಾದ ಗೋಲಾಕಾರದ ಪರದೆಯನ್ನೂ ಸಹ ಹರಿದು ಬಿಡಬಹುದು. ಆಗ ಒಳಗಿವಿಯಲ್ಲಿ ಈ ಗೋಲಾಕಾರದ ಪರದೆಯ ಹಿಂದಿರುವ ನೀರು ಸೋರಿ ಹೋಗಿ ಅಲ್ಲಿರುವ ನರಕೋಶಗಳು ಸತ್ತು ಹೋಗಬಹುದು. ಇದರಿಂದ ವ್ಯಕ್ತಿಯ ಕಿವಿಡುತನ ನರಕಿವುಡುತನ ವಾಗುತ್ತದೆ. ಅಂದರೆ ಇಂತಹ ಕಿವುಡುತನವನ್ನು ಆಪರೇಷನ್ ಮುಖಾಂತರ ಗುಣ ಮಾಡಲು ಆಗುವುದಿಲ್ಲ.

ಈ ಹೊಡೆತ ಬಿದ್ದ ತಕ್ಷಣ ಆ ವ್ಯಕ್ತಿಗೆ ಕಿವಿಯಲ್ಲಿ ನೋವು ಕಾಣಿಸಿಕೊಳ್ಳಬಹುದು. ವ್ಯಕ್ತಿಯ ಕೇಳುವಿಕೆ ಒಮ್ಮೆಲೆ ಸ್ಥಬ್ದವಾಗಬಹುದು. ಕಿವುಡುತನ ಕಾಣಬಹುದು. ಈ ಕಿವುಡುತನ ಸ್ವಲ್ಪದರಿಂದ ಹಿಡಿದು ಸಂಪೂರ್ಣ ಕಿವುಡುತನದ ವರೆಗೆ ಇರಬಹುದು. ಕೆಲವರಿಗೆ ಕಿವಿಯಲ್ಲಿ 'ಗುಂಯ್-' ಎಂಬ ಶಬ್ದ ಪ್ರಾರಂಭವಾಗಬಹುದು. ಇನ್ನು ಕೆಲವರಿಗೆ ತಲೆ ಸುತ್ತು ಬರಬಹುದು. ಈ ತಲೆ ಸುತ್ತುವಿಕೆ ಕ್ಷಣಿಕವಾಗಿರಬಹುದು ಅಥವಾ ಅನೇಕ ದಿನಗಳವರೆಗೆ ಇರಬಹುದು. ಕೆಲವರಿಗೆ ಕಿವಿಯಿಂದ ರಕ್ತ ಬರಬಹುದು.

**ಏನು ಮಾಡಬಾರದು :** ಮನೆಯಲ್ಲಿ ಹೀಗೆ ಆದಾಗ ಹೊಡೆತ ತಿಂದ ವ್ಯಕ್ತಿಯ ಕಿವಿಯಲ್ಲಿ ಕಾದ ಎಣ್ಣೆ ಹಾಕುವುದು ಸಾಮಾನ್ಯ. ಕೆಲವರು ಈ ಕಾದ ಎಣ್ಣೆಯಲ್ಲಿ ಬೆಳ್ಳುಳ್ಳಿ, ಮೆಣಸು ಇತ್ಯಾದಿ ಪದಾರ್ಥಗಳನ್ನು ಹಾಕಿ ಒಂದು ರೀತಿಯ

*ಡಾ|| ಉಮೇಶ ಸ. ನಾಗಲೋಟಿಮಠ*

ಒಗ್ಗರಣೆಯನ್ನು ಕಿವಿಯಲ್ಲಿ ಸುರುವುತ್ತಾರೆ. ಇದು ಬಹಳ ತಪ್ಪು. ಇದರಿಂದ ಕಿವಿಯಲ್ಲಿ ಹಾಕಿದ ಎಣ್ಣೆ ತೂತು ಬಿದ್ದ ತಮಟೆಯ ಮುಖಾಂತರ ಮಧ್ಯಕಿವಿಯನ್ನು ತಲುಪಿ ಅಲ್ಲಿ ಬಾವು, ಕೀವು ಉಂಟಾಗಿ ಕಿವಿ ಸೋರತೊಡಗುತ್ತದೆ. ಇನ್ನು ಕೆಲವರು ಮನೆಯಲ್ಲಿರುವ ಯಾವುದೋ ಒಂದು ಕಿವಿಗೆ ಹಾಕುವ ಅಥವಾ ಇನ್ನಾವುದೋ ರೀತಿಯ ಔಷಧವನ್ನು ಕಿವಿಗೆ ಹಾಕಿಬಿಡುತ್ತಾರೆ. ಇದು ಸಹ ಬಲು ಅಪಾಯಕಾರಿ. ಏಕೆಂದರೆ ಕಿವಿಗೆ ಹಾಕುವ ಔಷಧಿಗಳಲ್ಲಿಯೇ ಅನೇಕ ರೀತಿಯವು ಇವೆ. ಯಾವುದನ್ನು ಯಾವ ಕಿವಿಯ ರೋಗಕ್ಕೆ ಹಾಕಬೇಕೆಂದು ಎಲ್ಲರಿಗೂ ತಿಳಿದಿರುವುದಿಲ್ಲ. ಹಲವು ಬಾರಿ ಈ ಹಾಕಬಾರದ ಔಷಧಿಗಳು ಒಳಕಿವಿಗೆ ಹೋಗಿ ಅಲ್ಲಿರುವ ನರಕೋಶಗಳನ್ನು ನಾಶಮಾಡುತ್ತವೆ ಹಾಗೂ ಆ ವ್ಯಕ್ತಿ ಸಂಪೂರ್ಣವಾಗಿ, ಶಾಶ್ವತವಾಗಿ ಕಿವುಡನಾಗುತ್ತಾನೆ. ಆದ್ದರಿಂದ ಸ್ವಂತ ಡಾಕ್ಟರಿಕೆಯನ್ನು ಮಾಡುವುದು ಇನ್ನೂ ಅಪಾಯಕಾರಿ. ಕೆಲವರು ಅನೇಕಾನೇಕ ವಸ್ತುಗಳನ್ನು ಕಿವಿಯಲ್ಲಿ ಹಾಕಲು ಸಲಹೆ ಕೊಡುತ್ತಾರೆ. ಕೆಲವರು ಇಂತಹ ಕಿವಿಯಲ್ಲಿ ಹಾಲು ಹಾಕಲು ಹೇಳಿದರೆ ಇನ್ನು ಹಲವು ಮಹಾಶಯರು ನೀರನ್ನೋ, ಪೆಟ್ರೋಲನ್ನೋ, ಮೂತ್ರವನ್ನೋ ಇನ್ನೂ ಏನೇನನ್ನೋ ಹಾಕಲು ಸಲಹೆ ಕೊಡುತ್ತಾರೆ. ಇವೆಲ್ಲ ಶುದ್ಧ ಮೂರ್ಖತನದ ಲಕ್ಷಣಗಳು. ಇನ್ನು ಕೆಲವು ವ್ಯಕ್ತಿಗಳಿಗೆ ಕಿವಿ ಹೊಡೆತದ ನಂತರ ತಲೆ ಸುತ್ತು ಬರಬಹುದು. ಅಂತಹ ವ್ಯಕ್ತಿಗಳು ವಾಹನವನ್ನು ಚಲಾಯಿಸಕೂಡದು.

**ಏನನ್ನು ಮಾಡಬೇಕು :** ಕಿವಿಯಲ್ಲಿ ಏನನ್ನೂ ಹಾಕಗೊಡ ಬಾರದು. ಸ್ನಾನ ಮಾಡುವಾಗ ಕಿವಿಯಲ್ಲಿ ನೀರು ಹೋಗದಂತೆ ಕಿವಿಯಲ್ಲಿ ಹತ್ತಿ ಇಟ್ಟುಕೊಂಡು ಸ್ನಾನ ಮಾಡಬೇಕು. ನಂತರ ವೈದ್ಯರ ಹತ್ತಿರ ಕರೆದು ಕೊಂಡು ಹೋಗಬೇಕು. ಸಾಧ್ಯವಾದ ಮಟ್ಟಿಗೆ ಕಿವಿಯ ವೈದ್ಯರನ್ನು ಸಂಪರ್ಕಿಸುವುದು ಒಳಿತು.

**ಚಿಕಿತ್ಸೆ :** ಕಿವಿಯ ವೈದ್ಯರು ತಮಟೆಯನ್ನು ತಪಾಸಿಸಿ ಕಿವಿಯ ತಮಟೆ ಹರಿದಿದೆಯೋ ಹೇಗೆ ಎಂದು ನೋಡುತ್ತಾರೆ. ಹರಿದಿದ್ದರೆ ಎಷ್ಟೊಂದು ಪ್ರಮಾಣದಲ್ಲಿ ಹಾನಿಯಾಗಿದೆ ಎಂದು ಅಂದಾಜಿಸುತ್ತಾರೆ. ಒಳಗಿನ ನರಕೋಶಗಳಿಗೆ ಹೊಡೆತ ಬಿದ್ದಿದೆಯೋ ಹೇಗೆ ಎಂದು ಪರೀಕ್ಷೆ ಮಾಡುತ್ತಾರೆ. ನಂತರ ಕಿವಿಯ ತಮಟೆ ಅತ್ಯಲ್ಪವಾಗಿ ಹರಿದಿದ್ದರೆ ಅದನ್ನು ಹಾಗೆಯೇ ಬಿಡಲಾಗುತ್ತದೆ. ಸೋಂಕು ಆಗದಂತೆ ಔಷಧಿಗಳನ್ನು ಕೊಡುವುದರಿಂದ ಸ್ವಲ್ಪ ಸಮಯದ ನಂತರ ಅದು ತಂತಾನೇ ಮಾಯುತ್ತದೆ. (ಗುಣವಾಗುತ್ತದೆ). ಆದರೆ ಈ ಕಿವಿಯ ತಮಟೆ ಬಹಳಷ್ಟು ಹರಿದು ಹೋಗಿದ್ದರೆ ಅದಕ್ಕೆ ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತದೆ. ನಡುಕಿವಿಯ ಎಲುವುಗಳು ಮುರಿದಿದ್ದರೆ ಹೊಸ ಎಲುವುಗಳನ್ನು ಜೋಡಿಸಬೇಕಾಗುತ್ತದೆ. ಆದರೆ ಅದೇ ನರಕೋಶಗಳು ಸತ್ತುಹೋಗಿದ್ದರೆ ಕಿವಿಗೆ ಶ್ರವಣಯಂತ್ರ ಅಂದರೆ ಮಷಿನ್ ಹಾಕಿಕೊಳ್ಳಬೇಕಾಗುತ್ತದೆ.

ಅನೇಕ ಮಹಿಳೆಯರು ತಮ್ಮ ಗಂಡಂದಿರ ಹೊಡೆತಕ್ಕೆ ಸಿಕ್ಕು ತಮ್ಮ ಕಿವಿ ತಮಟೆಯನ್ನು ಹರಿದುಕೊಳ್ಳುತ್ತಾರೆ. ಆದರೆ ವೈದ್ಯರ ಹತ್ತಿರ ಅವರು ಕಿವಿಯ ಮೇಲೆ ಏನೋ ಬಿತ್ತೆಂದೋ ಅಥವಾ ಎತ್ತು ಹಾಯಿತೆಂದೋ ಏನೇನೋ ಸುಳ್ಳು ಹೇಳುತ್ತಾರೆ. ಆದರೆ ಅವರ ಹರಿದ ಕಿವಿ ತಮಟೆ ಮಾತ್ರ ವೈದ್ಯರಿಗೆ ಸತ್ಯವನ್ನೇ ಸಾರುತ್ತದೆ. ಇಂತಹ ಹೊಡೆತ ಒಬ್ಬ ವ್ಯಕ್ತಿಯನ್ನೇ ಕಿವುಡನನ್ನಾಗಿ ಮಾಡಬಹುದು. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ವಿಶ್ವಪ್ರಸಿದ್ಧ ವಿಜ್ಞಾನಿ ಥಾಮಸ್ ಆಲ್ವ ಎಡಿಸನ್. ಆತ ಕಿವುಡನಾಗಿಯೂ ಸಹ ಅನೇಕ ಅದ್ಭುತಗಳನ್ನು ಸಾಧಿಸಿದ. ಅದೇ ಆತನ ಕಿವಿಗಳು ಸಂಪೂರ್ಣವಾಗಿ ಸರಿಯಾಗಿದ್ದರೆ ಇನ್ನೆಷ್ಟು ಅದ್ಭುತಗಳನ್ನು ಸಾಧಿಸುತ್ತಿದ್ದನೋ ? ❑






# ಮಹಾ ಮರೆಗುಳಿ ವೈದ್ಯ !

ಆತ ತನ್ನ ಉತ್ತಮ ಸೇವೆಗೆ ಪ್ರಸಿದ್ಧನಾಗಿದ್ದಕ್ಕಿಂತ ಹೆಚ್ಚಾಗಿ, ಮರೆಗುಳಿತನಕ್ಕೆ, ಆದರಿಂದ ಅನಾಹುತಗಳನ್ನುಂಟು ಮಾಡುವುದಕ್ಕೆ ಪ್ರಸಿದ್ಧನಾಗಿದ್ದ. ಎಂಥಾ ಅದ್ಭುತ ಮರೆವು ಆತನಿಗಿತ್ತೆಂದರೆ, ಒಮ್ಮೊಮ್ಮೆ ತನ್ನನ್ನೇ ತಾನು ಮರೆತು ಬಿಡುತ್ತಿದ್ದ! ಅದಕ್ಕೇ ಅವನನ್ನು ಎಲ್ಲರೂ 'ಮರೆಗುಳಿ ವೈದ್ಯ' ಎಂದು ಅವನ ಹಿಂದೆ ಆಡಿಕೊಳ್ಳುತ್ತಿದ್ದರು.

ಒಮ್ಮೆ ಒಂದು ರೋಗಿಯ ಆಪರೇಶನ್ ಮಾಡಬೇಕಾಗಿತ್ತು. ಆ ವೈದ್ಯ ಮಹಾಶಯ ಬಂದವನೇ ಟೇಬಲ್ ಮೇಲಿನ ಪೇಶಂಟ್‌ನ ಹೊಟ್ಟೆಯನ್ನು ಆರಿಂಚು ಕತ್ತರಿಸಿ ಬಿಟ್ಟ. ನರ್ಸ್ ಗಾಬರಿಯಿಂದ ಕೂಗಿದಳು,

''ಡಾಕ್ಟರ್ ನೀವೇನು ಮಾಡಿದಿರಿ ಅಂತ ನಿಮಗೊತ್ತಾ? ನರ್ಸ್ ಹಾಗೆ ಹೇಳಿದ್ದನ್ನು ಕೇಳಿ ಸಿಟ್ಟಿಗೆದ್ದ ಡಾಕ್ಟರ್,

''ನನ್ನನ್ನೇನು ಮುಟ್ಠಾಳಾ ಅಂತ ತಿಳ್ಕೊಂಡಿದೀಯಾ ನೀನು?'' ನಾನು ಮರೆಗುಳಿ ನಿಜ; ಆದರೆ ಅರ್ಧ ನಿಮಿಷದ ಹಿಂದೆ ನಾನೇನು ಮಾಡಿದೆ ಅಂತ ನೆನಪಿಟ್ಟುಕೊಳ್ಳದಿರುವಷ್ಟು ಮೂರ್ಖನಲ್ಲ ನಾನು. ನನಗೆ ಚೆನ್ನಾಗಿ ನೆನಪಿದೆ. ನಾನು ಈ ರೋಗಿಯ ಹೊಟ್ಟೆಯನ್ನು ಕೊಯ್ದಿದ್ದೇನೆ.'' ಎಂದ ಸೀರಿಯಸ್ಸಾಗಿ.

''ಅದಲ್ಲಾ ಡಾಕ್ಕರ್ ಈಗ ನೀವು ಮಾಡಿದ್ದು......'' ಎಂದು ಪೇಚಾಡಿದಳು ನರ್ಸ್.

''ಏನ್ ಹುಡುಗಾಟಾ ಮಾಡ್ತಾ ಇದೀಯಾ? ನೋಡೀಗ ಹ್ಯಾಗೆ ಮತ್ತೆ ಹರಿದ ಹೊಟ್ಟೇನ ಸೇರಿಸ್ತೀನ ಅಂತ'' ಎಂದು ಹೇಳಿ ಹೊಲಿಗೆ ಹಾಕತೊಡಗಿದ.

ರೋಗಿಯ ಕಡೆಯವರು ಆಪರೇಷನ್ ಥೇಟರಿನಿಂದ ಆಚೆ ಬಂದ ಮರೆಗುಳಿಯನ್ನು ಕೇಳಿದರು.

''ಡಾಕ್ಟರ್ ಹ್ಯಾಗಿದಾರೆ ನಮ್ಮ ಜಮಾನ್ರು?''

''ಡೋಂಟ್ ವರೀ....... ಆಪರೇಷನ್ ಈಸ್ ಸಕ್ಸಸ್. ನೋಡ್ತಾ ಇರಿ, ಇನ್ಮೇಲೆ ನಿಮ್ಮ ಜಮಾನ್ರು ಹೊಟ್ಟೆ ನೋವು ಅನ್ನೋ ಪದಾನೇ ಮರೆತು ಬಿಡ್ತಾರೆ'' ಅಂದ ಹೆಮ್ಮೆಯಿಂದ.

''ಆದರೆ ಡಾಕ್ಟರ್..... ನಮ್ಮ ಜಮಾನ್ರಿಗೆ ಇದ್ದದ್ದು ಗಂಟಲಿನ ತೊಂದರೆ...'' ಅಂದಳು ಭಯದಿಂದ.

''ಹೌದಾ! ಮತ್ತೆ ನಾನ್ಯಾಕೆ ಅವನ ಹೊಟ್ಟೆಯ ಆಪರೇಷನ್ ಮಾಡಿದೆ?'' ಎಂದು ತಲೆ ಕೆರೆದುಕೊಂಡ. ಥಟ್ಟನೇ ಏನೋ ನೆನಪಾಗಿ,

''ನರ್ಸ್....'' ಎಂದು ಕಿರುಚಿದ.

ಓಡಿ ಬಂದ ನರ್ಸ್ ಗಾಬರಿಯಿಂದ ಕೇಳಿದಳು

''ಏನಾಯ್ತು ಡಾಕ್ಟರ್?''

''ನನಗೇನೂ ಆಗಿಲ್ಲ. ನಿಮಗೆಲ್ಲಾ ಏನೋ ಆಗಿದೆ. ಶುದ್ಧ ಅಪ್ರಯೋಜಕರು ನೀವೆಲ್ಲಾ. ಒಂದಿಷ್ಟೂ ಜವಾಬ್ದಾರಿ ಇಲ್ಲ ನಿಮಗೆ, ನಾನ್ಸೆನ್ಸ್. ನಾನು ಆತನ ಗಂಟಲಿಗೆ ಬದಲಾಗಿ ಹೊಟ್ಟೆ ಕೊಯ್ತಾ ಇದ್ರೆ ನೋಡ್ಕೊಂಡು ಸುಮ್ನೇ ಇದ್ರಲ್ಲಾ...'' ಎಂದು ಕೂಗಾಡತೊಡಗಿದ. ನರ್ಸ್ ತಲೆ ತಗ್ಗಿಸಿ ''ಸಾರಿ ಸರ್....!'' ಅಂದಳು.

''ನೀನು ಸಾರೀ ಹೇಳೋದ್ರಿಂದ ಏನು ಲಾಭ? ಬೇಗ ಆಪರೇಷನ್ನಿಗೆ ರೆಡಿ ಮಾಡು. ಅವನ ಗಂಟಲನ್ನು ಕತ್ತರಿಸಬೇಕು'' ಅಂದು ಒಳನಡೆದ.

''ನರ್ಸ್ ಎಲ್ಲಾ ರೆಡಿ ಮಾಡಿ, ಮೆಲ್ಲನೆ ಹೇಳಿದಳು ''ಡಾಕ್ಟರ್ ಕತ್ತರಿ ಕಾಣ್ತಾ ಇಲ್ಲ''.

''ವಾಟ್! ಕತ್ತರಿ ಕಾಣ್ತಾ ಇಲ್ವಾ? ಮೈಮೇಲೆ ಪ್ರಜ್ಞೆ ಇರ್ಬೇಕು ಅಂತ ಅದಕ್ಕೇ ಹೇಳೋದು. ನನಗೆ ಸರಿಯಾಗಿ ನೆನಪಿದೆ, ಅದಲಿದೆ ಅಂತ. ಮೊದಲು ನಾವೀಗ ಅವನ ಹೊಟ್ಟೆ ಕೊಯ್ಯಬೇಕು. ಕತ್ತರಿ ತಾನಾಗೇ ಸಿಗುತ್ತೆ.''

ಎಂದು ಹೇಳಿ ಚಾಕೂ ಕೈಗೆತ್ತಿಕೊಂಡ. ಆಗ ನರ್ಸ್ ಸೋತ ದನಿಯಲ್ಲಿ ಹೇಳಿದಳು,

''ಡಾಕ್ಟರ್ ಪೇಶಂಟ್ ಉಸಿರಾಡ್ತಾ ಇಲ್ಲ''

''ವೆರೀ ಗುಡ್. ಈಗ ಆತನ ಹೊಟ್ಟೆ ಕೊಯ್ಯಲು ಇನ್ನೂ ಅನುಕೂಲವಾದಂತಾಯ್ತು. ಅಂದ ಹಾಗೆ ಇವನ ಹೊಟ್ಟೆಗೇನಾಗಿದೆ?'' ಅಂದ.

ನರ್ಸ್ ಕಣ್ಣು ಬೆಳ್ಳಗೆ ಮಾಡಿ ಬಿದ್ದು ಬಿಟ್ಟಳು.

♦ ಪುಷ್ಪಿ

Edited, Printed, Published and Owned by : Adanagouda T. Patil
# 940, I Floor, 8th 'B' Main, 3rd Block, 3rd Stage, Basaveshwaranagara, Bangalore-560 079 Ph: 3357198
Printed at: DIKSSOCHI PRINTER # 97, West of Chord Road, 2nd Block, 3rd Stage, Basaveshwaranagara, BANGALORE - 560 079. Ph: 3386606

# ಸೋನೋಗ್ರಾಫಿ ಮತ್ತು ಗರ್ಭಿಣಿಯರು

ಸಂಭ್ರಮದ ಗುಟ್ಟು....



ಸೋನೋಗ್ರಾಫಿ ಒಂದು ಪರೀಕ್ಷೆ. ಇದನ್ನು ನಡೆಸಲು ಅಲ್ಟ್ರಾ ಸೋನೋಗ್ರಾಮ್ ಎಂಬ ಉಪಕರಣ ಬೇಕು. ಈ ಉಪಕರಣದಲ್ಲಿ ಅತಿಸೂಕ್ಷ್ಮವಾದ ತರಂಗಗಳನ್ನು ಹುಟ್ಟಿಸುತ್ತಾರೆ. ಇವುಗಳನ್ನು ದೇಹದಲ್ಲಿ ಚಲಿಸುವಂತೆ ಮಾಡುತ್ತಾರೆ. ದೇಹ ಸೇರಿದ ತರಂಗಗಳು ಪ್ರತಿಫಲನ ಹೊಂದಿ ಮರಳುತ್ತವೆ. ಇಂಥ ತರಂಗಗಳನ್ನು ಹಿಡಿದು ಅವು ಕಾಣುವಂತೆ ಮಾಡುತ್ತಾರೆ. ಗರ್ಭದಲ್ಲಿಯ ಶಿಶು, ಶಿಶುವಿನ ಅಂಗಾಂಶಗಳೂ ಕಾಣುತ್ತವೆ. ಅಂಗಾಂಶಗಳಲ್ಲಿಯ ವಿಕಾರಗಳನ್ನು ಗುರುತಿಸಲು ಸಾಧ್ಯ. ದೇಹದೊಳಗಿನ ಗಂಟು, ಕಲ್ಲು, ಹರಳು, ದ್ರವ ಇತ್ಯಾದಿಗಳನ್ನು ಪತ್ತೆಹಚ್ಚಬಹುದು. ಇತ್ತೀಚೆಗೆ ಈ ಉಪಕರಣ ಎಲ್ಲ ಶಹರಗಳಲ್ಲೂ, ದೊಡ್ಡ ಆಸ್ಪತ್ರೆಗಳಲ್ಲೂ ಸಾಮಾನ್ಯವಾಗಿದೆ. ವಿಜ್ಞಾನದ ಅದ್ಭುತ ಕೊಡುಗೆಗಳಲ್ಲಿ ಇದೂ ಒಂದು.

ಇಂದು ನಾವು ಗರ್ಭಿಣಿಯನ್ನು ಕರೆದುಕೊಂಡು ಯಾವುದೇ ಪ್ರಸೂತಿ ತಜ್ಞರ ಕಡೆಗೆ ಹೋದರೆ ಅವರು ಗರ್ಭಿಣಿಯನ್ನು ಸೋನೋಗ್ರಾಫಿ ಪರೀಕ್ಷೆಗೆ ಗುರಿಪಡಿಸುತ್ತಾರೆ. ಈ ಪರೀಕ್ಷೆ ಎಲ್ಲರಿಗೂ ಕಡ್ಡಾಯ ಎಂಬಂತೆ ಕೆಲವು ವೈದ್ಯರು ಉಪಯೋಗಿಸುತ್ತಿರುವರು. ಅವಶ್ಯಕತೆ ಇದ್ದಾಗ ಮಾತ್ರ ಪ್ರಯೋಗಿಸದೆ ಕಡ್ಡಾಯ ಮಾಡುತ್ತಿರುವುದನ್ನು ಕೆಲವರು ಪ್ರಶ್ನಿಸತೊಡಗಿದರು.

ಸೋನೋಗ್ರಾಫಿ ಪರೀಕ್ಷೆ ಕಡ್ಡಾಯವಾಗಿ ನಡೆಸಿದರೆ ಉತ್ತಮ ಎಂದು ಹೇಳುವ ವೈದ್ಯರ ಪ್ರಕಾರ ಕೆಳಕಾಣಿಸಿದ ವಿಷಯಗಳು ಬೇಗನೇ ನಿಖರವಾಗಿ ಗೊತ್ತಾಗುತ್ತವೆ. ಆಗ ವೈದ್ಯರು ಗರ್ಭಿಣಿಯನ್ನು ಸೂಕ್ತವಾಗಿ ಉಪಚರಿಸಿ ಶಿಶುವಿಗೆ ಹಾಗೂ ಗರ್ಭಿಣಿಗೆ ಏನೂ ಆಗದಂತೆ ನೋಡಬಹುದು.

೧) ಶಿಶುವಿನ ದೇಹದಲ್ಲಿರುವ ವಿಕೃತಿಗಳು ಪತ್ತೆಯಾಗುವುವು.

೨) ಒಂದಕ್ಕಿಂತಾ ಹೆಚ್ಚು ಶಿಶುಗಳು ಇದ್ದರೆ,

೩) ಶಿಶುವು ಸರಿಯಾಗಿ ಬೆಳೆಯದೇ ಹೋದರೆ,

೪) ಮಾಸದ ಬೆಳವಣಿಗೆ, ಬೇರೂರಿಕೆಗಳಲ್ಲಿ ವಿಪರೀತವಾಗಿದ್ದರೆ,

೫) ಶಿಶುವು ಬೆಳೆದ ಗಾತ್ರ ಹಾಗೂ ಗರ್ಭದ ಅವಧಿಗಳ ಹೊಂದಾಣಿಕೆ ಇತ್ಯಾದಿ.

ಗರ್ಭದ ಅವಧಿಗಳ ಹೊಂದಾಣಿಕೆ ಇತ್ಯಾದಿ ವೈದ್ಯರು ಮೇಲಿನ ಸಂಗತಿಗಳ ಬಗ್ಗೆ ಶಂಕೆ ವ್ಯಕ್ತಪಡಿಸಿದರೆ, ಸೋನೋಗ್ರಾಫಿ ಪರೀಕ್ಷೆ ಮಾಡಿಸುವುದು ಒಳ್ಳೆಯದೆಂದು ಕೆಲವರು ವಾದಿಸಿದರೆ, ಇನ್ನುಳಿದವರು ಶಂಕೆ ಬರಲಿ ಬಿಡಲಿ ಪರೀಕ್ಷೆ ಮಾಡಿಸಲೇಬೇಕು ಎಂದು ಅಭಿಪ್ರಾಯಪಡುವರು.

ಈ ಸಂಗತಿಯನ್ನು ನಿಖರಗೊಳಿಸಲು ಇಂಗ್ಲಂಡ್ ಹಾಗೂ ಆಸ್ಟ್ರೇಲಿಯಾ ದೇಶಗಳ ಪ್ರಸೂತಿ ತಜ್ಞರು ಸಂಶೋಧನೆ ಹಮ್ಮಿಕೊಂಡರು.

ಇಂಗ್ಲಂಡ್‌ನಲ್ಲಿಯ ತಜ್ಞರು ತಮ್ಮ ಸಂಶೋಧನೆಗೆ ೧೫೦೦೦ ಗರ್ಭಿಣಿಯರನ್ನು ಆರಿಸಿಕೊಂಡರು. ಇವರನ್ನು ಎರಡು ಗುಂಪುಗಳಲ್ಲಿ ವಿಂಗಡಿಸಿದರು. ಒಂದೊಂದು ಗುಂಪಿನಲ್ಲಿ ೭೫೦೦ ಗರ್ಭಿಣಿಯರು ಸೇರಿಕೊಂಡರು. ಕನಿಷ್ಠ ಪಕ್ಷ ಎರಡು ಸಲ ಪರೀಕ್ಷಿಸಲಾಯಿತು. ಮೊದಲ ಪರೀಕ್ಷೆ ನಾಲ್ಕರಿಂದ ಐದು ತಿಂಗಳಾಗಿದ್ದಾಗ, ಎರಡನೆಯ ಸಲ ಎಂಟರಿಂದ ಒಂಬತ್ತು ತಿಂಗಳುಗಳ ಅವಧಿಯಲ್ಲಿ ಪರೀಕ್ಷಿಸಲಾಯಿತು.

## ಕಿರುಕಸಾಲಿ ಸೊಪ್ಪು

ಈ ಸೊಪ್ಪು ಸ್ವಾಭಾವಿಕವಾಗಿ ಹೊಲ ಹಾಗೂ ತೋಟದಲ್ಲಿ ಬೆಳೆಯುತ್ತದೆ. ಇದರಿಂದ ಪಲ್ಯ ಹಾಗೂ ಸಾರು ತಯಾರಿಸುತ್ತಾರೆ.

ನೂರು ಗ್ರಾಂ ಸೊಪ್ಪಿನಲ್ಲಿರುವ ಪೋಷಕಾಂಶಗಳು

| | | |
|---|---|---|
| ತೇವಾಂಶ | - | ೯೦ ಗ್ರಾಂ |
| ಸಸಾರಜನಕ | - | ೨.೮ ಗ್ರಾಂ |
| ಕೊಬ್ಬು | - | ೦.೩ ಗ್ರಾಂ |
| ಖನಿಜಾಂಶ | - | ೨.೧ ಗ್ರಾಂ |
| ಶರ್ಕರ ಪಿಷ್ಟ | - | ೪.೮ ಗ್ರಾಂ |
| ಸುಣ್ಣ | - | ೨೫೧ ಮಿ. ಗ್ರಾಂ |
| ರಂಜಕ | - | ೫೫ ಮಿ. ಗ್ರಾಂ |
| ಕಬ್ಬಿಣ | - | ೨೭.೩ ಮಿ. ಗ್ರಾಂ |

ಉಪಯೋಗ - ಉರಿಮೂತ್ರದಿಂದ ಬಳಲುವವರು ಕಿರುಕಸಾಲಿ ಸೊಪ್ಪಿನ ರಸಕ್ಕೆ ಜೇಣು ತುಪ್ಪ ಮತ್ತು ನಿಂಬೆರಸ ಬೆರೆಸಿ ಕುಡಿಸುವುದರಿಂದ ಉರಿ ಶಮನವಾಗುತ್ತದೆ.

ಬೇಸಿಗೆಯಲ್ಲಿ ಈ ಸೊಪ್ಪಿನ ಸೇವನೆಯಿಂದ ಶರೀರದಲ್ಲಿನ ಉಷ್ಣ ನಿವಾರಣೆಯಾಗಿ ತಂಪು ದೊರಕುವುದು.

ಮಲಬದ್ಧತೆಯಿರುವವರು ಈ ಸೊಪ್ಪಿನ ಪಲ್ಯ ಸೇವನೆ ಮಾಡಬೇಕು.

ಕಿರುಕಸಾಲಿ ಸೊಪ್ಪಿನ ಸೇವನೆಯಿಂದ ಜೀರ್ಣಶಕ್ತಿ ಹೆಚ್ಚುವುದು.

✤ ವಸುಂಧರಾ ಭೂಪತಿ

ಪರೀಕ್ಷೆಯಿಂದ ಯಾವುದೇ ನ್ಯೂನತೆಗಳು ಕಂಡು ಬಂದರೆ ಸೂಕ್ತವಾಗಿ ಉಪಚರಿಸಲಾಯಿತು.

ಎರಡನೆಯ ಗುಂಪಿನ ಗರ್ಭಿಣಿಯರನ್ನು ಕಡ್ಡಾಯವಾಗಿ ಸೋನೋಗ್ರಾಫಿ ಪರೀಕ್ಷೆಗೆ ಗುರಿಪಡಿಸಿದೆ ಶಂಕೆ ಬಂದಾಗ ಮಾತ್ರ ಪರೀಕ್ಷಿಸಲಾಯಿತು. ಇವರನ್ನೂ ಸೂಕ್ತವಾಗಿ ಉಪಚರಿಸಲಾಯಿತು.

ಎರಡೂ ಗುಂಪಿನ ಫಲಿತಾಂಶಗಳನ್ನು ತುಲನೆ ಮಾಡಿ ನೋಡಿದರೆ ಹೇಳಿಕೊಳ್ಳುವಂಥ ಲಾಭವೂ ಆಗಿದ್ದಿಲ್ಲ. ಹಾನಿಯೂ ಕಂಡಿದ್ದಿಲ್ಲ.

ಇದೇ ಮಾದರಿಯ ಇನ್ನೊಂದು ಪ್ರಯತ್ನ ಆಸ್ಟ್ರೇಲಿಯಾದಲ್ಲಿ ಜರುಗಿತು. ಅವರು ೬೩೭೭ ಗರ್ಭಿಣಿಯರನ್ನು ಪರೀಕ್ಷೆಗೆ ಗುರಿಪಡಿಸಿದ್ದರು. ಅವರ ಫಲಿತಾಂಶವೂ ಇಂಗ್ಲಂಡಿನ ತಂಡದ ಫಲಿತಾಂಶವನ್ನೇ ಹೋಲುತ್ತಿತ್ತು.

ಕಾರಯ ಈ ಎರಡೂ ಸಂಶೋಧನೆಗಳ ಆಧಾರದ ಮೇಲೆ ಸೋನೋಗ್ರಾಫಿ ಕಡ್ಡಾಯ ಪರೀಕ್ಷೆಯಾಗಿ ಉಳಿದಿಲ್ಲ. ವೈದ್ಯರು ಶಂಕೆ ತಳೆದರೆ ಮಾತ್ರ ಸೋನೋಗ್ರಾಫಿ ಮಾಡಿಸುವುದು ಒಳ್ಳೆಯದೆಂದು ಘೋಷಿಸಲಾಯಿತು. ✪

JEEVANAADI SAMAGRA KUTUMBA AROGYA MANJARI
KANNADA MONTHLY

RNI REGD NO. 65817/97
POSTAL REGD NO. BGW 24

# ದಿಕ್ಸೂಚಿ

೧೨೨ ಪುಟಗಳ ಬೃಹತ್ ಸಂಚಿಕೆ

## ಡಿಸೆಂಬರ್ ಸಂಚಿಕೆಯಲ್ಲಿ.....



### ಹರಿಣಿಯ ಮೇಲೆ ಹಲ್ಲೆ

- ವಿವಾದಗ್ರಸ್ತ ಭೋಜನ
- ವನ್ಯಪ್ರಾಣಿ ಬೇಟೆ - ಅಕ್ಷಮ್ಯ ಅಪರಾಧ
- ಐ.ಎಸ್.ಐ. ಕಾರ್ಯಾಚರಣೆ
- ನೊಬೆಲ್ ಪ್ರಶಸ್ತಿ ವಿಜೇತರು
- ಉಲ್ಕಾಪಾತ
- ನ್ಯಾಯಾಧೀಶರ ನೇಮಕಾತಿ
- ಕ್ರೀಡಾದಾಖಲೆಗಳು, ಪರಮಜಿತ್‌ಸಿಂಗ್, ಸಚಿನ್, ಅಜರ್



ನೊಬೆಲ್ ವಿಜೇತರು (ಸಾಹಿತ್ಯ)



ಯುವ ವೃದ್ಧನ ಸಾಹಸ



ಸಸ್ಯ ಪಂಚೇಂದ್ರಿಯಗಳು



ಗಣಕಲೋಕ

**ಕೆ.ಎ.ಎಸ್. ವಿಶೇಷ ಪುಟಗಳು**
**ಸಾಮಾನ್ಯ ಅಧ್ಯಯನ ಪತ್ರಿಕೆ I ಮತ್ತು II**
**ಪ್ರಶ್ನೋತ್ತರಗಳು**